# ಸರ್ವಜ್ಞ ಮತ್ತು ಅಲ್ಲಮ

## ವಚನಗಳ ಓದು

ಸಿ.ಪಿ. ನಾಗರಾಜ

ನಾಗು ಸ್ಮಾರಕ ಪ್ರಕಾಶನ
೭೫, 'ಎ' ಬ್ಲಾಕ್, ೫ ನೆಯ ಕ್ರಾಸ್, ಕೃಷ್ಣ ಗಾರ್ಡನ್
ಆರ್.ವಿ. ಕಾಲೇಜು ಪೋಸ್ಟ್, ಬೆಂಗಳೂರು-೫೬೦೦೫೯

**SARVAJNA MATTU ALLAMA VACHANAGALA ODU :**
by C.P.Nagaraja, Published by Nagu Smaraka Prakashana, 75, `A' Block, 5th Cross, Krishna Garden, R.V. College Post, Bengaluru-560059, Mobile: 9986347521.

First Edition : 2021

Page : 228

Price : Rs. 200/-

Paper : 80gsm Ns Maplitho

Size : Demy 1/8

Copies : 500



ಪುಟಗಳು : 228

ಪ್ರತಿಗಳು : 500

ಬೆಲೆ : ರೂ. 200/-

ಮುಖಪುಟ ವಿನ್ಯಾಸ : ಎಂ.ಎಲ್.ಸೋಮವರದ, ಮಂಡ್ಯ
ಮೊ.9743512174, 8618580924

ಪ್ರತಿಗಳು ದೊರೆಯುತ್ತವೆ:

**ಮುನ್ನೋಟ ಪುಸ್ತಕ ಮಳಿಗೆ**
# 67, ಸೌತ್ ಅವೆನ್ಯೂ ಕಾಂಪ್ಲೆಕ್ಸ್
ಡಿವಿಜಿ ರಸ್ತೆ, ನಾಗಸಂದ್ರ ಸರ್ಕಲ್ ಬಳಿ
ಬಸವನಗುಡಿ, ಬೆಂಗಳೂರು-560004
ದೂರವಾಣಿ: 080-2660 3000

**ಆರ್. ಸುಧೀಂದ್ರ ಕುಮಾರ್**
# 9, 20ನೆಯ ಮೈನ್, 3ನೆಯ ಕ್ರಾಸ್
ವಿಜಯನಗರ 2ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮೈಸೂರು-570017
ಮೊಬೈಲ್: 8892626269

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233

## ನನ್ನ ನುಡಿ

ಈ ಮೊದಲು ಎರಡು ಚಿಕ್ಕ ಪುಸ್ತಕಗಳ ರೂಪದಲ್ಲಿ ಪ್ರಕಟವಾಗಿದ್ದ ಸರ್ವಜ್ಞ ಮತ್ತು ಅಲ್ಲಮನ ವಚನಗಳನ್ನು ಜತೆಗೂಡಿಸಿ, ಈಗ ಒಂದು ದೊಡ್ಡ ಪುಸ್ತಕವಾಗಿ ಪ್ರಕಟಿಸಿದ್ದೇನೆ.

ವಚನಗಳನ್ನು ಓದುತ್ತಿದ್ದಾಗ ನನಗೆ ಮೆಚ್ಚುಗೆಯಾದ ಕೆಲವು ವಚನಗಳನ್ನು ಓದುಗರ ಗಮನಕ್ಕೆ ತರಬೇಕೆಂಬ ಆಸೆಯಾಯಿತು. ವಚನಗಳನ್ನು ಮೊದಲ ಬಾರಿ ಓದುವವರಿಗೆ ನೆರವಾಗಲೆಂಬ ಉದ್ದೇಶದಿಂದ ವಚನದಲ್ಲಿ ಜತೆಗೂಡಿರುವ ಪದಗಳನ್ನು ಬಿಡಿಸಿ ಬರೆದು, ಪದಗಳ ತಿರುಳನ್ನು ತಿಳಿಸಿ ಬರೆದ ಬರಹವನ್ನು ಗುರುಗಳಾದ ಕೆ.ವಿ.ನಾರಾಯಣ ಅವರಿಗೆ ತೋರಿಸಿದೆನು. ಅದನ್ನು ನೋಡಿದ ಅವರು 'ಹೊಸ ತಲೆಮಾರಿನ ಓದುಗರಿಗೆ ಈ ರೀತಿಯ ಬರಹ ಉಪಯೋಗಕ್ಕೆ ಬರಬಹುದು. ಪದಗಳ ತಿರುಳಿನ ಜತೆಗೆ ಪ್ರತಿಯೊಂದು ವಚನದಲ್ಲಿ ಕಂಡು ಬರುವ ಕವಿಯ ಇಂಗಿತವನ್ನು ಕೆಲವು ಸಾಲುಗಳಲ್ಲಿ ಬರೆಯುವುದು ಒಳ್ಳೆಯದು' ಎಂಬ ಸಲಹೆಯನ್ನು ನೀಡಿ, ನನ್ನ ಬರಹಕ್ಕೆ ಮಾರ್ಗದರ್ಶನವನ್ನು ಮಾಡಿದರು.

ಬರಹವನ್ನು ಹೊನಲು ಮಿಂದಾಣಕ್ಕೆ(honalu.net) ಕಳುಹಿಸಿದೆನು. ಹೊನಲು ಮಿಂದಾಣದ ಸಂಪಾದಕ ವರ್ಗದವರು ಸರ್ವಜ್ಞಕವಿಯ ತೊಂಬತ್ತು ವಚನಗಳನ್ನು, ಅಲ್ಲಮನ ಮೂವತ್ತಾರು ವಚನಗಳನ್ನು ಮತ್ತು ನಲವತ್ತು ವಚನಗಳಿಂದ ಆಯ್ದ ಸಾಲುಗಳ ಓದಿನ ಬರಹವನ್ನು ಅನೇಕ ಕಂತುಗಳಲ್ಲಿ ಪ್ರಕಟಿಸಿದರು. ಹೊನಲಿನಲ್ಲಿ ಮೂಡಿ ಬಂದ ಬರಹಕ್ಕೆ ಹೊನಲು ಮಿಂದಾಣದ ಓದುಗ ಬಳಗದವರು ಮೆಚ್ಚುಗೆಯನ್ನು ಸೂಚಿಸಿದರು. ಈ ರೀತಿ ಬರಹ ರೂಪುಗೊಳ್ಳಲು ಗುರುಗಳಾದ ಕೆ.ವಿ. ನಾರಾಯಣ ಅವರ ಮಾರ್ಗದರ್ಶನ, ಹೊನಲು ಮಿಂದಾಣದ ಸಂಪಾದಕ ವರ್ಗ ಮತ್ತು ಓದುಗರು ನೀಡಿದ ಉತ್ತೇಜನವೇ ಕಾರಣವಾಗಿದೆ.

ಈ ಎಲ್ಲಾ ಬರಹಗಳ ಮೊದಲ ಓದುಗಳಾಗಿ ನನ್ನ ಹೆಂಡತಿ ಗಾಯತ್ರಿ ತನ್ನ ಅನಿಸಿಕೆಯನ್ನು ತಿಳಿಸಿದ್ದಾಳೆ. ಬರಹವನ್ನು ಹೊನಲು ಮಿಂದಾಣಕ್ಕೆ ಕಳುಹಿಸುವುದಕ್ಕೆ ಮೊದಲು ಗೆಳೆಯರಾದ ಆರ್.ಲಕ್ಷ್ಮೀನಾರಾಯಣ, ಆರ್.ಚಲಪತಿ, ಬಿ.ಎ.ಅನ್ನದಾನೇಶ್, ಸುಬ್ರಹ್ಮಣ್ಯ ಸ್ವಾಮಿ ಮತ್ತು ಟಿ.ಮಂಜುನಾಥ ಅವರಿಗೆ ಮಿಂಚಂಚೆಯ ಮೂಲಕ ಕಳುಹಿಸುತ್ತಿದ್ದೆನು. ಅವರು ಪ್ರತಿಯೊಂದು ವಚನದ ಟಿಪ್ಪಣಿಯನ್ನು ಪರಿಶೀಲಿಸಿ, ಅದರ ಸರಿ ತಪ್ಪುಗಳನ್ನು ಗಮನಿಸಿ, ತಪ್ಪುಗಳನ್ನು ತಿದ್ದಿ ಸರಿಪಡಿಸಿಕೊಳ್ಳಲು ಸೂಚನೆಗಳನ್ನು ನೀಡುತ್ತಿದ್ದರು. ಈ ಬರಹದ ಕರಡು ಪ್ರತಿಯನ್ನು ನನ್ನ ಗುರು ಹಿರಿಯರು ಮತ್ತು ಗೆಳೆಯರಿಗೆ ಅಂಚೆ ಮೂಲಕ ಕಳುಹಿಸಿದ್ದೆನು. ಅವರೆಲ್ಲರೂ ನೋಡಿ ಉತ್ತೇಜನದ ನುಡಿಗಳನ್ನಾಡಿದ್ದಾರೆ. ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪನವರು 'ಕವಿ ಸರ್ವಜ್ಞ' ಮತ್ತು 'ವಚನಕಾರರ ವಿಚಾರ ಕ್ರಾಂತಿ' ಎಂಬ ಬರಹಗಳಲ್ಲಿ ಹೇಳಿರುವ ಕೆಲವು ನುಡಿಗಳನ್ನು ಮುನ್ನುಡಿಯ ರೂಪದಲ್ಲಿ ಬಳಸಿಕೊಂಡಿದ್ದೇನೆ.

ಗುರು ಸಮಾನರಾದ ಡಿ.ಎನ್.ಶಂಕರ ಬಟ್ ಅವರು ಕನ್ನಡ ಬರಹದಲ್ಲಿ ಬಳಸಬೇಕಾದ ಲಿಪಿಗಳ ಬಗ್ಗೆ ಹೇಳಿರುವ ಸಂಗತಿಗಳನ್ನು ವಚನಗಳಿಗೆ ಟಿಪ್ಪಣಿಯನ್ನು ಬರೆಯುವಾಗ ಗಮನದಲ್ಲಿಟ್ಟುಕೊಂಡಿದ್ದೇನೆ.

ಉತ್ತಂಗಿ ಚೆನ್ನಪ್ಪನವರು, ಎಲ್. ಬಸವರಾಜು ಅವರು ಮತ್ತು ರಾಗೌ (ರಾಮೇಗೌಡ) ಅವರು ಸಂಪಾದಿಸಿರುವ ಸರ್ವಜ್ಞ ವಚನ ಸಂಪುಟಗಳಿಂದ ವಚನಗಳನ್ನು ಆಯ್ದುಕೊಂಡಿದ್ದೇನೆ.

ಎಲ್. ಬಸವರಾಜು ಅವರು ಸಂಪಾದಿಸಿರುವ 'ಅಲ್ಲಮನ ವಚನ ಚಂದ್ರಿಕೆ' ಮತ್ತು ಎಂ.ಎಂ.ಕಲುಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಬಿ.ವ್ಹಿ. ಮಲ್ಲಾಪುರ ಅವರು ಸಂಪಾದಿಸಿರುವ 'ಅಲ್ಲಮ ಪ್ರಭುದೇವರ ವಚನ ಸಂಪುಟ'ಗಳಿಂದ ವಚನಗಳನ್ನು ಆಯ್ದುಕೊಂಡಿದ್ದೇನೆ.

ಸರ್ವಜ್ಞ ಮತ್ತು ಅಲ್ಲಮನ ವಚನಗಳ ಓದಿಗೆ ನೆರವಾದ ಮೇಲ್ಕಂಡ ಎಲ್ಲಾ ಗುರು ಹಿರಿಯರಿಗೆ ಮತ್ತು ಗೆಳೆಯರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಸಿ.ಪಿ. ನಾಗರಾಜ

## ಕವಿ ಸರ್ವಜ್ಞ

ಸರ್ವಜ್ಞ ಕವಿಯ ಕಾಲದೇಶಾದಿ ಸಂಗತಿಗಳನ್ನು ನಾವು ನಿರ್ದಿಷ್ಟವಾಗಿ ಚೌಕಟ್ಟಿಸಿ ಹೇಳಲು ಸಾಧ್ಯವಿಲ್ಲ. ಅವನು ಹುಟ್ಟಿ ಇಂದಿಗೆ ನಾಲ್ಕು ನೂರು ವರ್ಷಗಳ ಮೇಲಾದುವೆಂಬುದೂ ನಮ್ಮ ಕಲ್ಪನೆಯೇ. ಆದರೆ ಇಷ್ಟು ಮಾತ್ರ ನಿಜ. ವಚನಕಾರರ ಕಾಲದಿಂದ ಈಚೆಗೆ ಹದಿನಾರನೆಯ ಶತಮಾನದ ಒಳಗಿನ ಅವಧಿಯಲ್ಲಿ ಇದ್ದಂಥ ವ್ಯಕ್ತಿತ್ವ ಸರ್ವಜ್ಞನದು.

ಸರ್ವಜ್ಞನ ಒಂದೊಂದು ಬಿಡಿ ಬಿಡಿ ಪದ್ಯಕ್ಕೂ ತನ್ನದೇ ಅಸ್ತಿತ್ವವಿದೆ. ಒಟ್ಟಾಗಿ ನೋಡಿದರೆ ಒಂದು ಧೋರಣೆಯಿದೆ. ಆ ಧೋರಣೆ ಮೂಲತಃ ಜೀವನ ಪರವಾಗಿದೆ. ಜೀವನ ವಿಮರ್ಶೆಯಾಗಿದೆ. 'ಸಾಹಿತ್ಯ ಜೀವನದ ವಿಮರ್ಶೆ' (Literature is the criticism of life.) ಎಂಬ ಮ್ಯಾಥ್ಯು ಆರ್ನಾಲ್ಡನ ಮಾತು ಸರ್ವಜ್ಞನಿಗೆ ಅನ್ವಯಿಸುತ್ತದೆ.

ಜಿ.ಎಸ್. ಶಿವರುದ್ರಪ್ಪ

## ವಚನಗಳ ಓದಿಗೆ ನೆರವಾದ ಪುಸ್ತಕಗಳು

1. *ಚೆನ್ನಪ್ಪ ಉತ್ತಂಗಿ (ಸಂ)* : **ಸರ್ವಜ್ಞನ ವಚನಗಳು**
ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿರಸ್ತೆ, ಚಾಮರಾಜಪೇಟೆ,
ಬೆಂಗಳೂರು–560018
ಮುದ್ರಣ 2005.

2. *ಎಲ್. ಬಸವರಾಜು (ಸಂ)* : **ಸರ್ವಜ್ಞನ ವಚನಗಳು**
ಗೀತಾ ಬುಕ್ ಹೌಸ್ ಪ್ರಕಾಶಕರು
ಮೈಸೂರು.
ಮುದ್ರಣ 2002.

3. *ರಾಗೌ (ರಾಮೇಗೌಡ)(ಸಂ)* : **ಸರ್ವಜ್ಞನ ಸಮಗ್ರ ತ್ರಿಪದಿಗಳು**
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ.
ಮುದ್ರಣ 2013.

## ಪರಿವಿಡಿ

೨೧. ಒಳ್ಳಿದರ ಒಡನಿರ್ದು ಕಳ್ಳ ಒಳ್ಳಿದನಕ್ಕು / ೩೧
೨೨. ಒಳ್ಳೆನಿಲ್ಲದ ಊರು ಕಳ್ಳರ ಸಂಗವು / ೩೨
೨೩. ಓದಿ ಬೂದಿಯ ಪೂಸಿ ತೇದು ಕಾವಿಯ ಹೊದೆದು / ೩೩
೨೪. ಕಂಡುದ ನುಡಿಯೆ ಭೂಮಂಡಲ ಮುನಿವುದು / ೩೪
೨೫. ಕಡೆದ ಕಲ್ಲದು ನುಣ್ಪು ಒಡೆದರೆ ದೈವವೇ / ೩೫
೨೬. ಕಣ್ಣು ನಾಲಗೆ ಮನವು ತನ್ನವೆಂದೆನಬೇಡ / ೩೬
೨೭. ಕಲ್ಲು ಕಾಷ್ಠವು ಬೆತ್ತದಲ್ಲಿ ಇಹನೇ ಶಿವನು / ೩೭
೨೮. ಕಿರಿಯಂದಿನ ಪಾಪವರಿತಲ್ಲಿ ಹೋಯಿತ್ತು / ೩೮
೨೯. ಕೇಡನೊಬ್ಬಗೆ ಬಯಸೆ ಕೇಡು ತಪ್ಪದು ತನಗೆ / ೩೯
೩೦. ಕೇಳುವವರಿದ್ದಿಹರೆ ಹೇಳುವುದು ಬುದ್ಧಿಯನು / ೪೦
೩೧. ಕೊಟ್ಟುಂಬ ಕಾಲದಲಿ ಕೊಟ್ಟುಣ್ಣಲೊಲ್ಲದವ / ೪೧
೩೨. ಕೊಟ್ಟುದು ತನಗೆ ಬಯಿಚಿಟ್ಟುದು ಪರರಿಗೆ / ೪೨
೩೩. ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು / ೪೩
೩೪. ಕೋಟಿ ವಿದ್ಯವನೋದಿ ಪಾಟಿ ಮಾಡಿದರೇನು / ೪೪
೩೫. ಕೋಡಿಯನು ಕಟ್ಟಿದರೆ ಕೇಡಿಲ್ಲವಾ ಕೆರೆಗೆ / ೪೫
೩೬. ಕ್ಷಣಮಾತ್ರವಾದೊಡಂ ಗುಣಿಗಳೊಡನಾಡುವುದು / ೪೬
೩೭. ಗುಡಿಯ ಬೋದಿಗೆ ಕಲ್ಲು ನಡುವೆ ರಂಗ ತಾ ಕಲ್ಲು / ೪೭
೩೮. ಜಡೆಯ ಕಟ್ಟಲುಬಹುದು ಕಡವಸವನುಡಬಹುದು / ೪೮
೩೯. ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ / ೪೯
೪೦. ತನ್ನ ದೋಷವ ನೂರ ಬೆನ್ನ ಹಿಂದಕೆ ಇರಿಸಿ / ೫೦
೪೧. ತನ್ನ ಮುಖ ಬೆನ್ನುಗಳು ತನ್ನ ಕಣ್ಣಿಗೆ ಮರೆಯು / ೫೧
೪೨. ತಪ್ಪ ಸಾಧಿಪ ನೃಪನೊಳಿಪ್ಪವನವನೆಗ್ಗ / ೫೨
೪೩. ತೆಂಗಿಗೂ ಹಿರಿಯರಿಗೂ ಹಂಗು ಮಾಡಲು ಬೇಕು / ೫೩
೪೪. ದಂತಪಂಕ್ತಿಗಳೊಳಗೆ ಎಂತಿಕ್ಕು ನಾಲಗೆಯು / ೫೪
೪೫. ಧನಕನಕ ಉಳ್ಳನಕ ದಿನಕರನಂತಿಕ್ಕು / ೫೫
೪೬. ನಡೆವುದೊಂದೆ ಭೂಮಿ ಕುಡಿವುದೊಂದೆ ನೀರು / ೫೬
೪೭. ನರಳುವಗೆ ಕಡುರೋಗ ಮೊರೆವಂಗೆ ರಾಗವು / ೫೭

೧. **ಅಕ್ಕರವ ಕಲಿತಾತ ಒಕ್ಕಲನು ತಿನಕಲಿತ**
**ಲೆಕ್ಕವ ಕಲಿತ ಕರಣಿಕನು ನರಕದಲಿ**
**ಹೊಕ್ಕಿರಲು ಕಲಿತ ಸರ್ವಜ್ಞ.**

**ಕಲಿತ ವಿದ್ಯೆಯಿಂದ ಜನರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಬದಲು, ಕೇಡನ್ನು ಬಗೆಯುವವರ ನೀಚತನವನ್ನು ಹೇಳಲಾಗಿದೆ.**

(ಅಕ್ಕರ=ಲಿಪಿ/ವಿದ್ಯೆ; ಅಕ್ಕರವ=ಓದು ಬರಹವನ್ನು; ಕಲಿತ+ಆತ; ಕಲಿ=ಅರಿಯುವುದು/ತಿಳಿಯುವುದು; ಆತ=ಅವನು; ಕಲಿತಾತ=ಕಲಿತವನು; ಒಕ್ಕಲು=ಸಮಾಜದಲ್ಲಿರುವ ಜನಸಮುದಾಯ/ಜನರು; ಒಕ್ಕಲನು=ಒಕ್ಕಲನ್ನು; ತಿನ+ಕಲಿತ; ತಿನ್+ಅ; ತಿನ್=ಉಣ್ಣು/ನಾಶಪಡಿಸು/ಕೊಲ್ಲು; ತಿನ=ತಿನ್ನಲು; ತಿನಕಲಿತ=ನಾನಾ ಬಗೆಗಳಲ್ಲಿ ಜನರನ್ನು ವಂಚಿಸಿ, ಸುಲಿಗೆ ಮಾಡಿ, ನಾಡಿನ ಸಂಪತ್ತನ್ನು ಲೂಟಿ ಮಾಡುವುದರಲ್ಲಿ ನುರಿತವನಾದ;

ಲೆಕ್ಕ=ಅಂಕಿಸಂಕೆಗಳಿಂದ ಕೂಡಿದ ವ್ಯವಹಾರ; ಲೆಕ್ಕವ ಕಲಿತ=ಕಂದಾಯ ವಸೂಲಿ ಹಾಗೂ ಇನ್ನಿತರ ವ್ಯವಹಾರದ ಲೆಕ್ಕಪತ್ರಗಳನ್ನು ನೋಡಿಕೊಳ್ಳುವ ಕುಶಲತೆ ಹಾಗೂ ಹೊಣೆಗಾರಿಕೆಯುಳ್ಳ; ಕರಣಿಕ=ಶಾನುಭೋಗ/ಕುಲಕರ್ಣಿ/ಗ್ರಾಮ ಲೆಕ್ಕಿಗ; ನರಕ=ಈ ಲೋಕದಲ್ಲಿ ಜನರಿಗೆ ಕೇಡನ್ನು ಬಗೆದು ಸಾವನ್ನಪ್ಪಿದ ವ್ಯಕ್ತಿಯು, ಅನಂತರ ತಾನು ಮಾಡಿದ ಪಾಪದ ಕೆಲಸಗಳಿಗೆ ತಕ್ಕಂತೆ ನಾನಾ ಬಗೆಯ ದಂಡನೆಗಳಿಗೆ ಗುರಿಯಾಗಿ ನರಳುವ ಮತ್ತೊಂದು ಲೋಕದಲ್ಲಿರುವ ಜಾಗ. ಜನರಿಗೆ ಕೇಡನ್ನು ಬಗೆದವರು ಸಂಕಟದ ನೆಲೆಯಾದ ನರಕಕ್ಕೆ, ಒಳಿತನ್ನು ಮಾಡಿದವರು ಆನಂದದ ನೆಲೆಯಾದ ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆಯು ಜನಸಮುದಾಯದ ಮನದಲ್ಲಿದೆ;

ನರಕದಲಿ+ಹೊಕ್ಕು+ಇರಲು=ನರಕದಲ್ಲಿ ಹೋಗಿ ನೆಲಸಲು; ಕಲಿತ=ಸುಳ್ಳು/ಕಪಟ/ಸುಲಿಗೆಗಳಲ್ಲಿ ನಿಪುಣನಾದ.



೨. ಅಡಿಗಳು ಏಳವು ನುಡಿಗಳು ತೋರವು
ಮಡದಿಯರು ಮನಕೆ ಸೊಗಸರು ಕೂಳೊಂದು
ಘಳಿಗೆ ತಪ್ಪಿದರೆ ಸರ್ವಜ್ಞ.

ಹಸಿವನ್ನು ನೀಗಿಸಿ ಜೀವದ ಉಳಿವಿಗೆ ಕಾರಣವಾಗುವ ಕೂಳಿನ ಮಹಿಮೆಯನ್ನು ಕೊಂಡಾಡಲಾಗಿದೆ.

(ಅಡಿ=ಪಾದ/ಹೆಜ್ಜೆ; ಏಳು=ನಿಲ್ಲು; ಅಡಿಗಳು ಏಳವು=ಹೆಜ್ಜೆಗಳನ್ನು ಇಡುವುದಕ್ಕೆ ಆಗುವುದಿಲ್ಲ/ಮೇಲೆದ್ದು ನಡೆಯಲಾಗುವುದಿಲ್ಲ; ತೋರು=ಕಾಣು/ಮನಸ್ಸಿಗೆ ಗೋಚರವಾಗು; ನುಡಿಗಳು ತೋರವು=ಬಾಯಿಂದ ಮಾತುಗಳೇ ಹೊರಡವು/ಉಸಿರು ಕುಗ್ಗಿ ಮಾತಿನ ದನಿಗಳು ಹೊರಬರುವುದಿಲ್ಲ; ಮನಕೆ=ಮನಸ್ಸಿಗೆ; ಮಡದಿ=ಹೆಂಡತಿ/ಹೆಣ್ಣು; ಸೊಗಸು=ಅಂದ/ಚಂದ/ಚೆಲುವು;

ಮಡದಿಯರು ಮನಕೆ ಸೊಗಸರು=ಹೆಣ್ಣುಗಳ ಬಗ್ಗೆ ಯಾವುದೇ ಬಗೆಯ ಒಲವು ನಲಿವಿನ ಮಿಡಿತಗಳು ಮಯ್-ಮನದಲ್ಲಿ ಉಂಟಾಗುವುದಿಲ್ಲ; ಕೂಳು+ಒಂದು; ಕೂಳು=ಅನ್ನ/ತಿನಸು/ಉಣಿಸು; ಒಂದು ಗಳಿಗೆ=ತುಸು/ಕೆಲ ಸಮಯ; ತಪ್ಪು=ದೊರೆಯದಿರು/ಸಿಕ್ಕದಿರು; ಸರ್ವ+ಜ್ಞ; ಸರ್ವ=ಎಲ್ಲ/ಸಮಸ್ತ; ಜ್ಞ=ತಿಳಿದವನು; ಸರ್ವಜ್ಞ=ಎಲ್ಲವನ್ನು ತಿಳಿದವನು/ಕವಿಯ ಅಂಕಿತನಾಮ/ಕವಿಯು ಕಾವ್ಯರಚನೆಗಾಗಿ ಇಟ್ಟುಕೊಂಡಿರುವ ಹೆಸರು.)



೩. ಅನ್ನ ದೇವರಿಗಿಂತ ಇನ್ನು ದೇವರು ಇಲ್ಲ
ಅನ್ನಕ್ಕೆ ಮೇಲು ಹಿರಿದಿಲ್ಲ ಲೋಕಕ್ಕೆ
ಅನ್ನವೇ ಪ್ರಾಣ ಸರ್ವಜ್ಞ.

ಮಾನವನನ್ನು ಒಳಗೊಂಡಂತೆ ಎಲ್ಲಾ ಜೀವಿಗಳ ಉಳಿವಿಗೆ ಕಾರಣವಾದ ಅನ್ನದ ಮಹಿಮೆಯನ್ನು ಈ ವಚನದಲ್ಲಿ ಕೊಂಡಾಡಲಾಗಿದೆ.

(ಅನ್ನ=ಆಹಾರವಾಗಿ ತಿನ್ನುವ ಉಣ್ಣುವ ಎಲ್ಲಾ ಬಗೆಯ ತಿನಸು ಉಣಿಸುಗಳು; ದೇವರ್+ಇಗೆ+ಇಂತ; ದೇವರು=ಜೀವನದಲ್ಲಿ ಬರುವ ಎಡರುತೊಡರುಗಳನ್ನು ನಿವಾರಿಸಿ, ತಮಗೆ ಒಳಿತನ್ನು ಮಾಡಿ ಕಾಪಾಡುವ ವ್ಯಕ್ತಿಯನ್ನು ಇಲ್ಲವೇ ಶಕ್ತಿಯನ್ನು 'ದೇವರು' ಎಂದು ಮಾನವ ಸಮುದಾಯ ನಂಬಿದೆ;

ಅನ್ನ ದೇವರು=ಹಸಿವನ್ನು ತಣಿಸುವ ಅನ್ನವನ್ನೇ ದೇವರೆಂದು ತಿಳಿಯಲಾಗಿದೆ; ಹಿರಿದು+ಇಲ್ಲ; ಹಿರಿದು=ದೊಡ್ಡದು/ಹೆಚ್ಚಿನದು; ಲೋಕಕ್ಕೆ =ಜಗದ ಜೀವಿಗಳ ಉಳಿವಿಗೆ ಬೆಳವಣಿಗೆಗೆ ಮುನ್ನಡೆಗೆ ಹಾಗೂ ಎಲ್ಲ ಬಗೆಯ ಚಟುವಟಿಕೆಗಳಿಗೆ; ಪ್ರಾಣ=ಉಸಿರು/ಜೀವ).



೪. ಅನ್ನವನಿಕ್ಕುವುದು ನನ್ನಿಯ ನುಡಿವುದು
ತನ್ನಂತೆ ಪರರ ಬಗೆವುದು ಸ್ವರ್ಗ ತಾ
ಬಿನ್ನಾಣವಲ್ಲ ಸರ್ವಜ್ಞ.

ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ನಡೆನುಡಿಗಳಿಂದ ನಾವಿರುವ ಎಡೆಯನ್ನೇ ಒಲವು ನಲಿವಿನ ತಾಣವನ್ನಾಗಿ ಮಾಡಬಹುದೆಂಬುದನ್ನು ಹೇಳಲಾಗಿದೆ.

(ಅನ್ನವನ್+ಇಕ್ಕುವುದು; ಇಕ್ಕುವುದು=ನೀಡುವುದು/ಹಾಕುವುದು/ಕೊಡುವುದು; ಅನ್ನವನು ನೀಡುವುದು=ಹಸಿವಿನಿಂದ ಕಂಗೆಟ್ಟವರಿಗೆ ಉಣಿಸನ್ನು ನೀಡುವುದು; ನನ್ನಿ=ನಿಜ/ದಿಟ/ಒಲವು/ವಾಸ್ತವ; ನನ್ನಿಯ ನುಡಿವುದು=ಅಕ್ಕರೆಯಿಂದ ಕೂಡಿದ ಸತ್ಯದ ಮಾತುಗಳನ್ನಾಡುವುದು; ತನ್ನ+ಅಂತೆ; ತನ್ನಂತೆ=ತನ್ನ ಹಾಗೆ; ಪರರ=ಇತರರನ್ನು/ಸಹಮಾನವರನ್ನು; ಬಗೆವುದು=ತಿಳಿಯುವುದು;

ತನ್ನಂತೆ ಪರರ ಬಗೆವುದು=ಇತರರನ್ನು ತನ್ನಂತೆ ಕಾಣುವುದು ಎಂದರೆ ತನ್ನ ಒಳಿತಿಗಾಗಿ ಹಂಬಲಿಸುವಂತೆಯೇ, ಇತರರಿಗೂ ಒಳಿತನ್ನು ಉಂಟುಮಾಡುವ ನಡೆನುಡಿಗಳನ್ನು ಹೊಂದಿರುವುದು;

ಸ್ವರ್ಗ=ನಲಿವು ಮತ್ತು ನೆಮ್ಮದಿಯ ನೆಲೆ/ಈ ಲೋಕದಲ್ಲಿ ಜನರಿಗೆ ಒಳಿತನ್ನು ಮಾಡಿದವರು ಸತ್ತ ನಂತರ ಹೋಗಿ ನೆಲೆಸುವಂತಹ ಮತ್ತೊಂದು ಲೋಕ ಇದೆ ಎಂಬ ಜನ ಸಮುದಾಯದ ನಂಬಿಕೆ; ಬಿನ್ನಾಣವು+ಅಲ್ಲ; ಬಿನ್ನಾಣ=ಚೆಲುವು/ಸೊಬಗು/ಸುಂದರ; ಸ್ವರ್ಗ ತಾ ಬಿನ್ನಾಣವಲ್ಲ=ಮಾನವರು ಒಳ್ಳೆಯ ನಡೆನುಡಿಗಳಿಂದ ಕಟ್ಟುವ ಸಮಾಜದಲ್ಲಿ ಸ್ವರ್ಗಕ್ಕಿಂತಲೂ ಮಿಗಿಲಾದ ನೆಮ್ಮದಿ ಮತ್ತು ನಲಿವು ದೊರೆಯುತ್ತದೆ).



೫. ಆಡದೆ ಮಾಡುವವ ರೂಢಿಯೊಳಗುತ್ತಮನು
ಆಡಿ ಮಾಡುವನು ಮಧ್ಯಮನು ಅಧಮ ತಾ
ನಾಡಿಯೂ ಮಾಡದವ ಸರ್ವಜ್ಞ.

ವ್ಯಕ್ತಿಯೊಬ್ಬನು ಆಡುವ ಮಾತು ಮತ್ತು ಮಾಡುವ ಕೆಲಸದ ರೀತಿಯು, ಅವನ ವ್ಯಕ್ತಿತ್ವವನ್ನು ಹೇಗೆ ರೂಪಿಸುತ್ತದೆ ಎಂಬುದನ್ನು ಹೇಳಲಾಗಿದೆ.

(ಆಡು=ನುಡಿ/ಹೇಳು; ಆಡದೆ=ತಾನು ಮಾಡುವ ಒಳ್ಳೆಯ ಕೆಲಸಗಳನ್ನು ಮೊದಲೇ ಹೆಮ್ಮೆಯಿಂದ ಹೇಳಿಕೊಳ್ಳದೆ; ಮಾಡುವವ=ಮಾಡುವವನು; ರೂಢಿ=ಲೋಕದ ಜನಸಮುದಾಯ/ಸಮಾಜದಲ್ಲಿರುವ ಜನರು; ರೂಢಿಯೊಳಗೆ+ಉತ್ತಮನು=ಲೋಕ/ಸಮಾಜದ ಜನರ ಗುಂಪಿನಲ್ಲಿ ಒಳ್ಳೆಯವನು;

ಆಡಿ ಮಾಡುವನು=ತಾನು ಮಾಡಲಿರುವ ಒಳ್ಳೆಯ ಕೆಲಸಗಳನ್ನು ತಾನೇ ಜಂಬದಿಂದ ಹೊಗಳಿಕೊಂಡು, ಅನಂತರ ಹೇಳಿದಂತೆ ಮಾಡುವವನು; ಮಧ್ಯಮನು=ಒಳ್ಳೆಯ/ಕೆಟ್ಟ ಎರಡು ಗುಣಗಳನ್ನು ಹೊಂದಿರುವವನು;

ಅಧಮ=ನೀಚ/ಕೆಟ್ಟವನು; ತಾನು+ಆಡಿಯೂ=ತಾನು ಮೊದಲು ಹೇಳಿಕೊಂಡಿದ್ದರೂ; ಮಾಡದವ= ಮಾಡನು/ಒಳ್ಳೆಯ ಕೆಲಸವನ್ನು ಮಾಡುವುದಿಲ್ಲ).



೬. ಆರೈದು ನಡೆವವನು ಆರೈದು ನುಡಿವವನು
ಆರೈದು ಅಡಿಯನಿಡುವವನು ಲೋಕಕ್ಕೆ
ಆರಾಧ್ಯನಕ್ಕು ಸರ್ವಜ್ಞ.

ಯಾವುದೇ ಒಂದು ಮಾತನಾಡುವ ಮುನ್ನ ಇಲ್ಲವೇ ಕೆಲಸವನ್ನು ಕಯ್ಗೊಳ್ಳುವ ಮೊದಲು ಚೆನ್ನಾಗಿ ಆಲೋಚಿಸಿ ಮುನ್ನಡೆಯುವವನು ಸಮಾಜದಲ್ಲಿ ಎಲ್ಲರಿಂದ ಒಲವು ನಲಿವು ಮತ್ತು ಮನ್ನಣೆಯನ್ನು ಪಡೆಯುತ್ತಾನೆ ಎಂಬುದನ್ನು ಹೇಳಲಾಗಿದೆ.

(ಆರೈದು=ಆರಯ್+ದು; ಆರಯ್=ಯಾವುದೇ ಒಂದು ಸಂಗತಿಯಿಂದ/ಕೆಲಸದಿಂದ ಉಂಟಾಗಬಹುದಾದ ಒಳಿತು-ಕೆಡುಕುಗಳನ್ನು ಒರೆಹಚ್ಚಿ ನೋಡಿ ಇಲ್ಲವೇ ಸರಿ ತಪ್ಪುಗಳನ್ನು ತಿಳಿದು ನೋಡಿ ಒಳ್ಳೆಯ ನಿಲುವನ್ನು ತೆಗೆದುಕೊಳ್ಳುವುದು;

ನಡೆವವನು=ಕೆಲಸಗಳನ್ನು ಮಾಡುವವನು; ನುಡಿವವನು=ಮಾತನಾಡುವವನು; ಅಡಿಯನ್+ಇಡುವವನು; ಅಡಿ=ಹೆಜ್ಜೆ/ಪಾದ; ಅಡಿಯನಿಡುವವನು=ಕೆಲಸದಲ್ಲಿ/ಮಾತಿನಲ್ಲಿ ತೊಡಗುವವನು; ಲೋಕ=ಜಗತ್ತು/ಪ್ರಪಂಚ;

ಲೋಕಕ್ಕೆ=ಲೋಕದ ವ್ಯವಹಾರಗಳಲ್ಲಿ; ಆರಾಧ್ಯನ್+ಅಕ್ಕು; ಆರಾಧ್ಯ=ಎಲ್ಲರ ಒಲವಿಗೆ ಪಾತ್ರನಾದ/ಮನ್ನಣೆಯನ್ನು ಪಡೆದ ವ್ಯಕ್ತಿ; ಅಕ್ಕು=ಆಗುವನು).



೭. ಆಳಾಗ ಬಲ್ಲವನು ಆಳುವನು ಅರಸಾಗಿ
ಆಳಾಗಿ ಬಾಳಲರಿಯದವನು ಕಡೆಯಲ್ಲಿ
ಹಾಳಾಗಿ ಹೋಹ ಸರ್ವಜ್ಞ.

ತಾನು ಕಯ್ಗೊಳ್ಳುವ ಯಾವುದೇ ಕೆಲಸವನ್ನು ಒಲವು ನಲಿವಿನಿಂದ ಮಾಡಬಲ್ಲವನು ಮಾತ್ರ ಜೀವನವನ್ನು ಚೆನ್ನಾಗಿ ರೂಪಿಸಿಕೊಳ್ಳುತ್ತಾನೆ ಎಂಬುದನ್ನು ಹೇಳಲಾಗಿದೆ.

(ಆಳ್+ಆಗ; ಬಲ್ಲ+ಅವನು; ಬಲ್ಲ=ತಿಳಿದ; ಆಳ್=ದುಡಿಮೆಯಲ್ಲಿ ಒಲವು ಉಳ್ಳವನು; ಆಳಾಗ ಬಲ್ಲವನು=ಮಯ್ ಮನಸ್ಸನ್ನು ಇಡಿಯಾಗಿ ತೊಡಗಿಸಿಕೊಂಡು ಕೆಲಸವನ್ನು ಮಾಡುವವನು;

ಅರಸು+ಆಗಿ; ಅರಸು=ರಾಜ/ದೊರೆ; ಆಳುವನು ಅರಸಾಗಿ=ಸಮಾಜದಲ್ಲಿ ಹೆಚ್ಚಿನ ಮನ್ನಣೆಯನ್ನು ಪಡೆದು ಎಲ್ಲರ ನಡೆನುಡಿಗಳನ್ನು ನಿಯಂತ್ರಿಸುವನು; ಬಾಳಲ್+ಅರಿಯದವನು; ಅರಿ=ತಿಳಿ; ಅರಿಯದವನು=ತಿಳಿಯದವನು;

ಆಳಾಗಿ ಬಾಳಲು ಅರಿಯದವನು=ದುಡಿಮೆಯ ಮೂಲಕ ಜೀವನವನ್ನು ಒಳ್ಳೆಯ ರೀತಿಯಲ್ಲಿ ರೂಪಿಸಿಕೊಳ್ಳಬೇಕೆಂಬ ಬಯಕೆಯಾಗಲಿ/ಗುರಿಯಾಗಲಿ ಇಲ್ಲದವನು; ಕಡೆಯಲ್ಲಿ=ಬದುಕಿನಲ್ಲಿ/ಕೊನೆಯಲ್ಲಿ/ಜೀವನದ ಹಾದಿಯಲ್ಲಿ; ಹಾಳ್+ಆಗಿ; ಹಾಳಾಗಿ=ನಾಶವಾಗಿ; ಹೋಹ=ಹೋಗುವನು).



೮. ಇಚ್ಚೆಯನರಿದಿತ್ತ ನುಚ್ಚೊಂದು ಮಾಣಿಕ್ಯ
ಇಚ್ಚೆಯು ತೀದ ಬಳಿಕಿತ್ತ ಮಾಣಿಕ್ಯ
ನುಚ್ಚಿನಿಂ ಕಷ್ಟ ಸರ್ವಜ್ಞ.

ಇತರರು ಸಂಕಟದಲ್ಲಿ, ಆಪತ್ತಿನಲ್ಲಿ, ನೋವಿನಲ್ಲಿ ಸಿಲುಕಿ ನರಳುತ್ತಿರುವಾಗ, ಅವರ ಅಗತ್ಯವನ್ನು ಅರಿತು ನೀಡುವ ನೆರವಿನ ಬೆಲೆಯು ಬಲು ದೊಡ್ಡದೆಂಬುದನ್ನು ಹೇಳಲಾಗಿದೆ.

(ಇಚ್ಚೆಯನ್+ಅರಿದು+ಇತ್ತ; ಇಚ್ಚೆ=ಆಸೆ/ಬಯಕೆ/ಬೇಡಿಕೆ; ಅರಿದು=ತಿಳಿದು; ಇತ್ತ=ನೀಡಿದ/ಕೊಟ್ಟ; ನುಚ್ಚು+ಒಂದು; ನುಚ್ಚು=ಅಕ್ಕಿ ರಾಗಿ ಜೋಳದ ತರಿ / ಪುಡಿ / ಸಣ್ಣ ಕಣ; ಮಾಣಿಕ್ಯ=ಬೆಲೆಬಾಳುವ ಹರಳು/ನವರತ್ನಗಳಲ್ಲಿ ಒಂದು;

ಇಚ್ಚೆಯನರಿದು=ಮತ್ತೊಬ್ಬರಿಗೆ ಬಂದಿರುವ ಸಂಕಟ/ನೋವು/ಬೇಡಿಕೆಯನ್ನು ತಿಳಿದುಕೊಂಡು; ಇತ್ತ ನುಚ್ಚು=ನೀಡಿದ ಸಣ್ಣ/ತುಸು/ಚಿಕ್ಕ ನೆರವು; ಒಂದು ಮಾಣಿಕ್ಯ=ಅಗತ್ಯವಿದ್ದಾಗ ದೊರೆತ ನೆರವು ಮಾಣಿಕ್ಯದಂತೆ ಬೆಲೆಯುಳ್ಳದ್ದು;

ತೀದ=ತೀರ್+ದ; ತೀರ್=ಮುಗಿದು ಹೋಗು/ಕೊನೆಗೊಳ್ಳು/ಇಲ್ಲವಾಗು; ತೀದ=ಮುಗಿದುಹೋದ ಮೇಲೆ; ಬಳಿಕ+ಇತ್ತ; ಬಳಿಕ=ಅನಂತರ; ಇಚ್ಚೆಯು ತೀರ್ದ ಬಳಿಕ=ಸಂಕಟ/ನೋವು/ಆಪತ್ತಿನ ಕಾಲದಲ್ಲಿ ನೆರವನ್ನು ನೀಡದೆ ಅದು ಕಳೆದ ನಂತರ; ನುಚ್ಚಿನಿಂ=ನುಚ್ಚಿಗಿಂತ; ಕಷ್ಟ=ಕಡೆ/ಕೀಳು).



೯. ಇಟ್ಟಿಯಲಿ ಇರಿದೇರು ನೆಟ್ಟನೊಂದಾಗಿಕ್ಕು
ಕೆಟ್ಟ ನಾಲಿಗೆಯಲಿರಿದೇರು ದಿನದಿನ
ಕಟ್ಟಟ್ಟಿಯೆ ಸುಡುಗು ಸರ್ವಜ್ಞ.

**ಹರಿತವಾದ ಹತಾರದ ಇರಿತದಿಂದ ನಮಗೆ ಉಂಟಾದ ಗಾಯಕ್ಕಿಂತಲೂ ಇತರರು ನಮ್ಮ ಬಗ್ಗೆ ಆಡಿದ ಕೆಟ್ಟಮಾತು ಹೆಚ್ಚಿನ ನೋವನ್ನುಂಟು ಮಾಡುತ್ತದೆ ಎಂಬುದನ್ನು ಹೇಳಲಾಗಿದೆ.**

(ಇಟ್ಟಿಯಲಿ=ಇಟ್ಟಿಯಿಂದ; ಇಟ್ಟಿ=ಈಟಿ/ಹರಿತವಾದ ಮೊನೆಯುಳ್ಳ ಹತಾರ; ಇರಿದ+ಏರು; ಇರಿ=ತಿವಿ/ಚುಚ್ಚು; ಏರು=ಗಾಯ/ಹುಣ್ಣು; ನೆಟ್ಟನೆ+ಒಂದು+ಆಗಿ+ಇಕ್ಕು; ನೆಟ್ಟನೆ=ಸರಿಯಾಗಿ/ಚೆನ್ನಾಗಿ; ನೆಟ್ಟನೊಂದಾಗಿಕ್ಕು=ಕೆಲವಾರು ದಿನಗಳಲ್ಲಿ ಮೊದಲಿನಂತಾಗುತ್ತದೆ/ ಆಗಿದ್ದ ಗಾಯ ಮಾಯುತ್ತದೆ;

ನಾಲಿಗೆಯಲಿ+ಇರಿದ+ಏರು; ಕೆಟ್ಟ ನಾಲಿಗೆ=ಯಾವುದೇ ಒಬ್ಬ ವ್ಯಕ್ತಿಯ/ಸಂಗತಿಯ ಬಗ್ಗೆ ಸದಾಕಾಲ ಹೊಲಸು ಮಾತುಗಳನ್ನೇ ಆಡುವುದು/ಕೇಡಾಗಲಿ ಎಂದು ಶಪಿಸುವುದು; ನಾಲಿಗೆಯಲಿರಿದೇರು=ಮಾತುಗಳ ಮೂಲಕ ನೀಡಿದ ಪೆಟ್ಟು/ಮಾನಸಿಕ ಯಾತನೆ;

ದಿನದಿನ=ಪ್ರತಿನಿತ್ಯವೂ/ಯಾವಾಗಲೂ/ಸದಾ ಕಾಲ; ಕಟ್ಟು+ಅಟ್ಟಿ; ಕಟ್ಟು=ಜತೆಗೂಡಿ/ಆವರಿಸಿ; ಅಟ್ಟಿ=ಅಂಟಿಕೊಂಡು/ಬೆನ್ನುಹತ್ತಿ; ಕಟ್ಟಟ್ಟಿ=ಹಿಂಬಾಲಿಸಿ/ಬೆನ್ನಟ್ಟಿ/ಪದೇಪದೇ ನೆನಪಾಗುತ್ತ; ಸುಡು+ಗು; ಸುಡು=ಬೆಂಕಿಯಲ್ಲಿ ಬೇಯಿಸು/ಸುಟ್ಟುಹಾಕು/ಬೇಗೆಯನ್ನುಂಟುಮಾಡು; ಸುಡುಗು=ನೋಯಿಸುತ್ತಿರುತ್ತದೆ/ಬೇಯಿಸುತ್ತಿರುತ್ತದೆ).



೧೦. ಇದ್ದಲ್ಲಿ ಸಲುವ ಹೋಗಿದ್ದಲ್ಲಿಯೂ ಸಲುವ
ವಿದ್ಯವ ಬಲ್ಲ ಕಡುಜಾಣ ಗಿರಿಯ ಮೇ
ಲಿದ್ದರೂ ಸಲುವ ಸರ್ವಜ್ಞ.

**ಒಳ್ಳೆಯ ಅರಿವನ್ನು ಪಡೆದುಕೊಂಡು ಚೆನ್ನಾಗಿ ಕೆಲಸವನ್ನು ಮಾಡುವ ಕುಶಲತೆಯುಳ್ಳ ವ್ಯಕ್ತಿಯು ಎಲ್ಲಾ ಕಡೆಗಳಲ್ಲಿಯೂ ಮನ್ನಣೆಗೆ ಪಾತ್ರನಾಗುತ್ತಾನೆ ಎಂಬುದನ್ನು ಹೇಳಲಾಗಿದೆ.**

(ಇದ್ದ+ಅಲ್ಲಿ; ಇದ್ದ=ಇರುವ; ಇದ್ದಲ್ಲಿ=ಇರುವ ಜಾಗ/ಊರು/ನೆಲೆಯಲ್ಲಿ; ಸಲುವ=ಎಲ್ಲರಿಂದಲೂ ಮನ್ನಣೆಯನ್ನು ಪಡೆಯುತ್ತಾನೆ/ಎಲ್ಲರಿಗೂ ಬೇಕಾದವನಾಗುತ್ತಾನೆ;

ಹೋಗಿ+ಇದ್ದ+ಅಲ್ಲಿಯೂ; ಹೋಗಿದ್ದಲ್ಲಿಯೂ=ಇರುವ ಎಡೆಯಿಂದ ಮತ್ತೊಂದು ಕಡೆಗೆ ಹೋದರೂ; ವಿದ್ಯೆ=ಯಾವುದೇ ಒಂದು ಸಂಗತಿಯಲ್ಲಿ ಒಳ್ಳೆಯ ತಿಳುವಳಿಕೆ ಮತ್ತು ಕೆಲಸ ಮಾಡುವ ಕುಶಲತೆ;

ಬಲ್ಲ=ತಿಳಿದಿರುವ/ಹೊಂದಿರುವ; ಕಡು=ಹೆಚ್ಚಿನ/ಬಹಳ; ಜಾಣ=ಚತುರ/ವಿವೇಕಿ; ಗಿರಿ=ಬೆಟ್ಟ/ಪರ್ವತ; ಮೇಲೆ+ಇದ್ದರೂ; ಗಿರಿಯ ಮೇಲಿದ್ದರೂ=ಜಗತ್ತಿನಲ್ಲಿ ಯಾವ ಎಡೆಯಲ್ಲೇ ಇದ್ದರೂ/ಎಲ್ಲಿಗೆ ಹೋದರೂ).



೧೧. ಇದ್ದುದನು ಬಚ್ಚಿಟ್ಟು ಹೊದ್ದದನು ಬಯಸುವನು
ಇದ್ದುಣ್ಣದವನ ಬಾಯಲ್ಲಿ ಮಣ್ಣಿನ
ಮುದ್ದೆ ಕಂಡಯ್ಯ ಸರ್ವಜ್ಞ.

**ತನ್ನ ಬಳಿ ಇರುವ ಸಂಪತ್ತನ್ನು ಬಳಸಿಕೊಳ್ಳದೆ ಬಚ್ಚಿಟ್ಟು ಬಾಳ್ವೆ ಮಾಡುವವನಿಗೆ ಉಂಟಾಗುವ ಕೆಟ್ಟಗತಿಯನ್ನು ಹೇಳಲಾಗಿದೆ.**

(ಇದ್ದುದನು=ಇರುವುದನ್ನು; ಬಚ್ಚಿಟ್ಟು=ಅಡಗಿಸಿಟ್ಟು/ಯಾರಿಗೂ ಕಾಣದಂತೆ ಮರೆಯಾಗಿಸಿ; ಹೊದ್ದು=ದೊರಕು/ಸಿಗು; ಹೊದ್ದದನು=ದೊರೆಯದಿರುವುದನ್ನು/ಸಿಕ್ಕದಿರುವುದನ್ನು; ಬಯಸುವನು=ಇಚ್ಚಿಸುವನು/ಹಂಬಲಿಸುವನು;

ಇದ್ದು+ಉಣ್ಣದ+ಅವನ; ಇದ್ದುಣ್ಣದವನು=ತನ್ನ ಬಳಿ ಇರುವ ಸಂಪತ್ತಿನಿಂದ ಒಲವು ನಲಿವು ನೆಮ್ಮದಿಯ ಬಾಳ್ವೆಯನ್ನು ನಡೆಸದವನು; ಬಾಯ್+ಅಲ್ಲಿ; ಮಣ್ಣಿನ ಮುದ್ದೆ=ಮಣ್ಣಿನ ಹೆಂಟೆ/ಉಂಡೆ;

ಬಾಯಲ್ಲಿ ಮಣ್ಣಿನ ಮುದ್ದೆ=ಸಾವನ್ನಪ್ಪಿದ ವ್ಯಕ್ತಿಯ ಹೆಣವನ್ನು ಗುಂಡಿಯಲ್ಲಿಟ್ಟು ಮಣ್ಣು ಮುಚ್ಚತೊಡಗಿದಾಗ ಹೆಣದ ಬಾಯಲ್ಲಿ ಮಣ್ಣು ತುಂಬಿಕೊಳ್ಳುವುದು/ಜೀವನದಲ್ಲಿ ಉಂಡು ತಿಂದು ನಕ್ಕು ನಲಿದು ಆನಂದವನ್ನು ಪಡೆಯದೆ ಸಾವನ್ನಪ್ಪಿದವನು ಎಂಬ ತಿರುಳಿನಲ್ಲಿ ಈ ಪದಕಂತೆಯು ಬಳಕೆಯಾಗಿದೆ;

ಕಂಡ+ಅಯ್ಯ; ಕಂಡ=ತಿಳಿದುನೋಡು/ಕಾಣು; ಅಯ್ಯ=ಗಂಡಸರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ).



೧೨. **ಇದ್ದೂರ ಹಗೆ ಹೊಲ್ಲ ಬಿದ್ದ ಮಾಳಿಗೆ ಹೊಲ್ಲ**
**ತಿದ್ದದ ಎತ್ತ ಕೊಳ ಹೊಲ್ಲ ಮನೆಯೊಳಗೆ**
**ಗುದ್ದಾಟ ಹೊಲ್ಲ ಸರ್ವಜ್ಞ.**

**ನೆಮ್ಮದಿಯಿಂದ ಬಾಳ್ವೆಯನ್ನು ಮಾಡಲು ಯಾವ ಬಗೆಯ ಎಚ್ಚರದ ನಡೆನುಡಿಗಳನ್ನು ಹೊಂದಿರಬೇಕು ಎಂಬುದನ್ನು ಹೇಳಲಾಗಿದೆ.**

(ಇದ್ದ+ಊರ; ಇದ್ದ=ಇರುವ/ಈಗ ವಾಸ ಮಾಡುತ್ತಿರುವ; ಊರ=ಊರಿನ; ಹಗೆ=ಶತ್ರು; ಹೊಲ್ಲ=ಬೇಡ; ಇದ್ದೂರ ಹಗೆ ಹೊಲ್ಲ=ನಾವು ಬಾಳುತ್ತಿರುವ ಪರಿಸರದಲ್ಲಿರುವ ವ್ಯಕ್ತಿಗಳ ಜತೆಯಲ್ಲಿ ಹಗೆತನವನ್ನು ಕಟ್ಟಿಕೊಳ್ಳಬಾರದು;

ಮಾಳಿಗೆ=ಮಣ್ಣಿನ/ಹುಲ್ಲಿನ ಹೊದಿಕೆ–ಮನೆಯ ಚಾವಣಿ; ಬಿದ್ದ ಮಾಳಿಗೆ=ಮುರಿದು ಬಿದ್ದಿರುವ/ಹಾಳಾಗಿರುವ ಮನೆ; ತಿದ್ದು=ಸರಿಪಡಿಸು/ಪಳಗಿಸು/ಹತೋಟಿಯಲ್ಲಿಡು; ಎತ್ತು+ಅ; ಎತ್ತು=ಬೇಸಾಯ ಮಾಡಲು ಬಳಸುವ ಪ್ರಾಣಿಯಾದ ದನ; ಎತ್ತ=ಎತ್ತನ್ನು; ಕೊಳ್=ಪಡೆ/ಹೊಂದು/ತೆಗೆದುಕೊ;

ತಿದ್ದದ ಎತ್ತ ಕೊಳ ಹೊಲ್ಲ=ಪಳಗಿಸಿ ದುಡಿಸಿಕೊಳ್ಳಲಾಗದ ಎತ್ತನ್ನು ಕೊಂಡುಕೊಳ್ಳಬಾರದು; ಮನೆ+ಒಳಗೆ; ಗುದ್ದು+ಆಟ; ಗುದ್ದು=ಮುಂಗಯ್ ಇಂದ ಹೊಡೆ/ಬಡಿ/ಪೆಟ್ಟು ನೀಡು;

ಮನೆಯೊಳಗೆ ಗುದ್ದಾಟ=ಕುಟುಂಬದಲ್ಲಿನ ವ್ಯಕ್ತಿಗಳು ಪರಸ್ಪರ ಒಲವು ನಲಿವು ನಂಬಿಕೆಗಳನ್ನು ಕಳೆದುಕೊಂಡು ಜಗಳವಾಡುವುದು).



೧೩.	ಉತ್ತಮ ವಿದ್ಯವನೋದಿ ಮತ್ತೆ ಅನುಭವಗಂಡು
ಚಿತ್ತದ ಕಳವಳವ ನಿಲಿಸದ ಮನುಜನು
ಕತ್ತೆ ಕಂಡಯ್ಯ ಸರ್ವಜ್ಞ.

**ಒಂದಲ್ಲ ಒಂದು ಬಗೆಯ ಆತಂಕದಿಂದ ಯಾವಾಗಲೂ ನರಳುತ್ತಿರುವ ವಿದ್ಯಾವಂತನ ವ್ಯಕ್ತಿತ್ವದ ಮಿತಿಯನ್ನು ಹೇಳಲಾಗಿದೆ.**

(ವಿದ್ಯವನ್+ಓದಿ; ಉತ್ತಮ ವಿದ್ಯೆ=ಮಾನವನ ನಡೆನುಡಿಯಲ್ಲಿ ಮತ್ತು ಸಮಾಜದ ಆಗುಹೋಗುಗಳಲ್ಲಿ ಯಾವುದು ಸರಿ/ತಪ್ಪು; ಯಾವುದು ಒಳ್ಳೆಯದು/ಕೆಟ್ಟುದ್ದು; ಯಾವುದನ್ನು ಮಾಡಬೇಕು/ಮಾಡಬಾರದು ಎಂಬ ವಿವೇಕವನ್ನು ನೀಡುವ ತಿಳುವಳಿಕೆ;

ಮತ್ತೆ=ಇದರೊಡನೆ; ಅನುಭವ+ಕಂಡು; ಅನುಭವ=ನಿತ್ಯಜೀವನದಲ್ಲಿನ ಆಗುಹೋಗುಗಳಿಂದ ಪಡೆಯುವ ನೋವು ನಲಿವು; ಕಂಡು=ನೋಡಿ/ತಿಳಿದು; ಚಿತ್ತ=ಮನಸ್ಸು; ಕಳವಳ=ಸಂಕಟ/ವೇದನೆ/ಬೇಗುದಿ; ಚಿತ್ತದ ಕಳವಳ=ನಾನಾ ಬಗೆಯ ಆತಂಕ/ಒತ್ತಡ/ಹೆದರಿಕೆಯಿಂದ ಮನಸ್ಸು ಸದಾಕಾಲ ಪರಿತಪಿಸುತ್ತಿರುವುದು; ನಿಲಿಸದ=ನಿವಾರಿಸಿಕೊಳ್ಳದ/ಹತೋಟಿಯಲ್ಲಿ ಇಡಲಾಗದ;

ಮನುಜ=ವ್ಯಕ್ತಿ; ಕತ್ತೆ=ಜೀವನವನ್ನು ಸರಿಯಾಗಿ ರೂಪಿಸಿಕೊಳ್ಳಲಾಗದೆ ನೆಮ್ಮದಿಗೇಡಿತನದಿಂದ ತೊಳಲಾಡುವ ಬಗೆಯನ್ನು ಸೂಚಿಸುವುದಕ್ಕೆ ಕತ್ತೆ ಎಂಬ ಪ್ರಾಣಿಯನ್ನು ಒಂದು ರೂಪಕವಾಗಿ ಬಳಸಲಾಗಿದೆ/ವ್ಯಕ್ತಿಯ ದಡ್ಡತನವನ್ನು ಸೂಚಿಸಲು 'ಕತ್ತೆ' ಎಂಬ ಪದವನ್ನು ಬಯ್ಗುಳವಾಗಿಯು ಬಳಸಲಾಗುತ್ತದೆ;

ಕಂಡ+ಅಯ್ಯ; ಕಂಡ=ತಿಳಿದುನೋಡು/ಕಾಣು; ಅಯ್ಯ=ಗಂಡಸರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ).



೧೪. ಉಳ್ಳಲ್ಲಿ ಉಣಲೊಲ್ಲ ಉಳ್ಳಲ್ಲಿ ಉಡಲೊಲ್ಲ
ಉಳ್ಳಲ್ಲಿ ದಾನಗೊಡಲೊಲ್ಲದವನೊಡವೆ
ಕಳ್ಳನಿಗೆ ನೃಪಗೆ ಸರ್ವಜ್ಞ.

ಸಿರಿಸಂಪದಗಳು ಇರುವಾಗ ನಲಿವು ನೆಮ್ಮದಿಯ ಬದುಕನ್ನು ನಡೆಸದೆ, ಇತರರಿಗೂ ನೆರವಾಗದೆ, ಎಲ್ಲವನ್ನೂ ಕೂಡಿಟ್ಟುಕೊಂಡಿರುವವನ ಸಂಪತ್ತು ಇಂದಲ್ಲ ನಾಳೆ ಅನ್ಯರ ಪಾಲಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಉಳ್ಳ್+ಅಲ್ಲಿ; ಉಳ್=ಇರು; ಉಳ್ಳಲ್ಲಿ=ಇರುವಾಗ/ಜೀವನಕ್ಕೆ ಅಗತ್ಯವಾದ ಎಲ್ಲಾ ಬಗೆಯ ಅನುಕೂಲಗಳು ಇರುವಾಗ; ಉಣಲ್+ಒಲ್ಲ; ಉಣಲು=ತಿನ್ನಲು; ಒಲ್+ಅ=ಒಲ್ಲ; ಒಲ್=ಬಯಸು/ಇಚ್ಚಿಸು/ಆಸೆಪಡು; ಒಲ್ಲ=ಬಯಸುವುದಿಲ್ಲ;

ಉಣಲೊಲ್ಲ=ತನ್ನ ಬಳಿ ಇರುವ ಸಂಪತ್ತಿನಿಂದ ಯಾವುದೇ ಬಗೆಯ ಒಲವು ನಲಿವಿನ ಜೀವನವನ್ನು ನಡೆಸದೆ ಗಳಿಸಿದ ಸಂಪತ್ತೆಲ್ಲವನ್ನೂ ಕೂಡಿಡುವುದರಲ್ಲೇ ಮಗ್ನನಾಗಿರುತ್ತಾನೆ;

ಉಡಲ್+ಒಲ್ಲ; ಉಡು=ಒಳ್ಳೆಯ ಬಟ್ಟೆ ಬರೆಗಳನ್ನು ಹಾಕಿಕೊಳ್ಳುವುದು; ದಾನ+ಕೊಡಲ್+ಒಲ್ಲದವನ+ಒಡವೆ; ದಾನ=ಒಡವೆ ವಸ್ತುಗಳನ್ನು ಇತರರಿಗೆ ಬಿಟ್ಟಿಯಾಗಿ ನೀಡುವುದು/ಬಡತನದಿಂದ ನರಳುತ್ತಿರುವವರಿಗೆ ನೆರವಾಗುವಂತೆ ವಸ್ತುಗಳನ್ನು ನೀಡುವುದು; ಅವನ=ಈ ರೀತಿ ಕೂಡಿಟ್ಟವನ/ಜಿಪುಣನ; ಒಡವೆ=ಆಸ್ತಿಪಾಸ್ತಿ/ಹಣ/ಚಿನ್ನಬೆಳ್ಳಿಯ ತೊಡುಗೆ; ಕಳ್ಳನಿಗೆ=ಕಳ್ಳನ ಪಾಲು; ನೃಪಗೆ=ದೊರೆಯ ಪಾಲು/ದೊರೆಯು ಮುಟ್ಟುಗೋಲು ಹಾಕಿಕೊಳ್ಳುತ್ತಾನೆ).



೧೫. ಉಳ್ಳಾತ ನುಡಿದರೆ ಎಳ್ಳ ಮೇಲೆ ಜೇನಿಟ್ಟಂತೆ
ಇಲ್ಲದ ಬಡವ ನುಡಿದರೆ ಬಾಯಿ ತುಂಬ
ಹೊಳ್ಳ ಹೊಯ್ದಂತೆ ಸರ್ವಜ್ಞ.

ಸಮಾಜದಲ್ಲಿ ಸಿರಿವಂತರ ಮಾತಿಗೆ ಮೆಚ್ಚುಗೆಯನ್ನು ಮತ್ತು ಬಡವರ ಮಾತಿಗೆ ತಿರಸ್ಕಾರವನ್ನು ತೋರಿಸುವ ಬಗೆಯನ್ನು ಹೇಳಲಾಗಿದೆ.

(ಉಳ್+ಆತ; ಉಳ್=ಇರು; ಆತ=ಅವನು; ಉಳ್ಳಾತ=ಸಿರಿಸಂಪದಗಳನ್ನು ಹೊಂದಿರುವವನು/ಆಸ್ತಿಪಾಸ್ತಿ ಹಣಕಾಸುಳ್ಳವನು; ನುಡಿದರೆ=ಮಾತನಾಡಿದರೆ; ಎಳ್ಳು+ಅ; ಎಳ್ಳು=ಜಿಡ್ಡಿನ ಅಂಶವುಳ್ಳ ಕಾಳು; ಎಳ್ಳ=ಎಳ್ಳಿನ; ಜೇನು+ಇಟ್ಟ+ಅಂತೆ;

ಜೇನು=ಹೂವುಗಳ ಮಕರಂದವನ್ನು ಹೀರಿಕೊಂಡು ಜೇನುಹುಳುಗಳು ತಯಾರಿಸಿದ ತುಪ್ಪ; ಎಳ್ಳ ಮೇಲೆ ಜೇನಿಟ್ಟಂತೆ=ಎಳ್ಳು ಮತ್ತು ಜೇನುತುಪ್ಪವನ್ನು ಜತೆಗೂಡಿಸಿಕೊಂಡು ತಿಂದಾಗ, ಅದರ ರುಚಿ ಹೆಚ್ಚಾಗುವಂತೆ ಸಿರಿವಂತರಾಡುವ ಮಾತು ಇಂಪಾಗಿರುತ್ತವೆ;

ಇಲ್ಲದ=ಸಿರಿವಂತಿಕೆಯಿಲ್ಲದ/ದಟ್ಟದರಿದ್ರನಾದ; ಬಡವ=ಆಸ್ತಿಪಾಸ್ತಿ/ಹಣಕಾಸು ಇಲ್ಲದವನು; ಹೊಳ್ಳು+ಅ; ಹೊಳ್ಳು=ಜಳ್ಳು/ಪೊಳ್ಳು/ಒಳಗೆ ತಿರುಳಿಲ್ಲದ ಕಾಳು/ತವಡು; ಹೊಯ್+ದ+ಅಂತೆ; ಹೊಯ್=ಹಾಕು/ಸುರಿ;

ಬಾಯಿ ತುಂಬ ಹೊಳ್ಳ ಹೊಯ್ದಂತೆ=ಒಳಗೆ ತಿರುಳಿಲ್ಲದ ಕಾಳನ್ನು/ಹೊಟ್ಟನ್ನು ಬಾಯಿಗೆ ಹಾಕಿಕೊಂಡು ಅಗಿದು ಬೇಸರದಿಂದ ಹೊರಕ್ಕೆ ಉಗಿಯುವಂತೆ ಬಡವರ ಮಾತನ್ನು ಕಡೆಗಣಿಸುತ್ತಾರೆ).



೧೬ ಎದ್ದೆದ್ದು ಮಾತಾಡದಿರು ಎದ್ದೆದ್ದು ನಿಲ್ಲದಿರು
ಇದ್ದ ಮಾನಸರ ಜರಿಯದಿರು ಓಲಗದೊ
ಳಿದ್ದನಿಸು ಹೊತ್ತು ಸರ್ವಜ್ಞ.

ಜನರು ಒಂದೆಡೆ ಸೇರಿ ನಡೆಸುವ ಮಾತುಕತೆಗಳಲ್ಲಿ ಪಾಲ್ಗೊಂಡಾಗ ವ್ಯಕ್ತಿಯ ಸಾಮಾಜಿಕ ನಡೆನುಡಿಗಳು ಹೇಗಿರಬಾರದೆಂಬುದನ್ನು ಹೇಳಲಾಗಿದೆ.

(ಎದ್ದು+ಎದ್ದು; ಏಳ್+ದ್+ಉ=ಏಳ್ದು–ಎದ್ದು; ಮಾತು+ಆಡದೆ+ಇರು; ನಿಲ್ಲದೆ+ಇರು; ಇದ್ದ=ಇರುವ; ಮಾನಸ=ಮಾನವ; ಮಾನಸರ=ವ್ಯಕ್ತಿಗಳನ್ನು/ಜನರನ್ನು;

ಜರಿಯದೆ+ಇರು; ಜರಿ=ನಿಂದಿಸು/ತೆಗಳು/ಅಲ್ಲಗಳೆ; ಓಲಗದ+ಒಳು+ಇದ್ದ+ ಅನಿಸು; ಓಲಗ=ದರ್ಬಾರು/ಉತ್ಸವ/ಕೂಟ/ಗೋಷ್ಠಿ; ಒಳು=ಅಲ್ಲಿ;

ಅನಿಸು ಹೊತ್ತು=ಆ ವೇಳೆಯಲ್ಲಿ / ಆ ಸಮಯದಲ್ಲಿ ; ಹೊತ್ತು= ಕಾಲ/ ಸಮಯ/ವೇಳೆ; ಇದ್ದ ಮಾನಸರ ಜರಿಯದಿರು=ಓಲಗದಲ್ಲಿ ನೆರೆದಿರುವವರನ್ನು ನಿಂದಿಸಬೇಡ/ಕಡೆಗಣಿಸಿ ನುಡಿಯಬೇಡ/ಅಲ್ಲಗಳೆಯಬೇಡ).



೧೭ ಒಡಲ ಕಟ್ಟಿಯೆ ತಾನು ಒಡವೆಯ ಗಳಿಸಿದರೆ
ಎಡೆಯಲಿ ಸಾಯಲದ ಕೊಳದೆ ವಿತ್ತವ
ಒಡನೆ ಹೂಳುವರೆ ಸರ್ವಜ್ಞ.

**ಅತಿ ಜಿಪುಣತನದಿಂದ ಬಾಳುವವನ ಸಂಪತ್ತಿಗೆ ಒದಗುವ ಗತಿಯನ್ನು ಹೇಳಲಾಗಿದೆ.**

(ಒಡಲ್+ಅ; ಒಡಲು=ಹೊಟ್ಟೆ; ಒಡಲ=ಹೊಟ್ಟೆಯನ್ನು; ಒಡಲ ಕಟ್ಟಿ=ಈ ಪದಕಂತೆಯು ಒಂದು ನುಡಿಗಟ್ಟಾಗಿ ಬಳಕೆಯಾಗಿದೆ. ಗಳಿಸಿದ/ಇರುವ ಸಂಪತ್ತನ್ನು ಬಳಸಿಕೊಂಡು ಸರಿಯಾಗಿ ಉಣ್ಣದೆ ಉಡದೆ ಜಿಪುಣತನದಿಂದಿರುವುದು/ಇದನ್ನು ಜನಪದರು "ಹೊಟ್ಟೆಬಟ್ಟೆ ಕಟ್ಟಿ ಬಾಳುವುದು" ಎನ್ನುತ್ತಾರೆ;

ತಾನು=ಯಾವುದೇ ಒಬ್ಬ ವ್ಯಕ್ತಿ; ಒಡವೆ=ಆಸ್ತಿಪಾಸ್ತಿ ಹಣಕಾಸು ಚಿನ್ನಬೆಳ್ಳಿ ಮುಂತಾದ ಬೆಲೆಬಾಳುವ ವಸ್ತುಗಳು; ಗಳಿಸು=ಸಂಪಾದಿಸು; ಎಡೆ=ನಡುವೆ/ಇದ್ದಕ್ಕಿದ್ದಂತೆ; ಸಾಯಲು+ಅದ; ಸಾಯಲು=ಸಾವನ್ನಪ್ಪಲು/ಮರಣ ಹೊಂದಲು; ಅದ=ಅದನ್ನು; ಕೊಳ್+ಅದೆ; ಕೊಳ್=ಪಡೆಯುವುದು/ಹೊಂದುವುದು;

ಕೊಳದೆ=ಪಡೆಯದೆ/ಹೊಂದದೆ; ಎಡೆಯಲಿ ಸಾಯಲದ ಕೊಳ್=ಕೂಡಿಟ್ಟವನು ತುಂಬು ವಯಸ್ಸಾಗುವ ಮುನ್ನವೇ ಸಾವನ್ನಪ್ಪಿದರೆ, ಅವನ ಒಡವೆಯನ್ನು ಅದಕ್ಕೆ ಹಕ್ಕುದಾರರಾದವರು ವಶಪಡಿಸಿಕೊಳ್ಳುತ್ತಾರೆ;

ವಿತ್ತ=ಸಂಪಾದಿಸಿದ ಒಡವೆ/ಸಂಪತ್ತು; ಒಡನೆ=ಜತೆಯಲ್ಲಿ; ಹೂಳು=ಗುಂಡಿಯಲ್ಲಿ ಹಾಕಿ ಮಣ್ಣಿನಿಂದ ಮುಚ್ಚುವುದು; ಹೂಳುವರೆ=ಹೂಳುತ್ತಾರೆಯೇ).



೧೮. ಒಡಲ ದಂಡಿಸಿ ಮುಕ್ತಿ ಪಡೆವೆನೆಂಬವನೆಗ್ಗ
ಬಡಿಗೆಯಿಂ ಹುತ್ತ ಹೊಡೆಯಲೊಳಗಿಹ ಸರ್ಪ
ಮಡಿವುದೇ ಹೇಳ ಸರ್ವಜ್ಞ.

ದೇಹವನ್ನು ಬಹುಬಗೆಯ ಯಾತನೆಗೆ ಗುರಿಪಡಿಸುವುದರಿಂದ ಮುಕ್ತಿಯು ದೊರೆಯುತ್ತದೆಯೆಂದು ನಂಬುವುದು ಸರಿಯಲ್ಲವೆಂದು ಹೇಳಲಾಗಿದೆ.

(ಒಡಲ್+ಅ; ಒಡಲು=ಹೊಟ್ಟೆ/ದೇಹ/ಮಯ್; ದಂಡಿಸು=ನೋವಿಗೆ/ಯಾತನೆಗೆ/ ಸಂಕಟಕ್ಕೆ ಗುರಿಮಾಡುವುದು;

ಒಡಲ ದಂಡಿಸಿ=ಅನ್ನನೀರನ್ನು ತೊರೆದು ಉಪವಾಸ ಮಾಡುವುದು/ಒಂಟಿಕಾಲಲ್ಲಿ ನಿಂತು ದೇವರ ಹೆಸರನ್ನು ಜಪಿಸುತ್ತಿರುವುದು/ದೇಗುಲದ ಸುತ್ತ ಹೆಜ್ಜೆಹೆಜ್ಜೆಗೂ ದಿಂಡುರುಳುವುದು/ಒದ್ದೆಬಟ್ಟೆಯಲ್ಲಿ ಉರುಳುಸೇವೆ ಮಾಡುವುದು/ಬಾಯಿಬೀಗ ಹಾಕಿಸಿಕೊಳ್ಳವುದು/ಬೆನ್ನಿನ ಹುರಿಗೆ ಕಬ್ಬಿಣದ ಕೊಕ್ಕೆಯನ್ನು ಚುಚ್ಚಿಸಿಕೊಂಡು ಸಿಡಿಯಾಡುವುದು/ದೇಹಕ್ಕೆ ನೋವುಂಟು ಮಾಡುವ ನೂರಾರು ಬಗೆಯ ಆಚರಣೆಗಳಲ್ಲಿ ತೊಡಗುವುದು;

ಮುಕ್ತಿ=ಹುಟ್ಟು ಬದುಕು ಸಾವುಗಳ ಚಕ್ರದಿಂದ ಜೀವವು ಬಿಡುಗಡೆಯನ್ನು ಹೊಂದುವುದು ಎಂಬ ನಂಬಿಕೆ; ಪಡೆವೆನ್+ಎಂಬವನ್+ಎಗ್ಗ; ಪಡೆವೆನ್=ಹೊಂದುತ್ತೇನೆ/ ಗಳಿಸುತ್ತೇನೆ; ಎಂಬವನ್=ಎಂದು ಕೊಳ್ಳುವವನು; ಎಗ್ಗ=ದಡ್ಡ/ತಿಳಿಗೇಡಿ; ಬಡಿಗೆ+ಇಂ; ಬಡಿಗೆ=ಕೋಲು /ದೊಣ್ಣೆ; ಇಂ=ಇಂದ;

ಹುತ್ತ=ಮಣ್ಣಿನ ಕೊಳವೆಗಳಿಂದ ಕೂಡಿರುವ ಬಿಲ. ಇದರಲ್ಲಿ ಹಾವುಗಳು ಸೇರಿಕೊಂಡಿರುತ್ತವೆ; ಹೊಡೆಯಲ್+ಒಳಗೆ+ಇಹ; ಹೊಡೆ=ಬಡಿ/ಪೆಟ್ಟುಹಾಕು; ಇಹ=ಇರುವ; ಸರ್ಪ=ಹಾವು; ಮಡಿ=ಸಾಯು/ಮರಣಹೊಂದು;ಹೇಳ=ಹೇಳು/ ತಿಳಿದುನೋಡು).



೧೯. ಒಮ್ಮನದೆ ಬಿತ್ತಕ್ಕು ಇಮ್ಮನದೆ ಜಳ್ಳಕ್ಕು
ಒಮ್ಮನದೆ ಮೋಕ್ಷಪದವಕ್ಕು ಜ್ಞಾನಿ ತಾ
ನಿಮ್ಮನದೆ ಕೆಡುಗು ಸರ್ವಜ್ಞ.

**ಒಂದೇ ಮನಸ್ಸಿನಿಂದ ಮಾಡುವ ಇಲ್ಲವೇ ಇಬ್ಬಗೆಯ ಮನಸ್ಸಿನಿಂದ ಮಾಡುವ ಕೆಲಸದಿಂದ ಉಂಟಾಗುವ ಪರಿಣಾಮಗಳನ್ನು ಹೇಳಲಾಗಿದೆ.**

(ಒಮ್ಮನ=ಒರ್+ಮನ; ಒಮ್ಮನದೆ=ಚಂಚಲತೆಯಿಲ್ಲದೆ ಅಂದರೆ ಅತ್ತಿತ್ತ ತುಯ್ದಾಡದೆ ಮನಸ್ಸಿನಲ್ಲಿ ತಳೆಯುವ ಒಂದೇ ನಿಲುವಿನಿಂದ; ಬಿತ್ತು+ಅಕ್ಕು; ಬಿತ್ತು=ಬೀಜ/ತಿರುಳಿನಿಂದ ಕೂಡಿದ ಗಟ್ಟಿ ಕಾಳು; ಅಕ್ಕು=ಆಗುವುದು;

ಒಮ್ಮನದೆ ಬಿತ್ತಕ್ಕು=ಬೀಜವು ಮೊಳಕೆಯೊಡೆದು ಸಸಿಯಾಗಿ ಗಿಡವಾಗಿ ಮರವಾಗಿ ಬೆಳೆದು ಹೂಹಣ್ಣುಗಳನ್ನು ನೀಡುವಂತೆ ಒಂದೇ ಮನಸ್ಸಿನಿಂದ ಕಯ್ಗೊಂಡ ಯಾವುದೇ ಕೆಲಸ ಚೆನ್ನಾಗಿ ಆಗುತ್ತದೆ;

ಇಮ್ಮನ=ಇರ್+ಮನ; ಇಮ್ಮನ=ಮಾಡುವುದೋ/ಬೇಡವೋ ಎಂಬ ತೊಳಲಾಟದಿಂದ ಕೂಡಿದ ಚಂಚಲ ಮನಸ್ಸು; ಜಳ್ಳು+ಅಕ್ಕು; ಜಳ್ಳು=ಒಳಗಡೆ ತಿರುಳಿಲ್ಲದ ಬೀಜ; ಇಮ್ಮನದೆ ಜಳ್ಳಕ್ಕು=ಚಂಚಲವಾದ ಮನಸ್ಸಿನಿಂದ ಕಯ್ಗೊಂಡ ಯಾವುದೇ ಕೆಲಸ ಕೆಡುತ್ತದೆ;

ಮೋಕ್ಷ ಪದವು+ಅಕ್ಕು; ಮೋಕ್ಷ=ಮಾನವಜೀವಿಯು ಹುಟ್ಟು ಬದುಕು ಸಾವುಗಳೆಂಬ ಚಕ್ರದಿಂದ ಬಿಡುಗಡೆಯನ್ನು/ಮುಕ್ತಿಯನ್ನು ಹೊಂದುತ್ತದೆ ಎಂಬ ನಂಬಿಕೆ; ಪದ=ನೆಲೆ/ಜಾಗ; ಜ್ಞಾನಿ=ಅರಿವುಳ್ಳವನು/ತಿಳುವಳಿಕೆಯುಳ್ಳವನು; ತಾನು+ಇಮ್ಮನದೆ; ತಾನು=ಅವನು;

ಜ್ಞಾನಿ ತಾ ಇಮ್ಮನದೆ ಕೆಡುಗು=ಅರಿವಿದ್ದವನು ಕೂಡ ಒಮ್ಮೊಮ್ಮೆ ಚಂಚಲಮನಕ್ಕೆ ಒಳಗಾದಾಗ ಹಾಳಾಗುತ್ತಾನೆ; ಕೆಡು+ಗು; ಕೆಡು=ನಾಶವಾಗು/ಇಲ್ಲವಾಗು/ಹಾಳಾಗು; ಕೆಡುಗು=ನಾಶವಾಗುವುದು/ಹಾಳಾಗುವುದು).



೨೦. ಒಲೆಗುಂಡನೊಬ್ಬನು ಮೆಲಬಹುದೆಂದರೆ
ಮೆಲಬಹುದೆಂದು ಎನಬೇಕು ಮೂರ್ಖರನು
ಗೆಲಬಾರದಯ್ಯ ಸರ್ವಜ್ಞ.

ತಿಳಿಗೇಡಿಗಳ ಜತೆಯಲ್ಲಿ ಮಾತಿಗೆ ಮಾತು ಬೆಳೆಸಬಾರದೆಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಒಲೆಗುಂಡನು+ಒಬ್ಬನು; ಒಲೆ=ಅಡುಗೆಯನ್ನು ಮಾಡುವಾಗ ಬೆಂಕಿಯನ್ನು ಉರಿಸುವುದಕ್ಕಾಗಿ ಬಳಸುವ ಸಲಕರಣೆ; ಗುಂಡು=ದಪ್ಪವಾಗಿರುವ ಕಲ್ಲು; ಒಲೆಗುಂಡು=ಬಯಲು ಜಾಗದಲ್ಲಿ ಅಡುಗೆಯನ್ನು ಮಾಡಲು ಒಲೆಯನ್ನು ಒಡ್ಡಿದಾಗ ಪಾತ್ರೆಗಳನ್ನು ಇಡುವುದಕ್ಕಾಗಿ ಜೋಡಿಸುವ ದಪ್ಪನೆಯ ಕಲ್ಲುಗಳು;

ಒಬ್ಬನು=ಯಾವುದೇ ವ್ಯಕ್ತಿ; ಮೆಲಬಹುದು+ಎಂದರೆ; ಮೆಲ್=ತಿನ್ನು; ಬಹುದು=ಬರುವುದು/ಆಗುವುದು; ಎಂದರೆ=ಎಂದು ಹೇಳಿದರೆ; ಮೆಲಬಹುದು+ಎಂದು ಎನಬೇಕು=ಅವನ ಮಾತಿಗೆ ಎದುರಾಡದೆ, ಅವನು ಹೇಳುತ್ತಿರುವುದನ್ನೇ ಸರಿಯೆಂದು ಒಪ್ಪಿಕೊಳ್ಳಬೇಕು;

ಮೂರ್ಖ=ತಿಳಿಗೇಡಿ/ಅರಿವಿಲ್ಲವದವನು; ಗೆಲಬಾರದು+ಅಯ್ಯ; ಗೆಲಬಾರದು= ಗೆಲ್ಲಲು ಆಗುವುದಿಲ್ಲ/ಸರಿ ತಪ್ಪುಗಳನ್ನು ತಿಳಿಸಿ ಅರಿವನ್ನು ಮೂಡಿಸಲಾಗುವುದಿಲ್ಲ/ ತಿಳಿಗೇಡಿತನವನ್ನು ಹೋಗಲಾಡಿಸಲು ಆಗುವುದಿಲ್ಲ).



೨೧. ಒಳ್ಳಿದರ ಒಡನಿರ್ದು ಕಳ್ಳ ಒಳ್ಳಿದನಕ್ಕು
ಒಳ್ಳಿದ ಕಳ್ಳನೊಡನಾಡೆ ಅವ ಶುದ್ಧ
ಕಳ್ಳನೇ ಅಕ್ಕು ಸರ್ವಜ್ಞ.

ಒಳ್ಳೆಯವರ ಇಲ್ಲವೇ ಕೆಟ್ಟವರ ಒಡನಾಟದಿಂದ ವ್ಯಕ್ತಿತ್ವ ರೂಪುಗೊಳ್ಳುವ ಬಗೆಯನ್ನು ಹೇಳಲಾಗಿದೆ.

(ಒಳ್ಳಿದರ=ಒಳ್ಳೆಯ ನಡೆನುಡಿಯುಳ್ಳವರ; ಒಡನೆ+ಇರ್ದು; ಒಡನೆ=ಜತೆಯಲ್ಲಿ/ ಒಡನಾಟದಲ್ಲಿ/ಸಹವಾಸದಲ್ಲಿ; ಇರ್ದು=ಇದ್ದು; ಒಡನೆ+ ಇರ್ದು=ಜತೆಯಲ್ಲಿ ವ್ಯವಹರಿಸುತ್ತಾ; ಕಳ್ಳ=ಇತರರ ಒಡವೆ ವಸ್ತುಗಳನ್ನು ಅಪಹರಿಸುವವನು/ಲಪಟಾಯಿಸುವವನು;

ಒಳ್ಳಿದನ್+ಅಕ್ಕು; ಒಳ್ಳಿದನ್=ಒಳ್ಳೆಯ ವ್ಯಕ್ತಿ; ಅಕ್ಕು=ಆಗುತ್ತಾನೆ; ಕಳ್ಳನ+ಒಡನೆ+ಆಡೆ; ಆಡೆ=ಆಡಿದರೆ/ವ್ಯವಹರಿಸಿದರೆ/ಸಂಗ ಮಾಡಿದರೆ; ಅವ=ಅವನು/ಆ ಒಳ್ಳೆಯ ವ್ಯಕ್ತಿಯು; ಶುದ್ಧ ಕಳ್ಳ=ಕಳ್ಳತನವನ್ನೇ ಕಸುಬನ್ನಾಗಿ ಮಾಡಿಕೊಂಡಿರುವ ವ್ಯಕ್ತಿ).



೨೨. ಒಳ್ಳೆನಿಲ್ಲದ ಊರು ಕಳ್ಳರ ಸಂಗವು
ಸುಳ್ಳನ ಮಾತು ಇವು ಮೂರು ಕೆಸರೊಳಗೆ
ಮುಳ್ಳು ತುಳಿದಂತೆ ಸರ್ವಜ್ಞ.

ಒಳ್ಳೆಯ ನಡೆನುಡಿಯಿಲ್ಲದ ಜನರ ನಡುವೆ ಬಾಳ್ವೆ ಮಾಡುವುದು ತುಂಬಾ ನೋವಿನ ಸಂಗತಿಯೆಂಬುದನ್ನು ಹೇಳಲಾಗಿದೆ.

(ಒಳ್ಳೆನು+ಇಲ್ಲದ; ಒಳ್ಳೆನು=ಒಳ್ಳೆಯವನು/ಇತರರ ನೋವು ನಲಿವುಗಳನ್ನು ಹಂಚಿಕೊಳ್ಳುವವನು; ಒಳ್ಳೆನಿಲ್ಲದ ಊರು=ಒಳ್ಳೆಯ ನಡೆನುಡಿಗಳಿಲ್ಲದ/ನೆರೆಹೊರೆಯವರ ನೋವು ನಲಿವುಗಳನ್ನು ಹಂಚಿಕೊಳ್ಳದ ಜನರು ನೆಲೆಸಿರುವ ಊರು;

ಸಂಗ=ಒಡನಾಟ/ವ್ಯವಹಾರ; ಕಳ್ಳರ ಸಂಗ=ಜನರನ್ನು ಮತ್ತು ಸಮಾಜವನ್ನು ವಂಚಿಸಿ ಆಸ್ತಿಪಾಸ್ತಿ ಹಣಒಡವೆಗಳನ್ನು ಲಪಟಾಯಿಸುವ ಮೋಸಗಾರರ/ಲಂಚಕೋರರ ಜತೆಯಲ್ಲಿಯೇ ದಿನಬೆಳಗಾದರೆ ವ್ಯವಹರಿಸುವುದು/ಒಡನಾಡುವುದು; ಸುಳ್ಳು+ಅ; ಸುಳ್ಳು=ನಿಜವಲ್ಲದ ಸಂಗತಿಗಳ ಹೇಳಿಕೆ; ಸುಳ್ಳ=ಯಾವಾಗಲೂ ಸುಳ್ಳನ್ನೇ ಆಡುವವನು;

ಕೆಸರ+ಒಳಗೆ; ಕೆಸರು=ಮಣ್ಣು ಮತ್ತು ನೀರು ಕಲೆತುಕೊಂಡು ಮೆದುವಾಗಿರುವ ನೆಲ; ಮುಳ್ಳು=ಮೊನಚಾದ ತುದಿಯುಳ್ಳ ವಸ್ತು; ತುಳಿದ+ಅಂತೆ; ಅಂತೆ=ಹಾಗೆ;

ಕೆಸರೊಳಗೆ ಮುಳ್ಳು ತುಳಿದಂತೆ=ಕೆಸರೊಳಗೆ ಮುಳ್ಳು ತುಳಿದಾಗ, ಮುಳ್ಳು ಚುಚ್ಚಿಕೊಂಡಿರುವ ಮಣ್ಣು ಮೆತ್ತಿದ ಪಾದದ ಜಾಗಕ್ಕೆ ಅತ್ತ ಕಯ್ಯನ್ನು ಹಾಕಿ ಮುಳ್ಳನ್ನು ತೆಗೆಯಲಾಗದೆ, ಇತ್ತ ಪಾದವನ್ನು ಕೆಳಕ್ಕೆ ಊರಿ ಹೆಜ್ಜೆಯಿಡಲಾಗದೆ ನೋವನ್ನು ತಿನ್ನುತ್ತಿರಬೇಕಾಗುತ್ತದೆ).



೨೩. ಓದಿ ಬೂದಿಯ ಪೂಸಿ ತೋದ ಕಾವಿಯ ಹೊದೆದು
ಹೋದಾತ ಯೋಗಿಯೆನಬೇಡ ಇಂದ್ರಿಯವ
ಕಾದಾತ ಯೋಗಿ ಸರ್ವಜ್ಞ.

ಉಟ್ಟಿರುವ ಉಡುಗೆ ಇಲ್ಲವೇ ತೊಟ್ಟಿರುವ ತೊಡುಗೆಗಳಿಂದ ಯಾವುದೇ ವ್ಯಕ್ತಿಯ ವ್ಯಕ್ತಿತ್ವವನ್ನು ನಿರ್ಣಯಿಸಬಾರದೆಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಓದಿ=ಅಕ್ಕರವನ್ನು ಕಲಿತು; ಬೂದಿ=ವಸ್ತುವನ್ನು ಬೆಂಕಿಯಲ್ಲಿ ಸುಟ್ಟ ನಂತರ ಉಳಿಯುವ ಪುಡಿ; ಬೂದಿಯ ಪೂಸಿ=ಹಣೆ-ಎದೆ-ಮಯ್ ತುಂಬಾ ಬೂದಿಯನ್ನು ಲೇಪಿಸಿಕೊಂಡು; ಪೂಸಿ=ಬಳಿದುಕೊಂಡು; ಕಾವಿಯ ಹೊದೆದು=ಕಾವಿ ಬಟ್ಟೆಯನ್ನು ತೊಟ್ಟು;

ತೋಯ್+ದ; ತೋಯ್=ತೇವವಾಗು/ನೆನೆ/ಹಸಿಯಾಗು; ತೋದ= ಒದ್ದೆಯಾಗಿರುವ; ಕಾವಿ=ಕೆಂಪುಬಣ್ಣ; ಹೊದೆದು=ಉಟ್ಟುಕೊಂಡು/ಮಯ್ ಮೇಲೆ ಹಾಕಿಕೊಂಡು; ಹೋದ+ಆತ=ಹೋದವನು/ಸಿಂಗಾರಗೊಂಡವನು; ಆತ=ಅವನು; ಯೋಗಿ+ಎನಬೇಡ;

ಯೋಗಿ=ಆಸೆಗಳನ್ನು/ಬಯಕೆಗಳನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವವನು; ಇಂದ್ರಿಯ=ನೋಟ-ಶಬ್ದ-ಕಂಪು-ರುಚಿ-ಮುಟ್ಟುವಿಕೆಯಿಂದ ಉಂಟಾಗುವ ಅರಿವನ್ನು ಪಡೆಯಲು ನೆರವಾಗುವ ಅಂಗಗಳು;

ಇಂದ್ರಿಯವ ಕಾದಾತ=ಕಣ್ಣು-ಕಿವಿ-ಮೂಗು-ನಾಲಗೆ-ತೊಗಲಿನಿಂದ ಉಂಟಾಗುವ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ನಡೆನುಡಿಗಳಿಂದ ಬಾಳುವವನು; ಕಾಯ್+ದ್+ಆತ; ಕಾಯ್+ದ; ಕಾದ= ಕಾಯ್ದುಕೊಂಡ/ಎಚ್ಚರದಿಂದ ಕಾಪಾಡಿಕೊಂಡ.)



೨೪. ಕಂಡುದ ನುಡಿಯೆ ಭೂಮಂಡಲ ಮುನಿವುದು
ಕೊಂಡಾಡುತಿಚ್ಚೆಯ ನುಡಿದರೆ ಜಗವೆಲ್ಲ
ಮುಂಡಾಡುತಿಕ್ಕು ಸರ್ವಜ್ಞ.

ಜನಸಮುದಾಯದ ವ್ಯವಹಾರದಲ್ಲಿ ದಿಟದ ಮಾತಿಗೆ ಇಲ್ಲವೇ ಸುಳ್ಳುಮಾತಿಗೆ ದೊರೆಯುವ ಬೆಲೆಯನ್ನು ಹೇಳಲಾಗಿದೆ.

(ಕಂಡುದ=ಕಂಡಿದ್ದನ್ನು/ನೋಡಿದುದನ್ನು/ತಿಳಿದಿರುವುದನ್ನು; ನುಡಿಯೆ=ಹೇಳಲು; ಕಂಡುದ ನುಡಿಯೆ=ಯಾವುದೇ ವ್ಯಕ್ತಿಯ ನಡೆನುಡಿಗಳಲ್ಲಿ ಇಲ್ಲವೇ ಸಾಮಾಜಿಕ ಸಂಗತಿಯ ಆಗುಹೋಗುಗಳಲ್ಲಿ ನಾವು ಕಂಡ ತಪ್ಪನ್ನು/ಕೆಡುಕನ್ನು ಗುರುತಿಸಿ ವಾಸ್ತವವಾಗಿರುವುದನ್ನು ಹೇಳಿದರೆ;

ಭೂ=ಜಗತ್ತು/ಲೋಕ; ಮಂಡಲ=ಪ್ರದೇಶ; ಭೂಮಂಡಲ=ಜನಸಮುದಾಯ/ ಸಮಾಜ; ಮುನಿ=ಕೋಪಗೊಳ್ಳು/ಸಿಟ್ಟಾಗು/ಕೆರಳು; ಕೊಂಡಾಡುತ+ಇಚ್ಚೆಯ; ಕೊಂಡಾಡು= ಹೊಗಳು/ಬಣ್ಣಿಸು; ಇಚ್ಚೆ=ಆಸೆ/ಬಯಕೆ;

ಕೊಂಡಾಡುತ ಇಚ್ಚೆಯ ನುಡಿದರೆ=ಇತರರ ತಪ್ಪುಗಳನ್ನು/ಕೆಡುಕಿನ ನಡೆನುಡಿಗಳನ್ನು ಮರೆಮಾಚಿ, ಅವರು ಮೆಚ್ಚುವಂತಹ ಅವರಲ್ಲಿ ಇಲ್ಲದ/ ಅವರಿಗೆ ಸಲ್ಲದ ನುಡಿಗಳನ್ನಾಡಿದರೆ; ಜಗವು+ಎಲ್ಲ; ಜಗ=ಲೋಕ/ಪ್ರಪಂಚ/ಜನಸಮುದಾಯ;

ಮುಂಡಾಡುತ+ಇಕ್ಕು; ಮುಂಡಾಡು=ಮುತ್ತಿಡು/ಒಲವಿನಿಂದ ತಬ್ಬಿಕೊಳ್ಳುವುದು/ ಆಲಂಗಿಸಿಕೊಳ್ಳುವುದು; ಇಕ್ಕು=ಇರುವುದು; ಮುಂಡಾಡುತಿಕ್ಕು=ಮೆಚ್ಚುಗೆಯಿಂದ ಓಲಯಿಸುವುದು).



೨೫. ಕಡೆದ ಕಲ್ಲದು ನುಣ್ಪು ಒಡೆದರೆ ದೈವವೇ
ಜಡರ ಮಾತುಗಳು ಹುಸಿ ನೋಡು ದಯಚಿತ್ತ
ದೆಡೆಯಲ್ಲಿ ದೈವ ಸರ್ವಜ್ಞ.

ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟುಮಾಡುವ ಒಲವು, ಕರುಣೆ ಮತ್ತು ಗೆಳೆತನದಿಂದ ಕೂಡಿದ ನಡೆನುಡಿಯಲ್ಲಿ ದೇವರ ಇರುವಿಕೆಯನ್ನು ಕಾಣಲಾಗಿದೆ.

(ಕಡೆ=ಕೆತ್ತು/ರೂಪಿಸು/ಬಿಡಿಸು; ಕಲ್ಲು+ಅದು; ಕಡೆದ ಕಲ್ಲು=ಉಳಿ ಮತ್ತು ಸುತ್ತಿಗೆಯ ಪೆಟ್ಟಿನಿಂದ ಆಕಾರವೊಂದನ್ನು ತಳೆದ ಕಲ್ಲು/ಕಂಡರಣೆಗೊಂಡ ಕಲ್ಲು; ನುಣ್ಪು=ನಯಗೊಳ್ಳುವುದು/ಒರಟಾಗಿದ್ದುದು ನಯಗೊಂಡು ಅಂದವಾಗುವುದು; ಒಡೆ=ಸೀಳು/ಬಿರಿ/ಕಾಣಿಸಿಕೊಳ್ಳುವುದು;

ನುಣ್ಪು ಒಡೆದರೆ=ಶಿಲ್ಪಿಯ ಉಳಿಯ ಪೆಟ್ಟಿನಿಂದ ಕಲ್ಲು ಕಲೆಯಾಗಿ ರೂಪುಗೊಂಡರೆ/ಶಿಲೆಯು ಶಿಲ್ಪವಾಗಿ ರೂಪುಗೊಂಡರೆ; ದೈವ=ದೇವರು; ದೈವವೇ=ದೇವರಾಗುತ್ತದೆಯೇ;

ಜಡರು=ತಿಳಿಗೇಡಿಗಳು/ಆಲಸಿಗಳು; ಜಡರ ಮಾತುಗಳು=ದೇವರ ಇರುವಿಕೆಯನ್ನು ಸರಿಯಾಗಿ ಅರಿಯದವರ ನುಡಿಗಳು; ಹುಸಿ=ಸುಳ್ಳು; ದಯಚಿತ್ತದ+ಎಡೆಯಲ್ಲಿ; ದಯ=ಕರುಣೆ/ಅನುಕಂಪ/ಕನಿಕರ/ಇತರರ ನೋವಿಗೆ ಮಿಡಿದು ನೆರವನ್ನು ನೀಡುವಿಕೆ;

ಚಿತ್ತ=ಮನಸ್ಸು; ಎಡೆ=ಜಾಗ/ನೆಲೆ; ದಯಚಿತ್ತದೆಡೆಯಲ್ಲಿ ದೈವ=ಕರುಣೆ ತುಂಬಿದ ನಡೆನುಡಿಯಿರುವ ಎಡೆಯಲ್ಲಿ/ ತನ್ನನ್ನು ಒಳಗೊಂಡಂತೆ ಎಲ್ಲರಿಗೂ ಒಳಿತಾಗುವಂತೆ ಒಲವು ಕರುಣೆಯಿಂದ ನಡೆದುಕೊಳ್ಳುವ ಸನ್ನಿವೇಶಗಳಲ್ಲಿ ದೇವರು ನೆಲೆಸಿರುತ್ತಾನೆ).



೨೬. ಕಣ್ಣು ನಾಲಗೆ ಮನವು ತನ್ನವೆಂದೆನಬೇಡ
ಅನ್ಯರು ಕೊಂದರೆನಬೇಡ ಇವು ಮೂರು
ತನ್ನನೇ ಕೊಲುಗು ಸರ್ವಜ್ಞ.

ನೋಡುವ ನೋಟ, ಆಡುವ ಮಾತು ಮತ್ತು ಮನದ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಳ್ಳದಿದ್ದರೆ ಉಂಟಾಗುವ ಹಾನಿಯನ್ನು ಹೇಳಲಾಗಿದೆ.

(ಮನ=ಮನಸ್ಸು; ತನ್ನವು+ಎಂದು+ಎನಬೇಡ; ತನ್ನವು=ನನಗೆ ಸೇರಿದವು/ನನ್ನ ಹಿಡಿತದಲ್ಲಿರುವುವು; ಎನಬೇಡ=ಎಂದುಕೊಳ್ಳಬೇಡ/ತಿಳಿಯಬೇಡ;

ಕಣ್ಣು ನಾಲಗೆ ಮನವು ತನ್ನವೆಂದೆನಬೇಡ=ತಾನು ಹುಟ್ಟಿಬೆಳೆದು ಬಾಳುತ್ತಿರುವ ಪರಿಸರದಲ್ಲಿನ ವಸ್ತು/ಜೀವಿ/ಆಗುಹೋಗುಗಳ ಕಾರಣದಿಂದಾಗಿ ವ್ಯಕ್ತಿಯು ನೂರೆಂಟು ಬಗೆಯ ಆಸೆ/ತವಕ/ತಲ್ಲಣ/ಕೋಪ/ತಾಪ/ಹತಾಶೆಗಳಿಗೆ ಒಳಗಾಗಿ ಒಳಿತು ಕೆಡುಕಿನ ಕೆಲಸಗಳಲ್ಲಿ ತೊಡಗುತ್ತಾನೆ.

"ಪರಿಸರದ ಮಗು ಮಾನವ" ಎಂಬ ಮಾತಿನಂತೆ ಸಮಾಜದ ರಚನೆ, ಸಂಪ್ರದಾಯ ಮತ್ತು ನೀತಿನಿಯಮಗಳು ಮಾನವನ ನಡೆನುಡಿಗಳನ್ನು ರೂಪಿಸುತ್ತವೆ ಮತ್ತು ಹತೋಟಿಯಲ್ಲಿಡುತ್ತವೆ. ಆದುದರಿಂದ ವ್ಯಕ್ತಿಯು ತನ್ನ ನಡೆನುಡಿಗಳಿಗೆ ಕಾರಣವಾಗುವ ಸಾಮಾಜಿಕ ಸಂಗತಿಗಳ ಬಗ್ಗೆ ತುಂಬಾ ಎಚ್ಚರದಿಂದ ಇರಬೇಕು ಎನ್ನುವ ಇಂಗಿತ ಈ ಮಾತುಗಳಲ್ಲಿದೆ;

ಅನ್ಯರು=ಇತರರು/ಬೇರೆಯವರು; ಕೊಂದರು+ಎನಬೇಡ; ತನ್ನನೇ=ಒಳ್ಳೆಯ ರೀತಿಯಲ್ಲಿ ನಡೆನುಡಿಗಳನ್ನು ರೂಪಿಸಿಕೊಳ್ಳದಿರುವ ವ್ಯಕ್ತಿಯನ್ನೇ; ಕೊಲುಗು=ಕೊಲ್ಲುತ್ತವೆ).



೨೭ ಕಲ್ಲು ಕಾಷ್ಠವು ಬೆತ್ತದಲ್ಲಿ ಇಹನೇ ಶಿವನು
ಎಲ್ಲಿಯ ಮಾತು ಹುಸಿ ಬೇಡ ನಿಷ್ಠೆ ಇ
ದ್ದಲ್ಲಿಹನಭವ ಸರ್ವಜ್ಞ.

ಶಿವನ ಪ್ರತಿರೂಪವು ಜಡವಸ್ತುಗಳಲ್ಲಿ ಇರುವುದಿಲ್ಲ. ಮಾನವರ ಒಳ್ಳೆಯ ನಡೆನುಡಿಗಳು ಇರುವ ಕಡೆಯಲ್ಲಿ ಶಿವನು ನೆಲೆಸಿರುತ್ತಾನೆ ಎಂಬುದನ್ನು ಹೇಳಲಾಗಿದೆ.

(ಕಲ್ಲು=ಶಿಲೆ; ಕಾಷ್ಠ=ಮರದ ತುಂಡು/ಕಟ್ಟಿಗೆ; ಬೆತ್ತ=ಬಿದಿರಿನ ಕೋಲು; ಇಹನೇ=ಇರುವನೇ; ಶಿವ=ದೇವರೆಂದು ನಂಬಿರುವ ಶಿವನು;

ಎಲ್ಲಿಯ ಮಾತು=ಅಂತಹ ಮಾತುಗಳಲ್ಲಿ ಯಾವುದೇ ತಿರುಳಿಲ್ಲ/ ಆ ನುಡಿಗಳು ನಿಜವಲ್ಲ; ಹುಸಿ=ಸುಳ್ಳು; ಹುಸಿ ಬೇಡ=ಸುಳ್ಳನ್ನೇ/ಇಲ್ಲದ್ದನ್ನೇ ನಿಜವೆಂದು ನಂಬುವುದು ಬೇಡ;

ನಿಷ್ಠೆ=ಸಹ ಮಾನವರಿಗೆ ಸಮಾಜಕ್ಕೆ ಒಳಿತನ್ನು ಉಂಟುಮಾಡುವ ನಡೆನುಡಿಗಳಲ್ಲಿ ನಂಬಿಕೆ; ಇದ್ದಲ್ಲಿ+ಇಹನು+ಅಭವ; ಇದ್ದಲ್ಲಿ=ಇರುವಲ್ಲಿ;

ಇಹನು=ಇರುವನು; ಭವ=ಹುಟ್ಟು; ಅಭವ=ಶಿವ; ಅಭವ=ದೇವರಾದ ಶಿವನು ಹುಟ್ಟು ಸಾವುಗಳ ಸುಳಿಗೆ ಸಿಲುಕದವನು ಎಂಬುದು ಜನಮನದ ನಂಬಿಕೆ).



೨೮. ಕಿರಿಯಂದಿನ ಪಾಪವರಿತಲ್ಲಿ ಹೋಯಿತ್ತು
ಅರಿತರಿತು ಮಾಡಿದನ ಪಾಪ ವಜ್ರದ
ಸರಿಯಂತೆಯಿಕ್ಕು ಸರ್ವಜ್ಞ.

ಅರಿಯದೆ ಮಾಡಿದ ಇಲ್ಲವೆ ಅರಿತು ಮಾಡಿದ ಪಾಪದ ನಡುವಣ ವ್ಯತ್ಯಾಸಗಳನ್ನು ಹೇಳಲಾಗಿದೆ.

(ಕಿರಿ+ಅಂದಿನ; ಕಿರಿ=ಚಿಕ್ಕ/ಎಳೆಯ; ಅಂದಿನ=ಆ ಸಮಯ/ಕಾಲದ; ಪಾಪ+ಅರಿತ+ಅಲ್ಲಿ; ಪಾಪ=ಇತರರಿಗೆ ಮತ್ತು ಸಮಾಜಕ್ಕೆ ಎಸಗಿದ ಕೇಡು/ಕೊಟ್ಟ ನೋವು/ಮಾಡಿದ ವಂಚನೆ; ಅರಿ=ತಿಳಿ;

ಕಿರಿಯಂದಿನ ಪಾಪವರಿತಲ್ಲಿ ಹೋಯಿತ್ತು=ಚಿಕ್ಕಂದಿನಲ್ಲಿ ಮಾಡಿದ ಕೆಟ್ಟ ಕೆಲಸಗಳನ್ನು ದೊಡ್ಡವರಾದ ಮೇಲೆ ಅರಿತುಕೊಂಡು, ನನ್ನಿಂದ ಇಂತಹ ಕೆಟ್ಟದ್ದು ಆಗಿದೆಯಲ್ಲಾ ಎಂದು ಸಂಕಟಪಟ್ಟು, ಮತ್ತೆ ಕೆಟ್ಟದ್ದನ್ನು ಯಾರಿಗೂ ಮಾಡಬಾರದೆಂಬ ನಿಲುವನ್ನು ತಳೆದು, ಒಳ್ಳೆಯ ರೀತಿಯಲ್ಲಿ ನಡೆದುಕೊಳ್ಳುವುದು;

ಅರಿತು+ಅರಿತು; ಅರಿತರಿತು=ತಿಳಿದೂ ತಿಳಿದೂ/ಚೆನ್ನಾಗಿ ಗೊತ್ತಿದ್ದು; ಮಾಡಿದನ=ಮಾಡಿದವನ; ವಜ್ರ=ಗಡುಸಾದುದು/ಗಟ್ಟಿಯಾಗಿರುವುದು; ಸರಿ=ಗಂಜಿ/ಅಂಬಲಿ/ಜಿಗುಟಾದ ವಸ್ತು/ಅಂಟು; ವಜ್ರದ ಸರಿ=ಒಂದು ಬಗೆಯ ಅಂಟು. ಇದನ್ನು ಮರದ ಪಟ್ಟಿಗಳ ಸಂದುಗಳಿಗೆ ಬಳಿದು ಅನಂತರ ಅವನ್ನು ಜತೆಗೂಡಿಸಿದಾಗ, ಅವು ಗಟ್ಟಿಯಾಗಿ ಅಂಟಿಕೊಳ್ಳುತ್ತಿದ್ದವು;

ಇಕ್ಕು=ಇರುವುದು; ಅರಿತರಿತು ಮಾಡಿದನ ಪಾಪ ವಜ್ರದ ಸರಿಯಂತೆಯಿಕ್ಕು= ಉದ್ದೇಶಪೂರ್ವಕವಾಗಿ ಮಾಡಿದವನ ಪಾಪವು ಎಂದೆಂದಿಗೂ ಬಿಡದೆ ಅಂಟಿಕೊಂಡಿರುವುದು. ಅಂದರೆ ಆತ ನೀಚ/ಕೇಡಿ/ವಂಚಕನಾಗಿಯೇ ಬಾಳುತ್ತಿರುತ್ತಾನೆ).



೨೯. ಕೇಡನೊಬ್ಬಗೆ ಬಯಸೆ ಕೇಡು ತಪ್ಪದು ತನಗೆ
ಕೂಡಿ ಕೆಂಡವನು ತೆಗೆದೊಡೆ ತನ್ನ ಕೈ
ಕೂಡೆ ಬೇವಂತೆ ಸರ್ವಜ್ಞ.

"ಬೇರೆಯವರಿಗೆ ಬಗೆಬಗೆಯ ನೋವು ಸಂಕಟಗಳು ಬಂದು, ಅವರ ಜೀವನದಲ್ಲಿ ಹಾನಿಯುಂಟಾಗಲಿ" ಎಂದು ನಾವು ಮನದಲ್ಲಿ ಇತರರಿಗೆ ಕೇಡನ್ನು ಬಯಸುವುದಾಗಲಿ/ ಇಲ್ಲವೇ ಕೆಟ್ಟ ಕೆಲಸಗಳನ್ನು ಮಾಡುವುದಾಗಲಿ ಒಳ್ಳೆಯದಲ್ಲವೆಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಕೇಡನು+ಒಬ್ಬಗೆ; ಕೇಡು=ಹಾನಿ/ನಾಶ/ಅಪಾಯ; ಒಬ್ಬಗೆ=ಬೇರೆಯವನಿಗೆ; ಬಯಸೆ=ಆಗಲೆಂದು ಇಚ್ಚಿಸಿದರೆ; ತನಗೆ=ಬಯಸಿದ ವ್ಯಕ್ತಿಗೆ;

ಕೇಡು ತಪ್ಪದು ತನಗೆ=ಮತ್ತೊಬ್ಬನಿಗೆ ಸಾವು ನೋವುಗಳು ಉಂಟಾಗಲೆಂದು ಬಯಸಿದವನಿಗೂ ಒಂದಲ್ಲ ಒಂದು ಬಗೆಯ ಹಾನಿಯುಂಟಾಗುತ್ತದೆ; ಕೆಂಡ=ಬೆಂಕಿಯ ಉಂಡೆ; ತೆಗೆದೊಡೆ=ತೆಗೆದರೆ;

ಕೂಡಿ ಕೆಂಡವನು ತೆಗೆದೊಡೆ=ಉರಿಯುತ್ತಿರುವ ಬೆಂಕಿಯ ಉಂಡೆಯನ್ನು ಮತ್ತೊಬ್ಬನ ಮೇಲೆ ಎಸೆಯಲೆಂದು ಒಬ್ಬ ವ್ಯಕ್ತಿಯು ತನ್ನ ಕಯ್ಯಲ್ಲಿ ತೆಗೆದುಕೊಂಡಾಗ; ಕೂಡೆ=ಜತೆಜತೆಯಲ್ಲೇ/ಆ ಗಳಿಗೆಯಲ್ಲೇ; ಬೇವ+ಅಂತೆ=ಸುಡುವ+ಹಾಗೆ; ಬೇವ=ಬೆಯ್ಯುವ;

ತನ್ನ ಕೈ ಕೂಡೆ ಬೇವಂತೆ=ಈ ಹೋಲಿಕೆಯ ಮೂಲಕ ಮತ್ತೊಬ್ಬನಿಗೆ ಕೆಟ್ಟದ್ದನ್ನು ಮಾಡಲು ಹಾತೊರೆಯುವ ವ್ಯಕ್ತಿಗೂ ನೋವು/ಸಂಕಟ/ಹಾನಿ ತಟ್ಟುತ್ತದೆ ಎಂಬುದನ್ನು ಹೇಳಲಾಗಿದೆ).



೩೦. ಕೇಳುವವರಿದ್ದಿಹರೆ ಹೇಳುವುದು ಬುದ್ಧಿಯನು
ಕೋಳದಲಿ ಬಿದ್ದು ಬಳಲುವಗೆ ಬುದ್ಧಿಯನು
ಹೇಳುವನೆಗ್ಗ ಸರ್ವಜ್ಞ.

ನಮ್ಮ ಮಾತುಗಳನ್ನು ಮನವಿಟ್ಟು ಆಲಿಸುವವರಿಗೆ ತಿಳುವಳಿಕೆಯನ್ನು ಹೇಳಬೇಕೆ ಹೊರತು, ಎಲ್ಲರಿಗೂ ಹೇಳಲು ಹೋಗುವುದು ಸರಿಯಲ್ಲವೆಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಕೇಳುವವರು+ಇದ್ದು+ಇಹರೆ=ನಾವು ಆಡಿದ ಮಾತುಗಳಿಗೆ ಬೆಲೆ ಕೊಟ್ಟು ತಮ್ಮ ತಪ್ಪನ್ನು ತಿದ್ದಿ ಸರಿಪಡಿಸಿಕೊಂಡು ನಡೆಯುವವರು ಇದ್ದರೆ; ಇಹರೆ=ಇದ್ದರೆ;

ಬುದ್ಧಿ=ತಿಳುವಳಿಕೆ/ಅರಿವು; ಕೋಳ=ಬೇಡಿ/ಸಂಕೋಲೆ; ಬಳಲು=ಸಂಕಟಪಡು/ದಣಿ/ಆಯಾಸಗೊಳ್ಳು;

ಕೋಳದಲಿ ಬಿದ್ದು ಬಳಲುವಗೆ=ಕಳ್ಳತನ ಕೊಲೆ ಸುಲಿಗೆ ಮುಂತಾದ ತಪ್ಪುಗಳನ್ನು ಮಾಡಿ ಸೆರೆವಾಸದಲ್ಲಿ ನರಳುತ್ತಿರುವವನಿಗೆ; ಹೇಳುವನು+ಎಗ್ಗ; ಎಗ್ಗ=ದಡ್ಡ/ತಿಳಿಗೇಡಿ/ಅರಿವಿಲ್ಲದವನು).



೩೧. ಕೊಟ್ಟುಂಬ ಕಾಲದಲಿ ಕೊಟ್ಟುಣ್ಣಲೊಲ್ಲದವ
ಹುಟ್ಟಿಯ ಮೇಲೆ ಜೇನಿಟ್ಟು ಪರರಿಗೆ
ಕೊಟ್ಟು ಹೋಹಂತೆ ಸರ್ವಜ್ಞ.

ಸಿರಿಸಂಪದಗಳು ಇರುವಾಗ ನಲಿವು ನೆಮ್ಮದಿಯನ್ನು ಪಡೆಯದೆ, ಇತರರಿಗೂ ನೆರವಾಗದೆ, ಎಲ್ಲವನ್ನೂ ಕೂಡಿಟ್ಟುಕೊಂಡಿರುವವನ ಸಂಪತ್ತು ಹೇಗೆ ಬೇರೆಯವರ ಪಾಲಾಗುತ್ತದೆ ಎಂಬುದನ್ನು ರೂಪಕವೊಂದರ ಮೂಲಕ ಹೇಳಲಾಗಿದೆ.

(ಕೊಟ್ಟು+ಉಂಬ; ಕೊಟ್ಟು=ದಾನ ಮಾಡಿ/ಇತರರಿಗೂ ನೆರವು ನೀಡಿ; ಉಂಬ=ಉಣ್ಣುವ/ಜೀವನದಲ್ಲಿ ನಲಿವು ನೆಮ್ಮದಿಗಳನ್ನು ಪಡೆಯುವ; ಕಾಲದಲಿ=ಸಮಯದಲ್ಲಿ; ಕೊಟ್ಟು+ಉಣ್ಣಲು+ಒಲ್ಲದವ; ಒಲ್ಲದವ=ಬಯಸದವನು; ಹುಟ್ಟಿ=ಜೇನುಗೂಡು; ಜೇನು+ಇಟ್ಟು;

ಹುಟ್ಟಿಯ ಮೇಲೆ ಜೇನಿಟ್ಟು=ಜೇನು ಹುಳುಗಳು ಮರದ ರೆಂಬೆಕೊಂಬೆಗಳಲ್ಲಿ/ಕಲ್ಲಿನ ಪೊಟರೆಗಳಲ್ಲಿ ಗೂಡನ್ನು ಕಟ್ಟಿ ಹೂಗಳ ಮಕರಂದವನ್ನು ಹೀರಿತಂದು ಸಿಹಿಜೇನನ್ನು ತಯಾರಿಸುತ್ತವೆ; ಪರರಿಗೆ=ಇತರರಿಗೆ; ಹೋಹ+ಅಂತೆ=ಹೋಗುವಂತೆ; ಹೋಹ=ಹೋಗುವ; ಅಂತೆ=ಹಾಗೆ;

ಪರರಿಗೆ ಕೊಟ್ಟು ಹೋಹಂತೆ=ಜೇನಿನ ಹುಳುಗಳು ತಾವು ತಯಾರಿಸಿದ ಜೇನನ್ನು ಸವಿಯುವುದಕ್ಕೆ ಮುನ್ನವೇ, ಇತರ ವ್ಯಕ್ತಿಗಳು ಜೇನು ಹುಳುಗಳನ್ನು ಚದುರಿಸಿ, ಜೇನುಹುಟ್ಟನ್ನು ಬಿಚ್ಚಿ, ಸಿಹಿಯಾದ ಜೇನನ್ನು ತಾವು ಸವಿಯುತ್ತಾರೆ/ಈ ರೀತಿ ಸಿಹಿಯಾದ ಜೇನು ಇತರರ ಪಾಲಾಗುವಂತೆ.)



೩೨. ಕೊಟ್ಟುದು ತನಗೆ ಬಯಿಚಿಟ್ಟುದು ಪರರಿಗೆ
ಕೊಟ್ಟುದು ಕೆಟ್ಟಿತೆನೆಬೇಡವದು ಮುಂದೆ
ಕಟ್ಟಿದ ಬುತ್ತಿ ಸರ್ವಜ್ಞ.

ಇತರರ ಸಂಕಟಕ್ಕೆ ಮರುಗಿ ಮಾಡುವ ದಾನವು ಜೀವನದಲ್ಲಿ ನಮಗೆ ಒಳಿತನ್ನು ಉಂಟುಮಾಡುತ್ತದೆಯೆಂಬ ಜನಸಮುದಾಯದ ನಂಬಿಕೆಯನ್ನು ಈ ವಚನದಲ್ಲಿ ಹೇಳಲಾಗಿದೆ.

(ಕೊಟ್ಟುದು=ಇತರರಿಗೆ ನೆರವಾಗಲೆಂದು ನೀಡಿದ ಉಣಿಸು/ವಸ್ತು/ಹಣ; ತನಗೆ=ದಾನಿಗೆ/ದಾನ ಮಾಡಿದವನಿಗೆ; ಕೊಟ್ಟುದು ತನಗೆ=ದಾನ ಮಾಡುವುದರಿಂದ ದಾನಿಗೆ ಒಳಿತಾಗುವುದೆಂಬ ನಂಬಿಕೆ ನಮ್ಮ ಸಮಾಜದಲ್ಲಿದೆ;

ಬಯಿಚಿಟ್ಟುದು=ಯಾರಿಗೂ ನೀಡದೆ ಅಡಗಿಸಿ ಇಟ್ಟಿದ್ದು/ ಹಿಂದಿನ ಕಾಲದಲ್ಲಿ ಬೆಲೆಬಾಳುವ ಒಡವೆಗಳನ್ನು ಮತ್ತು ಚಿನ್ನಬೆಳ್ಳಿಯ ನಾಣ್ಯಗಳನ್ನು ನೆಲದೊಳಗೆ/ಮರದ ಪೊಟರೆ/ಇನ್ನಿತರ ಕಡೆಗಳಲ್ಲಿ ಬಚ್ಚಿಡುತ್ತಿದ್ದರು; ಪರರಿಗೆ=ಇತರರ ಪಾಲಾಗುತ್ತದೆ/ ವಶವಾಗುತ್ತದೆ; ಕೆಟ್ಟಿತು+ಎನಬೇಡ+ಅದು; ಅದು=ಮಾಡಿದ ದಾನ; ಕೆಟ್ಟಿತು=ಹಾಳಾಯಿತು/ ನಾಶವಾಯಿತು/ಉಪಯೋಗವಿಲ್ಲದಂತಾಯಿತು; ಎನಬೇಡ=ಅಂದುಕೊಳ್ಳಬೇಡ;

ಮುಂದೆ=ಮುಂದಿನ ಜೀವನದ ಆಗುಹೋಗುಗಳಲ್ಲಿ; ಕಟ್ಟಿದ ಬುತ್ತಿ=ದೂರದ ಊರಿಗೆ ಹೋಗುವವರು ಹಾದಿಯ ನಡುವೆ ತಂಗಿದಾಗ ಉಣಲೆಂದು ಜತೆಯಲ್ಲಿ ತೆಗೆದುಕೊಂಡು ಹೋಗುತ್ತಿದ್ದ ತಿನಸು/ಉಣಿಸಿನ ಗಂಟು;

ಕಟ್ಟಿದ ಬುತ್ತಿ–ಈ ಪದಕಂತೆಯು ಇಲ್ಲಿ ಒಂದು ನುಡಿಗಟ್ಟಾಗಿ ಬಳಕೆಯಾಗಿದೆ. ಇತರರ ಹಸಿವು/ಸಂಕಟ/ನೋವಿಗೆ ಮಿಡಿದು ನಾವು ಮಾಡಿದ ದಾನವು ಮುಂದೊಂದು ದಿನ ನಮಗೆ ಸಂಕಟ ಬಂದಾಗ ನಮ್ಮನ್ನು ಕಾಪಾಡುತ್ತದೆ. ಅಂದರೆ ಮತ್ತೊಬ್ಬರು ನಮಗೆ ನೆರವನ್ನು ನೀಡುತ್ತಾರೆ ಎಂಬ ನಂಬಿಕೆಯು ಜನಮನದಲ್ಲಿ ನೆಲೆಯೂರಿದೆ)



೩೩. ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು
ಮೇಟಿಯಿಂ ರಾಟೆ ನಡೆದುದಲ್ಲದೆ ದೇಶ
ದಾಟವೆ ಕೆಡುಗು ಸರ್ವಜ್ಞ.

ಜೀವಿಗಳ ಹಸಿವನ್ನು ತಣಿಸುವುದಕ್ಕಾಗಿ ರಾಗಿ, ಬತ್ತ ಮುಂತಾದ ನೂರೆಂಟು ಬಗೆಯ ಬೆಳೆಗಳನ್ನು ಬೆಳೆಯುವ ಬೇಸಾಯದ ವಿದ್ಯೆಯೇ ಮಾನವನ ಎಲ್ಲಾ ಬಗೆಯ ಕಸುಬುಗಳಿಗಿಂತಲೂ ದೊಡ್ಡದೆಂಬುದನ್ನು ಹೇಳಲಾಗಿದೆ.

(ಕೋಟಿ=ಒಂದು ನೂರು ಲಕ್ಷವನ್ನು ಸೂಚಿಸುವ ಅಂಕಿ; ಕೋಟಿ ವಿದ್ಯೆ= ಬಹುಬಗೆಯ ತಿಳುವಳಿಕೆ/ಕುಶಲತೆ/ ಕಸುಬು; ಮೇಟಿ ವಿದ್ಯೆ=ಬೇಸಾಯವನ್ನು ಮಾಡುವ ಕುಶಲತೆ ಮತ್ತು ಕಸುಬು; ಮೇಟಿ=೧. ಉಳುವ ನೇಗಿಲಿನ ಹಿಡಿ. ೨. ರಾಗಿ/ಬತ್ತ/ ಜೋಳ ಮುಂತಾದ ಬೆಳೆಗಳನ್ನು ಒಕ್ಕಣೆ ಮಾಡುವಾಗ ಕಣದ ನಟ್ಟನಡುವೆ ನೆಡುವ ಮರದ ದಪ್ಪನೆಯ ಕಂಬ;

ರಾಟೆ ನಡೆದುದು+ಅಲ್ಲದೆ; ಮೇಲು=ದೊಡ್ಡದು; ರಾಟೆ=ನೂಲು ತೆಗೆಯುವ ಚರಕ/ಗಾಲಿ/ಚಕ್ರ; ರಾಟೆ ನಡೆಯುವುದು=ಇದು ಒಂದು ನುಡಿಗಟ್ಟು. ಕೆಲಸಗಳು ಚೆನ್ನಾಗಿ ನಡೆಯುವುದು ಎಂಬ ತಿರುಳಿನಲ್ಲಿ ಬಳಕೆಯಾಗುತ್ತದೆ; ಮೇಟಿ+ಇಂ; ಇಂ=ಇಂದ;

ಮೇಟಿಯಿಂ ರಾಟೆ ನಡೆದುದು=ಬೇಸಾಯದಿಂದಲೇ ದೇಶದ ಸಾಮಾಜಿಕ ಬದುಕು, ಆಚರಣೆ ಮತ್ತು ನಾಗರಿಕತೆಗಳು ಉಳಿದು ಬೆಳೆದು ಬಾಳುತ್ತಿವೆ; ಅಲ್ಲದೆ=ಬೇಸಾಯ ನಡೆಯದಿದ್ದರೆ; ದೇಶದ+ಆಟವೇ=ದೇಶದ ಎಲ್ಲಾ ಬಗೆಯ ಚಟುವಟಿಕೆಗಳು; ಆಟ=ಚಟುವಟಿಕೆ/ಆಗು ಹೋಗು/ಕೆಲಸ; ಕೆಡುಗು= ನಾಶವಾಗುತ್ತವೆ/ಹಾಳಾಗುತ್ತವೆ)



೩೪. ಕೋಟಿ ವಿದ್ಯವನೋದಿ ಪಾಟಿ ಮಾಡಿದರೇನು
ಕೂಟಸ್ಥವಿಲ್ಲದವನೋದು ಗಿಳಿ ಕಲಿತ
ಪಾಠದಂತಿಕ್ಕು ಸರ್ವಜ್ಞ.

ಅಕ್ಕರದ ಮೂಲಕ ವಿದ್ಯೆಯನ್ನು ಪಡೆದ ವ್ಯಕ್ತಿಯು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡದಿದ್ದರೆ, ಅಂತಹ ವ್ಯಕ್ತಿಯ ಓದಿನಿಂದ ಯಾವುದೇ ಪ್ರಯೋಜನವಿಲ್ಲ ವೆಂಬುದನ್ನು ಹೇಳಲಾಗಿದೆ.

(ಕೋಟಿ=ಒಂದು ನೂರು ಲಕ್ಷವನ್ನು ಸೂಚಿಸುವ ಅಂಕಿ; ವಿದ್ಯವನು+ಓದಿ; ವಿದ್ಯೆ=ತಿಳುವಳಿಕೆ/ ಕುಶಲತೆ/ಕಸುಬು; ಕೋಟಿ ವಿದ್ಯವನೋದಿ=ಹೆಚ್ಚಿನ ಪ್ರಮಾಣದಲ್ಲಿ ಬಹು ಬಗೆಯ ವಿದ್ಯೆಗಳನ್ನು ಕಲಿತು; ಪಾಟಿ=ಸೊಗಸು/ಸುಂದರ; ಪಾಟಿ ಮಾಡಿದರೆ=ದೊಡ್ಡ ವಿದ್ಯಾವಂತನೆಂಬ ಹೆಸರನ್ನು ಗಳಿಸಿದರೆ; ಮಾಡಿದರೆ+ಏನು;

ಕೂಟಸ್ಥ+ಇಲ್ಲದವನ+ಓದು; ಕೂಟಸ್ಥ=ಜನಸಮುದಾಯ/ಸಮಾಜದೊಡನೆ ಕೂಡಿಕೊಂಡಿರುವುದು; ಕೂಟಸ್ಥವಿಲ್ಲದವನೋದು=ಜನಸಮುದಾಯದ ಜತೆಯಲ್ಲಿ ಒಂದಾಗಿ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡದ ವಿದ್ಯೆ;

ಗಿಳಿ ಕಲಿತ ಪಾಠ=ಇದು ಒಂದು ನುಡಿಗಟ್ಟಾಗಿ ಬಳಕೆಯಾಗಿದೆ. ಕಲಿತಿರುವುದನ್ನು ಮತ್ತೆ ಮತ್ತೆ ಅದೇ ರೀತಿ ಉಚ್ಚರಿಸುವುದು/ಓದಿನಿಂದ ಯಾವುದೇ ಬಗೆಯ ಅರಿವನ್ನಾಗಲಿ/ ಒಳ್ಳೆಯ ನಡೆನುಡಿಗಳನ್ನಾಗಲಿ ಕಲಿಯದಿರುವುದು;

ಪಾಠದ+ಅಂತೆ+ಇಕ್ಕು; ಅಂತೆ=ಹಾಗೆ; ಇಕ್ಕು=ಇರುವುದು/ಕಂಡುಬರುವುದು; ಪಾಠ=ಪುಸ್ತಕದಲ್ಲಿನ ಬರಹದ ವಿಚಾರ).



೭೫. ಕೋಡಿಯನು ಕಟ್ಟಿದರೆ ಕೇಡಿಲ್ಲವಾ ಕೆರೆಗೆ
ಮಾಡು ಧರ‍್ಮಗಳ ಮನಮುಟ್ಟಿ ಕಾಲನಿಗೆ
ಈಡಾಗದ ಮುನ್ನ ಸರ್‍ವಜ್ಞ.

ಸಿರಿವಂತಿಕೆಯು ಇದ್ದಾಗ ಬಡವರಿಗೆ ಮತ್ತು ಜೀವನದಲ್ಲಿ ನೊಂದವರಿಗೆ ನೆರವನ್ನು ನೀಡುವುದರಿಂದ ನಮಗೆ ಒಳಿತಾಗುತ್ತದೆಯೆಂಬುದನ್ನು ಹೇಳಲಾಗಿದೆ.

(ಕೋಡಿ=ಹರಿಯುತ್ತಿರುವ ನೀರಿಗೆ ಅಡ್ಡಗಟ್ಟೆಯನ್ನು ಹಾಕಿ ಕೆರೆಗೆ ಏರಿಯನ್ನು ಕಟ್ಟಿದಾಗ, ಕೆರೆಯು ತುಂಬಿ ತುಳುಕಿ ಹೆಚ್ಚಾದ ನೀರು ಹೊರಕ್ಕೆ ಹರಿದು ಹೋಗಲು ಮಾಡಿರುವ ಜಾಗ; ಕೇಡು+ಇಲ್ಲವು+ಆ; ಕೇಡು=ಹಾನಿ/ತೊಂದರೆ/ಅಪಾಯ;

ಕೇಡಿಲ್ಲವಾ ಕೆರೆಗೆ=ಕೆರೆಯಲ್ಲಿ ಹೆಚ್ಚಾದ ನೀರು ಕೋಡಿಯ ಮೂಲಕ ಹೊರಹರಿದು ಏರಿಯು ಒಡೆದು ಹಾಳಾಗದೆ ಆ ಕೆರೆಯು ಉಳಿಯುತ್ತದೆ;

ಧರ‍್ಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿ; ಮನಮುಟ್ಟಿ=ಒಳ್ಳೆಯ ಉದ್ದೇಶದಿಂದ; ಮಾಡು ಧರ‍್ಮಗಳ ಮನಮುಟ್ಟಿ=ಒಳ್ಳೆಯ ಉದ್ದೇಶದಿಂದ ಇತರರಿಗೆ ನೆರವನ್ನು ನೀಡುವುದು;

ಕಾಲ=ಯಮ/ಸಾವು; ಈಡು+ಆಗದ; ಈಡು=ಗುರಿ/ವಶ; ಮುನ್ನ=ಮೊದಲು/ ಮುಂಚೆ; ಕಾಲನಿಗೆ ಈಡಾಗದ ಮುನ್ನ=ಸಾವು ಬರುವುದಕ್ಕೆ ಮೊದಲು/ಮಯ್ ಮನಗಳಲ್ಲಿ ಕಸುವು ಇರುವಾಗ)



೩೬. ಕ್ಷಣಮಾತ್ರವಾದೊಡಂ ಗುಣಿಗಳೊಡನಾಡುವುದು
ಗುಣಹೀನರುಗಳ ಒಡನಾಡೆ ಬಹುದುಃಖ
ದಣಲೊಳಿರ್ದಂತೆ ಸರ್ವಜ್ಞ.

ಕೆಟ್ಟ ನಡೆನುಡಿಯುಳ್ಳವರ ಒಡನಾಟದಿಂದ ಉಂಟಾಗುವ ಹಾನಿಯ ಬಗ್ಗೆ ಎಚ್ಚರಿಕೆಯನ್ನು ನೀಡಲಾಗಿದೆ.

(ಕ್ಷಣಮಾತ್ರವು+ಆದೊಡಂ; ಕ್ಷಣ=ಗಳಿಗೆ/ಸಮಯ; ಕ್ಷಣಮಾತ್ರ=ತುಸು/ಕೆಲ ಸಮಯ; ಆದೊಡಂ=ಆದರೂ; ಗುಣಿಗಳ+ಒಡನೆ+ಆಡುವುದು; ಗುಣಿ= ಗುಣವುಳ್ಳವನು/ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿ; ಒಡನೆ=ಜತೆಯಲ್ಲಿ/ಸಂಗಡ; ಆಡುವುದು=ವ್ಯವಹರಿಸುವುದು/ನೆಂಟನ್ನು ಹೊಂದುವುದು; ಗುಣ=ಒಳ್ಳೆಯ ನಡೆನುಡಿ; ಹೀನ=ಇಲ್ಲದ/ಕೆಟ್ಟ/ಕೀಳು;

ಗುಣಹೀನ=ಒಳ್ಳೆಯ ನಡೆನುಡಿಯಿಲ್ಲದ ವ್ಯಕ್ತಿ; ಒಡನೆ+ಆಡೆ; ಆಡೆ=ಆಡಿದರೆ/ ವ್ಯವಹರಿಸಿದರೆ; ಬಹುದುಃಖದ+ಅಣಲ್+ಒಳ್+ಇರ್ದ+ಅಂತೆ; ಬಹು=ಹೆಚ್ಚು/ತುಂಬ/ ಅನೇಕ; ದುಃಖ=ಸಂಕಟ/ನೋವು/ಯಾತನೆ;

ಅಣಲು=ಬಾಯಿಯ ಒಳಗಡೆ/ಬಾಯಲ್ಲಿ/ದವಡೆ; ಒಳ್=ಅಲ್ಲಿ/ಒಳಗೆ; ಇರ್ದ=ಇದ್ದ; ಅಂತೆ=ಹಾಗೆ;

ಬಹುದುಃಖದಣಲ್= ಯಾವಾಗಲೂ ಒಂದಲ್ಲ ಒಂದು ಬಗೆಯಸಂಕಟ/ಯಾತನೆ/ ಅಪಮಾನ/ನೋವು ಉಂಟಾಗುತ್ತಿರುವ ಜಾಗ ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ).



೩೭. ಗುಡಿಯ ಬೋದಿಗೆ ಕಲ್ಲು ನಡುವೆ ರಂಗ ತಾ ಕಲ್ಲು
ಹೊಡವಡಿಸಿ ಕೊಂಬಡದು ಕಲ್ಲು ಲಿಂಗವಿ
ದ್ದೆಡೆಯನಾರರಿಗು ಸರ್ವಜ್ಞ.

ಕಲ್ಲ ದೇಗುಲದಲ್ಲಿ ದೇವರು ಇರುವ ಎಡೆಯನ್ನು ತಿಳಿಯಲಾಗದ ಬಗೆಯನ್ನು ಹೇಳಲಾಗಿದೆ.

(ಗುಡಿ=ದೇಗುಲ/ದೇವರ ಮಂದಿರ; ಬೋದಿಗೆ=ಕಂಬದ ಮೇಲೆ ತೊಲೆಯನ್ನು ಇಡಲು ಬಳಸುವ ವಸ್ತು; ನಡುವೆ=ದೇವರ ವಿಗ್ರಹದ ಮುಂದಿನ ಜಾಗ; ರಂಗ=ದೇವರ ಮುಂದೆ ನಾಟ್ಯ ಸಂಗೀತ ಮುಂತಾದ ಕಲೆಗಳನ್ನು ತೋರಿಸಲು ಮಾಡಿರುವ ವೇದಿಕೆ/ಜಾಗ;

ತಾ=ಅದು; ಹೊಡವಡು=ಹೊಡೆ+ಪಡು; ಹೊಡೆ=ಹೊಟ್ಟೆ/ಒಡಲು; ಪಡು=ಮಲಗು/ಒರಗು; ಹೊಡವಡು=ಇಡೀ ಮಯ್ಯನ್ನು ನೆಲದ ಮೇಲೊಡ್ಡಿ ತಲೆಬಾಗಿ ನಮಿಸುವುದು; ಕೊಂಬಡೆ+ಅದು; ಕೊಂಬಡೆ=ಕೊಳ್ಳುವುದೆಂದರೆ; ಕೊಂಬ=ಕೊಳುವ;

ಹೊಡವಡಿಸಿ ಕೊಂಬಡದು ಕಲ್ಲು=ದಿಂಡುರುಳಿ ನಮಸ್ಕರಿಸಿಕೊಳ್ಳುತ್ತಿರುವ ದೇವರ ವಿಗ್ರಹವೂ ಕಲ್ಲು; ಲಿಂಗ+ಇದ್ದ+ಎಡೆಯನ್+ಆರ್+ಅರಿಗು;

ಲಿಂಗ=ದೇವರಾದ ಶಿವ; ಇದ್ದ=ಇರುವ; ಎಡೆ=ಜಾಗ/ನೆಲೆ; ಅನ್=ಅನ್ನು; ಆರ್=ಯಾರು; ಅರಿ=ತಿಳಿ; ಆರರಿಗು=ಯಾರು ತಾನೆ ತಿಳಿದಿದ್ದಾರೆ).



೩೮. ಜಡೆಯ ಕಟ್ಟಲುಬಹುದು ಕಡವಸವನುಡಬಹುದು
ಬಿಡದೆ ದೇಗುಲದೊಳಿರಬಹುದು ಕರಣಗಳ
ತಡೆದು ನಿಲಬಾರದು ಸರ್ವಜ್ಞ.

ಹೊರ ಮಯ್ಯನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವಂತೆ ತೋರಿಸಿಕೊಳ್ಳಬಹುದೇ ಹೊರತು, ಒಳ ಮನಸ್ಸು ಮಾತ್ರ ಬಯಕೆಗಳ ಒಳಮಿಡಿತದಿಂದ ತಲ್ಲಣಿಸುತ್ತಿರುತ್ತದೆ ಎಂಬುದನ್ನು ಹೇಳಲಾಗಿದೆ.

(ಜಡೆ ಕಟ್ಟುವುದು=ಹೆಂಡತಿ ಮಕ್ಕಳ ನೆಂಟನ್ನು ತೊರೆದು ಇಲ್ಲವೇ ಮದುವೆಯನ್ನೇ ಆಗದೆ ಸಂನ್ಯಾಸವನ್ನು ಪಡೆಯುವುದು/ತಮ್ಮ ತಲೆಯ ಜುಟ್ಟನ್ನು ಮೇಲಕ್ಕೆ ಎತ್ತಿಕಟ್ಟಿಕೊಳ್ಳುವುದು ರಿಸಿಮುನಿಗಳ/ವಿರಾಗಿಗಳ ಸಂಪ್ರದಾಯವಾಗಿತ್ತು;

ಕಡವಸವನು+ಉಡಬಹುದು; ಕಡವಸ=ಜಿಂಕೆಯ ತೊಗಲು. ಇದನ್ನು ರಿಸಿಮುನಿಗಳು ಮಯ್ಯನ್ನು ಮುಚ್ಚಿಕೊಳ್ಳಲು/ಜಪವನ್ನು ಮಾಡುವಾಗ ಕುಳಿತುಕೊಳ್ಳಲು ಬಳಸುತ್ತಿದ್ದರು; ಉಡು=ಉಟ್ಟುಕೊಳ್ಳುವುದು/ಸುತ್ತಿಕೊಳ್ಳುವುದು; ಬಿಡದೆ=ಯಾವಾಗಲೂ/ಸದಾ ಕಾಲ; ದೇಗುಲದೊಳು+ಇರಬಹುದು;

ದೇಗುಲ=ದೇವ+ಕುಲ; ಕುಲ=ಮನೆ/ಮಂದಿರ/ನೆಲೆ; ದೇಗುಲ=ದೇವರ ವಿಗ್ರಹವಿರುವ ಮಂದಿರ; ಕರಣಗಳು=ಕಣ್ಣು–ಕಿವಿ–ಮೂಗು–ನಾಲಗೆ–ತೊಗಲು ಎಂಬ ಅಯ್ದು ಬಗೆಯ ಅಂಗಗಳು;

ತಡೆ=ಹತೋಟಿಯಲ್ಲಿಡು/ಹದ್ದುಬಸ್ತಿನಲ್ಲಿಡು; ನಿಲಬಾರ=ನಿಲ್ಲಿಸಲು ಬಾರದು/ಆಗುವುದಿಲ್ಲ; ಕರಣಗಳ ತಡೆದು ನಿಲಬಾರದು=ಮನದಲ್ಲಿ ಬಯಕೆಗಳ ಒಳಮಿಡಿತಗಳು ಉಂಟಾಗಲು/ಕೆರಳಲು ಕಾರಣವಾಗುವ ಅಯ್ದು ಇಂದ್ರಿಯಗಳನ್ನು ಹತೋಟಿಯಲ್ಲಿಡಲಾಗದು).



೩೯. ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ
ಜಾತಿ ವಿಜಾತಿಯೆನಬೇಡ ಶಿವನೊಲಿ
ದಾತನೇ ಜಾತ ಸರ್ವಜ್ಞ.

ಮೇಲು-ಕೀಳೆಂಬ ಜಾತಿ ಮೆಟ್ಟಲುಗಳಿಂದ ಕೂಡಿರುವ ಸಮಾಜದಲ್ಲಿ "ಜಾತಿ ಎನ್ನುವುದು ಮಾನವರೇ ಕಟ್ಟಿಕೊಂಡಿರುವ ಒಂದು ಸಾಮಾಜಿಕ ರಚನೆ. ಆದುದರಿಂದ ಜಾತಿ ಎಂಬುದು ಮಾನವನ ದೇಹದಲ್ಲಿಲ್ಲ; ಮನದಲ್ಲಿ ನೆಲೆಸಿದೆ. ಜಾತಿಯ ಕಾರಣಕ್ಕಾಗಿ ಯಾವುದೇ ವ್ಯಕ್ತಿಯನ್ನು ಮೆಚ್ಚಿಕೊಳ್ಳಬಾರದು ಇಲ್ಲವೆ ಕಡೆಗಣಿಸಬಾರದು. ವ್ಯಕ್ತಿಯಲ್ಲಿರುವ ಒಳ್ಳೆಯ ನಡೆನುಡಿಗಳನ್ನು ಮಾತ್ರ ಗುರುತಿಸಬೇಕು." ಎಂಬ ಅರಿವನ್ನು ಮೂಡಿಸಲು ರೂಪಕವೊಂದರ ಮೂಲಕ ಹೇಳಲಾಗಿದೆ. ಬೆಳಗುತ್ತಿರುವ ಜ್ಯೋತಿಯು ಇಲ್ಲಿ ರೂಪಕವಾಗಿದೆ.

(ಹೀನ=ಕೀಳಾದವನು; ಜಾತಿಹೀನ=ಸಾಮಾಜಿಕ ರಚನೆಯಲ್ಲಿ ಕೆಳಜಾತಿಯವನೆಂದು ಜನಸಮುದಾಯದ ಕಡೆಗಣಿಸುವಿಕೆಗೆ ಗುರಿಯಾದವನು; ಜ್ಯೋತಿ=ಉರಿಯುತ್ತಿರುವ ಹಣತೆಯಿಂದ ಹೊರಹೊಮ್ಮುತ್ತಿರುವ ಬೆಳಕಿನ ಕಿರಣಗಳು;

ಜ್ಯೋತಿ ಹೀನವೇ=ಎಲ್ಲೆಡೆಯಲ್ಲಿಯು ಬೆಳಗುತ್ತಿರುವ ಜ್ಯೋತಿಯ ಕಿರಣಗಳಲ್ಲಿ ಮೇಲು ಕೀಳೆಂಬುದಿಲ್ಲ; ವಿಜಾತಿಯು+ಎನಬೇಡ; ವಿಜಾತಿ=ಬೇರೆ ಜಾತಿ;

ಜಾತಿ ವಿಜಾತಿ ಎನಬೇಡ=ತನ್ನ ಜಾತಿಯು ಮೇಲು ಮತ್ತೊಬ್ಬನ ಜಾತಿಯು ಕೀಳು ಎಂಬ ಒಳಮಿಡಿತದಿಂದ ವ್ಯಕ್ತಿಗಳನ್ನು ನೋಡಬೇಡ; ಶಿವನ+ಒಲಿದ+ಆತನೇ; ಶಿವನ=ಶಿವನನ್ನು; ಒಲಿದ=ಮೆಚ್ಚಿದ/ನಂಬಿರುವ/ಪೂಜಿಸುವ; ಶಿವನೊಲಿದಾತನೇ=ಒಳ್ಳೆಯ ನಡೆನುಡಿಗಳನ್ನೇ ಶಿವನೆಂದು ನಂಬಿರುವ ವ್ಯಕಿಯೇ; ಜಾತ=ಹುಟ್ಟಿದವನು/ ಒಳ್ಳೆಯ ವ್ಯಕ್ತಿ).



೪೦. ತನ್ನ ದೋಷವ ನೂರ ಬೆನ್ನ ಹಿಂದಕೆ ಇರಿಸಿ
ಅನ್ಯನೊಂದಕ್ಕೆ ಹುಲಿಯಪ್ಪ ಮಾನವನು
ಕುನ್ನಿಯಲ್ಲೇನು ಸರ್ವಜ್ಞ.

ತನ್ನ ನಡೆನುಡಿಯಲ್ಲಿನ ನೂರಾರು ತಪ್ಪುಗಳನ್ನು ಮರೆಮಾಚಿಕೊಂಡು, ಮತ್ತೊಬ್ಬರು ಮಾಡುವ ಒಂದು ತಪ್ಪನ್ನೇ ದೊಡ್ಡದಾಗಿ ಎತ್ತಿಹಿಡಿದು ಅಬ್ಬರಿಸುವಂತಹ ವ್ಯಕ್ತಿಯ ನೀಚತನದ ವರ್ತನೆಯನ್ನು ಹೇಳಲಾಗಿದೆ.

(ದೋಷ=ಕೆಟ್ಟ ನಡೆನುಡಿ; ತನ್ನ ದೋಷವ ನೂರ=ವ್ಯಕ್ತಿಯೊಬ್ಬನು ತಾನು ಮಾಡಿರುವ ಹಲವಾರು ಬಗೆಯ ತಪ್ಪುಗಳನ್ನು; ನೂರು=ಒಂದು ಅಂಕಿ/ಬಗೆಬಗೆಯ;

ಬೆನ್ನ ಹಿಂದಕೆ ಇರಿಸಿ=ಕಡೆಗಣಿಸಿ/ಮರೆಮಾಚಿ/ಮುಚ್ಚಿಟ್ಟುಕೊಂಡು; ಅನ್ಯನ+ಒಂದಕ್ಕೆ; ಅನ್ಯ=ಬೇರೆ/ಇತರ; ಅನ್ಯನ=ಮತ್ತೊಬ್ಬನ; ಹುಲಿಯು+ಅಪ್ಪ=ಹುಲಿಯಂತೆ ಅಬ್ಬರಿಸುವ/ಸಿಡಿಮಿಡಿಗೊಳ್ಳುವ/ಕೆರಳುವ/ಕೋಪಗೊಳ್ಳುವ; ಅಪ್ಪ=ಆಗುವ;

ಮಾನವನು=ವ್ಯಕ್ತಿಯು; ಕುನ್ನಿಯು+ಅಲ್ಲೇನು=ನಾಯಿಯಲ್ಲವೇ; ಕುನ್ನಿ=ನಾಯಿ/ನಾಯಿಮರಿ; ಅಲ್ಲೇನು=ಅಲ್ಲವೇನು; 'ಕುನ್ನಿ' ಎಂಬ ಪದ ಬಯ್ಗುಳವಾಗಿ ಬಳಕೆಯಾಗಿದೆ.



೪೧. ತನ್ನ ಮುಖ ಬೆನ್ನುಗಳು ತನ್ನ ಕಣ್ಣಿಗೆ ಮರೆಯು
ತನ್ನ ಗುಣದೋಷಗಳನರಿಯೆ ಇದನರಿದ
ಇನ್ನೊಬ್ಬ ಬೇಕು ಸರ್ವಜ್ಞ.

ನಮ್ಮ ತಪ್ಪು ಒಪ್ಪುಗಳು ನಮಗೆ ತಿಳಿಯುವುದಿಲ್ಲ; ಇತರರು ನಮ್ಮ ನಡೆನುಡಿಯನ್ನು ಒರೆಹಚ್ಚಿ ನೋಡಿ ಹೇಳುವಂತಾದಾಗ ನಮ್ಮ ವ್ಯಕ್ತಿತ್ವದಲ್ಲಿನ ಒಳಿತು=ಕೆಡುಕಿನ ಸಂಗತಿಗಳು ನಮಗೆ ಮನವರಿಕೆಯಾಗುತ್ತವೆ ಎಂಬುದನ್ನು ಹೇಳಲಾಗಿದೆ.

(ಮರೆ=ಕಾಣುವುದಿಲ್ಲ/ಗೋಚರಿಸುವುದಿಲ್ಲ; ತನ್ನ=ಯಾವುದೇ ಒಬ್ಬ ವ್ಯಕ್ತಿಯ; ಗುಣದೋಷಗಳನು+ಅರಿಯೆ; ಗುಣ=ಒಳ್ಳೆಯ ನಡೆ ನುಡಿ;

ದೋಷ=ಕುಂದು/ಕೊರತೆ/ತಪ್ಪು/ಕೆಟ್ಟತನ; ಅರಿಯೆ=ತಿಳಿಯಲು; ಇದನು+ಅರಿದ; ಇದನ್ನರಿದ=ಇದನ್ನು ತಿಳಿದ; ಇನ್ನೊಬ್ಬ=ಮತ್ತೊಬ್ಬ/ಬೇರೆಯವನು; ಬೇಕು=ಅಗತ್ಯವಿದೆ; ಅರಿ=ತಿಳಿ/ಕಾಣು).



೪೨. ತಪ್ಪ ಸಾಧಿಪ ನೃಪನೊಳಿಪ್ಪವನವನೆಗ್ಗ
ಸರ್ಪನ ಹೆಡೆಯ ನೆಳಲೆಂದು ಸಾರಿದ
ಕಪ್ಪೆಯಂತಕ್ಕು ಸರ್ವಜ್ಞ.

ಮಾಡಿದ ತಪ್ಪನ್ನೇ ಸರಿಯೆಂದು ವಾದಮಾಡುವ ರಾಜನ, ಒಡೆಯನ, ಮೇಲಿನ ಗದ್ದುಗೆಯಲ್ಲಿರುವ ವ್ಯಕ್ತಿಯ ಜತೆಗಿನ ಒಡನಾಟ, ನೆಂಟು, ವ್ಯವಹಾರ ಒಳ್ಳೆಯದಲ್ಲವೆಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ತಪ್ಪು=ಆಡುವ ಮಾತು/ಮಾಡುವ ಕೆಲಸದಲ್ಲಿ ಸರಿಯಲ್ಲದ್ದು; ಸಾಧಿಪ=ಸರಿಯೆಂದು ವಾದಿಸುವವನು; ತಪ್ಪ ಸಾಧಿಪ=ತನ್ನಿಂದಾಗಿರುವ ಕೇಡು/ವಂಚನೆ/ಹಾನಿಯನ್ನು ಸರಿಯೆಂದು ಮೊಂಡುಹಿಡಿದು ಮಾತನಾಡುವವನು;

ನೃಪನೊಳ್+ಇಪ್ಪವನ್+ಅವನ್+ಎಗ್ಗ; ನೃಪ=ದೊರೆ/ಒಡೆಯ/ಯಜಮಾನ/ಮೇಲಿನ ಗದ್ದುಗೆಯಲ್ಲಿರುವವನು; ಒಳ್=ಬಳಿಯಲ್ಲಿ; ಇಪ್ಪ=ಇರುವ; ಇಪ್ಪವನ್=ಇರುವವನು; ಎಗ್ಗ=ದಡ್ಡ/ತಿಳಿಗೇಡಿ; ಸರ್ಪ=ಹಾವು; ಹೆಡೆ=ಅಗಲಗೊಂಡಾಗ ಕಂಡುಬರುವ ನಾಗರ ಹಾವಿನ ತಲೆಯ ಜಾಗ;

ಸರ್ಪನ ಹೆಡೆ=ನಾಗರಹಾವು ತನ್ನ ತಲೆಯನ್ನು ಅಗಲಿಸಿದಾಗ ಕಂಡು ಬರುವ ಆಕಾರ; ನೆಳಲು+ಎಂದು=ನೆರಳೆಂದು ತಿಳಿದು/ನಂಬಿ; ಸಾರು=ಸಮೀಪಿಸು/ಹತ್ತಿರಕ್ಕೆ ಹೋಗು; ಕಪ್ಪೆ+ಅಂತೆ+ಅಕ್ಕು; ಅಂತೆ=ಹಾಗೆ; ಅಕ್ಕು=ಆಗುವುದು;

ಸರ್ಪನ ಹೆಡೆಯ ನೆಳಲು=ಸಾವಿನ ಸಮೀಪದಲ್ಲಿರುವುದು/ಯಾವ ಗಳಿಗೆಯಲ್ಲಾದರೂ ಸಾವಿಗೀಡಾಗುವ ತಾಣ ಎಂಬ ತಿರುಳುಳ್ಳ ನುಡಿಗಟ್ಟು).



೪೩. ತೆಂಗಿಗೂ ಹಿರಿಯರಿಗೂ ಹಂಗು ಮಾಡಲು ಬೇಕು
ತೆಂಗಿನ ಮೊದಲ್ಗೆ ನೀರೆರೆಯೆ ಕಡೆಯಲಿ
ಹಿಂಗದೆ ಕೊಡುಗು ಸರ್ವಜ್ಞ.

ಎಳೆಯದಾಗಿರುವ ತೆಂಗಿನ ಸಸಿಯನ್ನು ಮತ್ತು ಮುಪ್ಪಿನಲ್ಲಿರುವ ಹಿರಿಯರನ್ನು ಒಲವು ನಲಿವಿನಿಂದ ಆರಯ್ಕೆ ಮಾಡಬೇಕೆಂಬ ತಿಳುವಳಿಕೆಯನ್ನು ನೀಡಲಾಗಿದೆ.

(ತೆಂಗು=ನೆಟ್ಟ ಸಸಿಯನ್ನು ಅಯ್ದಾರು ವರುಶಗಳ ಕಾಲ ಚೆನ್ನಾಗಿ ನೋಡಿಕೊಂಡರೆ, ಮುಂದೆ ನೂರು ವರುಶಗಳ ಕಾಲ ಬೆಳೆ ಕೊಡುವ ಮರ; ಹಿರಿಯರು=ನಮ್ಮ ಹುಟ್ಟಿಗೆ ಮತ್ತು ಬದುಕು ರೂಪುಗೊಳ್ಳುವುದಕ್ಕೆ ತಮ್ಮ ಮಯ್-ಮನಗಳ ಕಸುವನ್ನೆಲ್ಲಾ ನೀಡಿ, ಈಗ ಮುಪ್ಪಿನಲ್ಲಿರುವ ತಂದೆತಾಯಿ/ನಮ್ಮನ್ನು ಬೆಳೆಸಿದ ವ್ಯಕ್ತಿಗಳು;

ಹಂಗು=ನೆರವು/ಸಹಾಯ/ಉಪಚಾರ/ಸೇವೆ; ಹಂಗು ಮಾಡಲು ಬೇಕು=ತೆಂಗಿನ ಸಸಿಯು ಮರವಾಗಿ ಬೆಳೆಯಲು ಮತ್ತು ಹಿರಿಯರು ಮುಪ್ಪಿನಲ್ಲಿ ನೆಮ್ಮದಿಯಿಂದ ಇರಲು ಬೇಕಾದ ಆರಯ್ಕೆಯನ್ನು ಮಾಡಬೇಕು; ಮೊದಲ್ಗೆ= ಮೊದಲಿನಲ್ಲಿ ಅಂದರೆ ತೆಂಗು ಸಸಿಯಾಗಿದ್ದಾಗ;

ನೀರ+ಎರೆಯೆ; ನೀರ=ನೀರನ್ನು; ಎರೆ=ಸುರಿ/ಹಾಕು; ಕಡೆಯಲಿ=ಕಡೆಯಲ್ಲಿ/ಅನಂತರ; ಹಿಂಗು=ಕಡಿಮೆಯಾಗು/ಹಾಳಾಗು/ಕೆಡು; ಕೊಡುಗು=ಕೊಡುತ್ತದೆ/ನೀಡುತ್ತದೆ;

ಹಿಂಗದೆ ಕೊಡುಗು=ತೆಂಗಿನ ಮರವು ನಿರಂತರವಾಗಿ ಬೆಳೆಯನ್ನು ನೀಡುತ್ತದೆ/ಹಿರಿಯರ ಸೇವೆಯಿಂದ ಮನಸ್ಸಿಗೆ ನೆಮ್ಮದಿಯು ದೊರಕುತ್ತದೆ).



೪೪. ದಂತಪಂಕ್ತಿಗಳೊಳಗೆ ಎಂತಿಕ್ಕು ನಾಲಗೆಯು
ಸಂತತ ಖಳರ ಒಡನಿರ್ದು ಬಾಳುವು
ದಂತೆ ಕಂಡಯ್ಯ ಸರ್ವಜ್ಞ.

ಕೆಟ್ಟವರ ನಡುವೆ ಇರುವಾಗ ಅಪಾಯಕ್ಕೆ ಸಿಲುಕದೆ ಬಾಳುವ ಜಾಣತನದ ನಡೆನುಡಿಗಳನ್ನು ಹೊಂದಿರಬೇಕು ಎಂಬುದನ್ನು ಹೇಳಲಾಗಿದೆ.

(ದಂತ+ಪಂಕ್ತಿಗಳ+ಒಳಗೆ; ದಂತ=ಹಲ್ಲು; ಪಂಕ್ತಿ=ಸಾಲು; ಎಂತು+ಇಕ್ಕು; ಎಂತು=ಹೇಗೆ/ಯಾವ ರೀತಿ; ಇಕ್ಕು=ಇರುವುದು; ಸಂತತ=ಯಾವಾಗಲೂ/ಸದಾಕಾಲ;

ಖಳ=ನೀಚ/ಕೇಡಿ/ಮೋಸಗಾರ; ಒಡನೆ+ಇರ್ದು; ಒಡನೆ=ಜತೆಯಲ್ಲಿ/ಸಹವಾಸದಲ್ಲಿ; ಇರ್ದು=ಇದ್ದು; ಬಾಳುವುದು+ಅಂತೆ; ಅಂತೆ=ಹಾಗೆ; ಕಂಡ+ಅಯ್ಯ=ತಿಳಿದು ನೋಡಯ್ಯ).



೪೫. ಧನಕನಕ ಉಳ್ಳನಕ ದಿನಕರನಂತಿಕ್ಕು
ಧನಕನಕ ಹೋದ ಬೆಳಗಾಗಿ ಹಾಳೂರ
ಶುನಕನಂತಕ್ಕು ಸರ್ವಜ್ಞ.

**ಸಂಪತ್ತು ಇದ್ದಾಗ ಮತ್ತು ಇಲ್ಲವಾದಾಗ ವ್ಯಕ್ತಿಯ ಸಾಮಾಜಿಕ ಅಂತಸ್ತಿನಲ್ಲಿ ಉಂಟಾಗುವ ಏರಿಳಿತಗಳನ್ನು ಎರಡು ಹೋಲಿಕೆಗಳ ಮೂಲಕ ಹೇಳಲಾಗಿದೆ.**

(ಧನ=ಹಣ; ಕನಕ=ಚಿನ್ನ/ಬಂಗಾರ; ಉಳ್ಳ+ಅನಕ; ಉಳ್ಳ=ಇರುವ; ಅನಕ=ತನಕ/ವರೆಗೆ; ಉಳ್ಳನಕ=ಇರುವವರೆಗೆ; ದಿನಕರನ+ಅಂತೆ+ಇಕ್ಕು; ದಿನಕರ=ಸೂರ್ಯ/ರವಿ; ಅಂತೆ=ಹಾಗೆ; ಇಕ್ಕು=ಇರುವುದು/ಕಂಡುಬರುವುದು;

ದಿನಕರನಂತೆ ಇಕ್ಕು=ಬೆಳಕಿನ ಕಿರಣಗಳಿಂದ ಕಣ್ಮನಗಳನ್ನು ಸೆಳೆಯುವ ಸೂರ್ಯನಂತೆ ಸಂಪತ್ತುಳ್ಳವನು ಸಮಾಜದಲ್ಲಿ ದೊಡ್ಡ ಅಂತಸ್ತನ್ನು ಹೊಂದಿ ಜನಮನ್ನಣೆಯಿಂದ ಕಂಗೊಳಿಸುತ್ತಾನೆ;

ಧನಕನಕ ಹೋದ=ಇರುವ ಸಂಪತ್ತೆಲ್ಲವೂ ಕಳೆದುಹೋದ ನಂತರ; ಬೆಳಗು+ಆಗಿ=ಬೆಳಕು ಹರಿದು ಮರುದಿನ ಬರುತ್ತಿದ್ದಂತೆಯೇ; ಹಾಳು+ಊರ=ಪಾಳುಬಿದ್ದ ಊರಿನ; ಶುನಕನ+ ಅಂತೆ+ಅಕ್ಕು; ಶುನಕ=ನಾಯಿ;

ಹಾಳೂರ ಶುನಕನಂತೆ=ಪಾಳುಬಿದ್ದ ಊರಿನಲ್ಲಿ ಚೆಲ್ಲಾಡಿರುವ ವಸ್ತುಗಳ ನಡುವೆ ಉಣಿಸನ್ನು ಅರಸುತ್ತಾ ಅಲೆಯುವ ನಾಯಿಯಂತೆ ಸಂಪತ್ತಿಲ್ಲದವನು ಸಾಮಾಜಿಕವಾಗಿ ಎಲ್ಲರ ಕಡೆಗಣನೆಗೆ ಗುರಿಯಾಗಿ ಗತಿಕೇಡಿಯಾಗಿ ಅಲೆಯುತ್ತಿರುತ್ತಾನೆ).



೪೬. ನಡೆವುದೊಂದೆ ಭೂಮಿ ಕುಡಿವುದೊಂದೆ ನೀರು
ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ.

ಮೇಲು-ಕೀಳೆಂಬ ಜಾತಿ ಮೆಟ್ಟಲುಗಳಿಂದ ಕೂಡಿರುವ ಸಮಾಜದಲ್ಲಿ "ಜಾತಿ ಎನ್ನುವುದು ಮಾನವರೇ ಕಟ್ಟಿಕೊಂಡಿರುವ ಒಂದು ಸಾಮಾಜಿಕ ರಚನೆ. ಆದುದರಿಂದ ಜಾತಿ ಎಂಬುದು ಮಾನವನ ದೇಹದಲ್ಲಿಲ್ಲ; ಮನದಲ್ಲಿ ನೆಲೆಸಿದೆ. ಜಾತಿಯ ಕಾರಣಕ್ಕಾಗಿ ಯಾವುದೇ ವ್ಯಕ್ತಿಯನ್ನು ಮೆಚ್ಚಿಕೊಳ್ಳಬಾರದು ಇಲ್ಲವೆ ಕಡೆಗಣಿಸಬಾರದು. ವ್ಯಕ್ತಿಯಲ್ಲಿರುವ ಒಳ್ಳೆಯ ನಡೆನುಡಿಗಳನ್ನು ಮಾತ್ರ ಗುರುತಿಸಬೇಕು." ಎಂಬ ಅರಿವನ್ನು ಮೂಡಿಸಲು ಕಣ್ಣ ಮುಂದಿನ ನಿಸರ್ಗದಲ್ಲಿ ಕಾಣುವ ಮತ್ತು ನಡೆಯುವ ಪ್ರಸಂಗಗಳಿಂದ ಹೇಳಲಾಗಿದೆ.

(ನಡೆವುದು+ಒಂದೆ; ಕುಡಿವುದು+ಒಂದೆ; ಸುಡುವ+ಅಗ್ನಿಯು+ಒಂದೆ; ಅಗ್ನಿ=ಬೆಂಕಿ; ಇರುತ+ಇರಲು; ಇರುತಿರಲು=ಇರುವಾಗ; ಕುಲ=ಜಾತಿ/ವಂಶ;

ಗೋತ್ರ=ಪೀಳಿಗೆ/ಮನೆತನ; ಕುಲಗೋತ್ರ=ಹುಟ್ಟಿದ ಮಗುವಿನ ಕುಟುಂಬದ ಹಿನ್ನೆಲೆಯನ್ನು ತಿಳಿಸುವ ಜಾತಿ-ಉಪಜಾತಿ-ಮತ; ಎತ್ತಣ=ಯಾವ ಕಡೆ/ದಿಕ್ಕು; ಎತ್ತಣದು=ಯಾವ ಕಡೆಯದು).



೪೭. ನರಳುವಗೆ ಕಡುರೋಗ ಮೊರೆವಂಗೆ ರಾಗವು
ಬರೆವಂಗೆ ಓದು ಬರುವಂತೆ ಸಾಧಿಪಂಗೆ
ಬರದುದೊಂದುಂಟೆ ಸರ್ವಜ್ಞ.

ಜೀವನದಲ್ಲಿ ಉಂಟಾಗುವ ಒಳಿತು ಕೆಡುಕಿನ ಏಳುಬೀಳುಗಳಿಗೆ ನಮ್ಮ ಮಯ್ ಮನದಲ್ಲಿ ತುಡಿಯುವ ಒಳಮಿಡಿತಗಳೇ ಕಾರಣವೆಂಬುದನ್ನು ಹೇಳಲಾಗಿದೆ.

(ನರಳುವಗೆ=ಮನಸ್ಸಿನಲ್ಲಿ ಯಾವಾಗಲೂ ಒಂದಲ್ಲ ಒಂದು ಬಗೆಯ ಆತಂಕ/ಸಂಕಟ/ಹೆದರಿಕೆ/ಹಿಂಜರಿಕೆಯಿಂದ ಒದ್ದಾಡುವವನಿಗೆ; ಕಡು=ಹೆಚ್ಚಿನ/ಅತಿಯಾದ/ದೊಡ್ಡದಾದ; ಕಡುರೋಗ=ಕೆಟ್ಟಕಾಯಿಲೆ/ದೊಡ್ಡರೋಗ;

ಮೊರೆ=ತುಂಬಿಯಂತೆ ದನಿಮಾಡು/ಜೇಂಕರಿಸು/ಹಾಡಿನ ದನಿಯಲ್ಲಿ ಗುನುಗುನಿಸು; ಮೊರೆವಂಗೆ=ಉಲ್ಲಾಸ/ಆನಂದ/ಲವಲವಿಕೆಯಿಂದ ಗುನುಗುತ್ತಿರುವವನಿಗೆ/ಹಾಡುತ್ತಿರುವವನಿಗೆ; ರಾಗ=ಇಂಪಾದ ದನಿ;

ಬರೆವಂಗೆ=ಬರೆವಣಿಗೆಯನ್ನು ಕಲಿತವನಿಗೆ/ಬರಹದಲ್ಲಿ ತೊಡಗಿದವನಿಗೆ; ಓದು ಬರುವಂತೆ=ವಿದ್ಯೆ ಕರಗತವಾಗುವಂತೆ; ಸಾಧಿಪಂಗೆ=ಕಯ್ಗೊಂಡ ಕೆಲಸವನ್ನು ಮಾಡಿ ಮುಗಿಸುವ ತನಕ ಪಟ್ಟುಹಿಡಿದು ದುಡಿಯುವವನಿಗೆ; ಬರದುದು+ ಒಂದು+ಉಂಟೆ; ಬರದುದು=ದೊರೆಯದಿರುವುದು; ಒಂದು=ಯಾವುದಾದರೂ; ಉಂಟೆ=ಇದೆಯೇ;

ಬರದುದೊಂದುಂಟೆ=ದೊರೆಯದಿರುವುದು ಯಾವುದೂ ಇಲ್ಲ ಎಂದರೆ ಬಯಸಿದ್ದೆಲ್ಲವೂ ದೊರೆಯುತ್ತದೆ/ಕಯ್ಗೊಂಡ ಕೆಲಸಗಳೆಲ್ಲವೂ ಈಡೇರುತ್ತವೆ).



೪೮. ನಿತ್ಯ ನೇಮಗಳೇಕೆ ಮತ್ತೆ ಪೂಜೆಗಳೇಕೆ
ನೆತ್ತಿ ಬೋಳೇಕೆ ಜಡೆಯೇಕೆ ಅರಿದು ನೆರೆ
ಸತ್ಯ ಉಳ್ಳವಗೆ ಸರ್ವಜ್ಞ.

ಆಡುವ ಮಾತು ಮತ್ತು ಕಯ್ಗೊಂಡ ಕೆಲಸಗಳಲ್ಲಿ ಇತರರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಸತ್ಯವಂತನಾದ ವ್ಯಕ್ತಿಗೆ, ದೇವರ ಬಗ್ಗೆ ತನ್ನಲ್ಲಿರುವ ಒಲವನ್ನು ತೋರಿಸಿಕೊಳ್ಳುವಂತಹ ಯಾವುದೇ ಬಗೆಯ ಉಡುಗೆ ತೊಡುಗೆ ಮತ್ತು ಆಚರಣೆಗಳ ಅಗತ್ಯವಿಲ್ಲವೆಂಬುದನ್ನು ಹೇಳಲಾಗಿದೆ.

(ನಿತ್ಯ=ಪ್ರತಿದಿನ; ನೇಮಗಳು+ಏಕೆ; ನೇಮ=ಪೂಜೆ/ಉಪವಾಸ ಮುಂತಾದ ಆಚರಣೆಗಳು; ಪೂಜೆಗಳ್+ಏಕೆ; ನೆತ್ತಿ=ತಲೆಯ ಮೇಲಿನ ಜಾಗ/ಎಡೆ; ಬೋಳು=ತಲೆಯ ಮೇಲೆ ಕೂದಲು ಇಲ್ಲದಿರುವುದು; ಜಡೆ=ಉದ್ದನೆಯ ತಲೆಗೂದಲನ್ನು ಹೆಣೆದು ಕಟ್ಟಿರುವುದು;

ನೆತ್ತಿಬೋಳು=ತಲೆಕೂದಲನ್ನು ದೇವರಿಗೆ ಹರಕೆಯಾಗಿ ನೀಡುವುದು; ಜಡೆ=ದೇವರಲ್ಲಿ ಒಲವು ಉಳ್ಳವನಂತೆ ತೋರಿಸಿಕೊಳ್ಳಲು ಉದ್ದನೆಯ ತಲೆಗೂದಲನ್ನು ತಲೆಯಮೇಲೆ ಎತ್ತಿಕಟ್ಟುವುದು/ಜಪತಪಗಳಲ್ಲಿ ತೊಡಗಿರುವ ಮುನಿಗಳ ಎತ್ತಿಕಟ್ಟಿದ ತಲೆಗೂದಲು;

ಅರಿದು=ತಿಳಿದು; ನೆರೆ=ಚೆನ್ನಾಗಿ/ಕೂಡಿ; ಸತ್ಯ=ನಿಜ/ವಾಸ್ತವ/ದಿಟ; ಉಳ್ಳ+ಅವಗೆ; ಉಳ್ಳ=ಇರುವ; ಅವಗೆ=ಅವನಿಗೆ; ಉಳ್ಳವಗೆ=ಇರುವವನಿಗೆ; ಸತ್ಯ ಉಳ್ಳವಗೆ =ಸಹ ಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ವ್ಯಕ್ತಿಗೆ).



೪೯. ನುಡಿಸುವುದಸತ್ಯವನು ಕೆಡಿಸುವುದು ಧರ್ಮವನು
ಒಡಲನೆ ಕಟ್ಟಿ ಹಿಡಿಸುವುದು ಲೋಭದ
ಗಡಣ ಕಾಣಯ್ಯ ಸರ್ವಜ್ಞ.

ವ್ಯಕ್ತಿಯ ಮನದಲ್ಲಿ ತುಡಿಯುವ ಅತಿಯಾಸೆ ಮತ್ತು ಜಿಪುಣತನವು ಎಲ್ಲಾ ಬಗೆಯ ಕೆಟ್ಟಕೆಲಸಗಳನ್ನು ಮಾಡಲು ಕಾರಣವಾಗುತ್ತದೆ ಎಂಬುದನ್ನು ಹೇಳಲಾಗಿದೆ.

(ನುಡಿಸುವುದು+ಅಸತ್ಯವನು; ಅಸತ್ಯ=ನಿಜವಲ್ಲದ್ದು/ದಿಟವಲ್ಲದ್ದು/ಸುಳ್ಳು; ಸತ್ಯ=ನಿಜ/ದಿಟ/ವಾಸ್ತವ; ಕೆಡಿಸುವುದು=ನಾಶಪಡಿಸುವುದು/ಹಾಳುಮಾಡುವುದು; ಧರ್ಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳು;

ಒಡಲು=ಹೊಟ್ಟೆ/ದೇಹ/ಮಯ್; ಒಡಲನೆ ಕಟ್ಟಿ ಹಿಡಿಸುವುದು=ಗಳಿಸಿದ ಹಣದಿಂದ/ಸಂಪತ್ತಿನಿಂದ ಜೀವನದಲ್ಲಿ ಯಾವುದೇ ಬಗೆಯ ಒಲವು ನಲಿವನ್ನು ಹೊಂದದಿರುವುದು ಅಂದರೆ ಹೊಟ್ಟೆಬಟ್ಟೆಕಟ್ಟಿ ಹಣವನ್ನು ಕೂಡಿಡುವುದರಲ್ಲಿಯೇ ತೊಡಗುವುದು;

ಲೋಭ=ಅತಿಯಾಸೆ/ಕೆಟ್ಟ ಆಸೆ/ಜಿಪುಣತನ; ಗಡಣ=ಸಮೂಹ/ಗುಂಪು/ರಾಶಿ; ಲೋಭ ಗಡಣ=ಅತಿಯಾದ ಆಸೆಯ/ಜಿಪುಣತನದ ನಡೆನುಡಿಗಳು; ಕಾಣು+ಅಯ್ಯ=ತಿಳಿದು ನೋಡು).



೫೦. ನೆತ್ತವೂ ಕುತ್ತವೂ ಹತ್ತಿದಡೆ ಅಳವಲ್ಲ
ಕುತ್ತದಿಂ ದೇಹ ಬಡವಕ್ಕು ನೆತ್ತದಿಂ
ಬತ್ತಲೆಯಕ್ಕು ಸರ್ವಜ್ಞ.

ಜೂಜಿನ ಚಟಕ್ಕೆ ಬಲಿಯಾದರೆ, ಎಂತಹ ಕೇಡು ಉಂಟಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ನೆತ್ತ=ಪಗಡೆಯಾಟ/ಜೂಜು/ಸಂಪತ್ತನ್ನು ಒಡ್ಡಿ ಆಡುವ ಯಾವುದೇ ಆಟ; ಕುತ್ತ=ರೋಗ/ಬೇನೆ; ಹತ್ತು=ಅಂಟು/ಸೇರು/ಕೂಡು; ಹತ್ತಿದೊಡೆ=ಅಂಟಿಕೊಂಡರೆ/ತಗುಲಿಕೊಂಡರೆ; ನೆತ್ತ ಹತ್ತಿದೊಡೆ=ಜೂಜಾಡುವುದು ಮಾನಸಿಕ ಚಟವಾದರೆ/ಜೂಜಿನ ಸೆಳೆತಕ್ಕೆ ಒಳಗಾದರೆ;

ಕುತ್ತ ಹತ್ತಿದೊಡೆ=ರೋಗ ಅಂಟಿಕೊಂಡರೆ/ಬಂದರೆ; ಅಳವು+ಅಲ್ಲ; ಅಳವು=ಕಸುವು/ವಿವೇಕ/ಒಳಿತು ಕೆಡುಕಿನ ಅರಿವು; ಅಳವಲ್ಲ=ಒಳಿತಾಗುವುದಿಲ್ಲ/ತಡೆದುಕೊಳ್ಳುವ ಶಕ್ತಿಯಿರುವುದಿಲ್ಲ; ದೇಹ=ಮಯ್/ಶರೀರ; ಕುತ್ತದಿಂ=ಕುತ್ತದಿಂದ; ಬಡವು+ಅಕ್ಕು;

ಬಡವು=ಸೊರಗುವಿಕೆ/ಬಲ ಕುಗ್ಗುವಿಕೆ; ಅಕ್ಕು=ಆಗುವುದು; ದೇಹ ಬಡವಕ್ಕು=ಮಯ್ಯಿನ ಕಸುವು ಕುಗ್ಗುತ್ತದೆ;

ನೆತ್ತದಿಂ=ನೆತ್ತದಿಂದ; ಬತ್ತಲೆ+ಅಕ್ಕು; ಬತ್ತಲೆ=ಬರಿ ಮಯ್/ಉಡುಗೆ ತೊಡುಗೆಯಿಲ್ಲದ ಮಯ್; ನೆತ್ತದಿಂ ಬತ್ತಲೆಯಕ್ಕು=ಜೂಜಿನಿಂದಾಗಿ ಮನೆ ಆಸ್ತಿಪಾಸ್ತಿ ಹಣಕಾಸು ಎಲ್ಲವನ್ನೂ ಕಳೆದುಕೊಂಡು ಬರಿಗಯ್ಯಾಗಿ ಬೀದಿಪಾಲಾಗುವುದು).



೫೧. ನೆಲವನು ಮುಗಿಲನು ಹೊಲಿವರುಂಟೆಂದರೆ
ಹೊಲಿವರು ಹೊಲಿವರೆನಬೇಕು ಅವರೊಡನೆ
ಛಲಬೇಡವೆಂದ ಸರ್ವಜ್ಞ.

ತಿಳಿಗೇಡಿಗಳ ಜತೆಯಲ್ಲಿ ಮಾತಿಗೆ ಮಾತು ಬೆಳಸಬಾರದು ಎಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ನೆಲವನು=ಬುವಿಯನ್ನು; ಮುಗಿಲು=ಆಕಾಶ/ಬಾನು/ಗಗನ; ಹೊಲಿವರು+ ಉಂಟು+ಎಂದರೆ; ಹೊಲಿ=ಹೆಣೆ/ಹೊಲಿಗೆ ಹಾಕು/ಜತೆಗೂಡಿಸು; ಹೊಲಿವರು= ಯಾವುದಾದರೊಂದು ಬಗೆಯ ದಾರದಿಂದ ಹೊಲಿಯುವವರು; ಉಂಟು=ಇದ್ದಾರೆ; ಎಂದರೆ=ಎಂದು ಹೇಳಿದರೆ;

ಹೊಲಿವರು+ಎನಬೇಕು=ಹೊಲಿಯುತ್ತಾರೆ ಎಂದು ಒಪ್ಪಿಕೊಳ್ಳಬೇಕು; ಎನಬೇಕು=ಎನ್ನಬೇಕು/ಒಪ್ಪಿಗೆಯನ್ನು ಸೂಚಿಸಬೇಕು; ಅವರ+ಒಡನೆ;

ಅವರೊಡನೆ=ವಿವೇಚನೆಯಿಲ್ಲದೆ/ಅರಿವಿಲ್ಲದೆ/ವಾಸ್ತವದ ತಿಳುವಳಿಕೆ ಇಲ್ಲದೆ ಮಾತನಾಡುವ ಅಂತಹ ವ್ಯಕ್ತಿಗಳೊಡನೆ; ಚಲಬೇಡ+ಎಂದ; ಛಲ=ಸರಿ/ತಪ್ಪುಗಳ ವಾದವಿವಾದ; ಬೇಡ=ಮಾಡಬಾರದು).



೫೨. ಪಾಪವೆಂಬುದಕೆ ತಿಳಿ ಕೋಪವೇ ನೆಲಗಟ್ಟು
ಕೂಪದೊಳು ನೇಣು ಹರಿದಂತೆ ನರಕಕ್ಕೆ
ಕೋಪಿ ತಾನಿಳಿವ ಸರ್ವಜ್ಞ.

ಮನದೊಳಗೆ ಕೆರಳುವ ಕೋಪವನ್ನು ಹತೋಟಿಯಲ್ಲಿಡದಿದ್ದರೆ ಉಂಟಾಗುವ ಹಾನಿಯನ್ನು ಹೇಳಲಾಗಿದೆ.

(ಪಾಪ+ಎಂಬುದಕೆ; ಪಾಪ=ಸಹಮಾನವರಿಗೆ ಮತ್ತು ಸಮಾಜಕ್ಕೆ ಮಾಡುವ ಕೇಡಿನ ಕೆಲಸ; ಎಂಬುದಕೆ=ಎನ್ನುವುದಕ್ಕೆ; ತಿಳಿ=ಅರಿತುಕೊ; ಕೋಪ=ತನ್ನ ಉದ್ದೇಶ ಮತ್ತು ಕೆಲಸಕ್ಕೆ ಅಡ್ಡಿ ಆತಂಕಗಳು ಉಂಟಾದಾಗ ಮಾನವನ ಮನಸ್ಸಿನಲ್ಲಿ ಕೆರಳುವ ಒಳಮಿಡಿತಗಳು/ಸಿಟ್ಟು/ಮುನಿಸು;

ನೆಲಗಟ್ಟು=ನೆಲ+ಕಟ್ಟು; ನೆಲಗಟ್ಟು=ತಳಹದಿ/ಅಡಿಪಾಯ; ಕೋಪವೇ ನೆಲಗಟ್ಟು=ಕೋಪದಿಂದ ಕೆರಳಿ ಮಯ್ ಮನಗಳ ಮೇಲಣ ಹತೋಟಿಯನ್ನು ಕಳೆದುಕೊಂಡು ಆಡುವ ನುಡಿ ಮತ್ತು ಮಾಡುವ ಕೆಲಸಗಳೇ ಪಾಪಕಾರ್‍ಯಗಳಿಗೆ ಮೂಲಕಾರಣ; ಕೂಪದ+ಒಳು; ಕೂಪ=ಹಳ್ಳ/ಬಾವಿ/ಗುಳಿ; ಒಳು=ಅಲ್ಲಿ/ಒಳಗೆ; ನೇಣು=ಬಿಂದಿಗೆ/ಕೊಡದ ಕೊರಳನ್ನು ಬಿಗಿದು ಕಟ್ಟಿರುವ ಹಗ್ಗದ ಕುಣಿಕೆ;

ಹರಿದ+ಅಂತೆ; ಹರಿದ=ಕಿತ್ತುಹೋದ/ಕಳಚಿಹೋದ; ಅಂತೆ=ಹಾಗೆ; ಕೂಪದೊಳು ನೇಣು ಹರಿದಂತೆ=ಬಾವಿಯಿಂದ ನೀರು ತುಂಬಿದ ಕೊಡವನ್ನು ಮೇಲಕ್ಕೆ ಎಳೆದುಕೊಳ್ಳುವಾಗ, ಕೊಡಕ್ಕೆ ಕಟ್ಟಿರುವ ಕುಣಿಕೆಯು ತುಂಡಾದರೆ, ಕೊಡವು ಬಾವಿಯ ಒಳಕ್ಕೆ ಬಿದ್ದು ಹೋಗುವಂತೆ ಕೋಪದಿಂದ ಪಾಪದ ಕೆಲಸವನ್ನು ಮಾಡುವವನು ಹಾಳಾಗುತ್ತಾನೆ;

ನರಕಕ್ಕೆ=ಬಹುಬಗೆಯ ನೋವು ಸಂಕಟಗಳ ಯಾತನೆಗೆ; ಕೋಪಿ=ಕೋಪಗೊಂಡು ಕೆಟ್ಟ ಕೆಲಸಗಳನ್ನು ಮಾಡಿದವನು; ತಾನು+ಇಳಿವ=ಅವನು ಗುರಿಯಾಗುತ್ತಾನೆ/ಒಳಗಾಗುತ್ತಾನೆ).



೫೩. ಬಡವನೊಳ್ಳೆಯ ಮಾತ ನುಡಿದರಲ್ಲೆಂಬರು
ಪೊಡವೀಶ ಬಳ್ಳುಗೆಡೆದಡೆ ಹೊಗಳುತ
ಕಡುಜಾಣನೆಂಬರು ಸರ್ವಜ್ಞ.

**ವ್ಯಕ್ತಿಯು ಆಡುವ ಮಾತಿಗೆ ದೊರೆಯುವ ತೆಗಳಿಕೆ ಮತ್ತು ಹೊಗಳಿಕೆಯು ಆತನು ಹೊಂದಿರುವ ಸಾಮಾಜಿಕ ಅಂತಸ್ತನ್ನು ಅವಲಂಬಿಸಿರುತ್ತದೆ ಎಂಬುದನ್ನು ಹೇಳಲಾಗಿದೆ.**

(ಬಡವ=ಆಸ್ತಿಪಾಸ್ತಿಯಿಲ್ಲದವನು/ಸಂಪತ್ತಿಲ್ಲದವನು/ಹಣಕಾಸು ಇಲ್ಲದವನು; ಬಡವನು+ಒಳ್ಳೆಯ; ಮಾತ=ಮಾತನ್ನು; ನುಡಿದರೆ+ಅಲ್ಲ+ಎಂಬರು; ಎಂಬರು=ಎನ್ನುವರು; ಅಲ್ಲೆಂಬರು=ಸರಿಯೆಂದು ಒಪ್ಪಿಕೊಳ್ಳದೆ ನಿರಾಕರಿಸುತ್ತಾರೆ/ಸುಳ್ಳು ಎಂದು ತೆಗಳುತ್ತಾರೆ;

ಪೊಡವಿ+ಈಶ; ಪೊಡವಿ=ನೆಲ/ಬುವಿ/ರಾಜ್ಯ; ಈಶ=ದೊರೆ/ಒಡೆಯ/ಯಜಮಾನ; ಬಳ್ಳು+ಗೆಡೆದಡೆ; ಬಳ್ಳು=ನರಿ; ಬಳ್ಳು=ಬಗುಳು/ನಾಯಿ ನರಿಗಳ ಕೂಗುವಿಕೆ/ಅರಚುವಿಕೆ; ಗೆಡೆ=ಬಾಯಿಗೆ ಬಂದಂತೆ ಮಾತನಾಡು/ಹರಟು/ಗಳಹು;

ಬಳ್ಳುಗೆಡೆ=ನಾಯಿ ಬೊಗಳುವುದು/ನರಿಯು ಊಳಿಡುವುದು/ಅರಚುವುದು–ಕೆಟ್ಟ/ಹಗುರವಾದ/ಪ್ರಯೋಜನವಿಲ್ಲದ ಮಾತುಗಳನ್ನು ಆಡುವುದು; ಬಳ್ಳುಗೆಡೆದಡೆ=ಹರಟಿದರೆ/ಪೊಳ್ಳುನುಡಿಗಳನ್ನಾಡಿದರೆ; ಹೊಗಳು=ಕೊಂಡಾಡು/ಗುಣಗಾನ ಮಾಡು; ಕಡುಜಾಣನು+ಎಂಬರು; ಕಡು=ಬಹಳ/ಹೆಚ್ಚಿನ; ಜಾಣ= ಅರಿವುಳ್ಳವನು/ತಿಳುವಳಿಕೆಯುಳ್ಳವನು).



೫೪. ಬಡವನೊಂದೊಳುನುಡಿಯ ನುಡಿದರೆ ನಿಲ್ಲದು
ಕೊಡೆಯ ನೆಳಲಾತ ನುಡಿದರೆ ನಾಯಕನ
ನುಡಿಯೆಂದು ನಿಲುಹೆ ಸರ್ವಜ್ಞ.

ಬಡವರ ಮಾತಿಗೆ ಮತ್ತು ಉಳ್ಳವರ ಮಾತಿಗೆ ಸಮಾಜದಲ್ಲಿ ದೊರೆಯುವ ಬೆಲೆಯನ್ನು ಹೇಳಲಾಗಿದೆ.

(ಬಡವನು+ಒಂದು+ಒಳುನುಡಿಯ; ಬಡವ=ಆಸ್ತಿಪಾಸ್ತಿಯಿಲ್ಲದವನು / ಸಂಪತ್ತಿಲ್ಲದವನು/ಹಣಕಾಸು ಇಲ್ಲದವನು; ಒಳು=ಒಳಿತಾದ/ಚೆನ್ನಾದ; ನುಡಿ=ಮಾತು; ನಿಲ್ಲದು=ಬೆಲೆಯನ್ನು ಪಡೆಯದು/ಒಪ್ಪಿತವಾಗದು; ಕೊಡೆ=ಚತ್ರಿ; ನೆಳಲ+ಆತ; ನೆಳಲು=ನೆರಳು/ಆಶ್ರಯ/ಬಳಿ/ಆಸರೆ; ಆತ=ಅವನು;

ಕೊಡೆಯ ನೆಳಲು=ದೊರೆ/ಸಿರಿವಂತ/ದೊಡ್ಡ ಗದ್ದುಗೆಯಲ್ಲಿರುವವರ ಸಾಮಾಜಿಕ ಅಂತಸ್ತನ್ನು ಸೂಚಿಸುವ ಒಂದು ಉಪಕರಣವಾಗಿ ಬಿಚ್ಚಿದ ಕೊಡೆಯನ್ನು ತಲೆಯ ಮೇಲೆ ಎತ್ತಿಹಿಡಿಯಲಾಗುತ್ತಿತ್ತು;

ಕೊಡೆಯ ನೆಳಲಾತ=ಸಮಾಜದಲ್ಲಿ ದೊಡ್ಡ ಹುದ್ದೆಯಲ್ಲಿರುವವನು; ನಾಯಕ=ಮುಂದಾಳು/ದೊರೆ/ಸಮುದಾಯವನ್ನು ಮುನ್ನಡೆಸುವವನು; ನುಡಿ+ಎಂದು; ನಿಲುಹು=ನೆಲೆಗೊಳಿಸು/ಇರುವಂತೆ ಮಾಡು; ನಿಲುಹೆ=ನೆಲೆಗೊಳ್ಳುತ್ತದೆ/ಬೆಲೆ ಪಡೆಯುತ್ತದೆ/ ಒಪ್ಪಿತವಾಗುತ್ತದೆ).



೫೫. ಬತ್ತಿಯೆಣ್ಣೆಗಳೆರಡು ಹೊತ್ತಿ ಬೆಳಗುವ ತೆರದಿ
ಸತ್ಯ ನೀತಿಗಳು ಬೆಳಗಿಹವು ಜೋಡಗಲೆ
ಕತ್ತಲೀ ಜಗವು ಸರ್ವಜ್ಞ.

ಮಾನವ ಸಮುದಾಯದ ಜೀವನವು ಚೆನ್ನಾಗಿರಬೇಕಾದರೆ ಜನರ ನಡೆನುಡಿಗಳಲ್ಲಿ ಸತ್ಯ ಮತ್ತು ನೀತಿ ಜತೆಗೂಡಿರಬೇಕಾದ ಅಗತ್ಯವನ್ನು ಬೆಳಗುತ್ತಿರುವ ದೀಪವೊಂದರ ರೂಪಕದ ಮೂಲಕ ಹೇಳಲಾಗಿದೆ.

(ಬತ್ತಿ+ಎಣ್ಣೆಗಳು+ಎರಡು; ಬತ್ತಿ=ಹತ್ತಿಯ ಎಳೆಗಳಿಂದ ಮಾಡಿರುವ ವಸ್ತು; ಎಣ್ಣೆ=ಎಳ್ಳು/ಕಡಲೇಕಾಯಿ/ಹಿಪ್ಪೇಕಾಯಿ ಮುಂತಾದ ಕಾಳುಗಳಿಂದ ತೆಗೆದಿರುವ ಜಿಡ್ಡು; ಹೊತ್ತಿ=ಬೆಂಕಿ ತಗುಲಿ ಉರಿಯುತ್ತಾ; ಬೆಳಗು=ಹೊಳೆ/ಪ್ರಕಾಶಿಸು/ಕಾಂತಿಯನ್ನು ಹರಡು;

ಬೆಳಗಿ+ಇಹವು; ಬೆಳಗು=ನಲಿವು–ಒಲವು–ಚಟುವಟಿಕೆಗಳಿಂದ ಕೂಡಿದ ಬದುಕಿಗೆ ಸಂಕೇತ; ತೆರ=ರೀತಿ/ಬಗೆ; ತೆರದಿ=ರೀತಿಯಲ್ಲಿ/ಬಗೆಯಲ್ಲಿ; ಸತ್ಯ=ನಿಜದ ನಡೆನುಡಿ; ನೀತಿ=ತನಗೆ ಒಳಿತನ್ನು ಮಾಡಿಕೊಳ್ಳುವಂತೆಯೇ ಸಹಮಾನವರಿಗೂ ಒಳಿತನ್ನು ಮಾಡುವ ನಡೆನುಡಿ; ಇಹವು=ಇರುವುವು;

ಜೋಡಿ+ಅಗಲೆ; ಜೋಡಿ=ಜೊತೆ/ಎರಡರ ಕೂಡುವಿಕೆ; ಅಗಲು=ದೂರವಾಗು/ಬೇರೆ ಬೇರೆಯಾಗು; ಅಗಲೆ=ದೂರವಾದರೆ/ಬೇರೆಬೇರೆಯಾದರೆ; ಕತ್ತಲು ಈ ಜಗವು=ಜಗದ ಜೀವನವು ಕೊಲೆ ಸುಲಿಗೆ ಹಿಂಸೆಯಿಂದ ನರಳುತ್ತದೆ; ಕತ್ತಲೆ=ಬಡತನ–ಅಪಮಾನ–ನೋವಿನಿಂದ ಕೂಡಿದ ಬದುಕಿಗೆ ಸಂಕೇತ).



೫೬. ಬರೆ ಕಂಡು ಕರೆಯದನ ಇರು ಕುಳ್ಳಿರೆನ್ನದನ
ಸರಸ ಸಜ್ಜನಿಕೆಯಿರದವನ ಸಖತನವ
ಬೆರಸಲೇ ಬೇಡ ಸರ್ವಜ್ಞ.

ಒಳ್ಳೆಯ ನಡೆನುಡಿಯಿಲ್ಲದ ಮತ್ತು ಇತರರನ್ನು ತನ್ನಂತೆ ತಿಳಿದು ಒಲವಿನಿಂದ ನಡೆದುಕೊಳ್ಳದ ವ್ಯಕ್ತಿಯೊಡನೆ ಗೆಳೆತನವನ್ನು ಮಾಡಬಾರದೆಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಬರೆ=ಬರ್+ಎ; ಬರ್=ಸಮೀಪಿಸು/ಆಗಮಿಸು; ಬರೆ=ತನ್ನ ಬಳಿಗೆ/ಹತ್ತಿರಕ್ಕೆ ವ್ಯಕ್ತಿಯೊಬ್ಬನು ಬಂದಾಗ; ಕಂಡು=ನೋಡಿ/ತಿಳಿದು; ಕರೆಯದನ=ಕರೆಯದವನ; ಕರೆ=ಬರಮಾಡಿಕೊಳ್ಳುವುದು; ಕುಳ್ಳಿರು+ಎನ್ನದನ; ಕುಳ್ಳಿರು=ಕುಳಿತಿಕೊ;

ಎನ್ನದನ=ಎನ್ನದವನ; ಸರಸ=ಒಲವು ನಲಿವನ್ನು ಉಂಟು ಮಾಡುವ ನಡೆ ನುಡಿಗಳು; ಸಜ್ಜನಿಕೆಯು+ಇರದವನ; ಸಜ್ಜನಿಕೆ=ಒಳ್ಳೆಯ ನಡೆನುಡಿ; ಇರದನ=ಇರದವನ; ಸಖ=ಗೆಳೆಯ/ಮಿತ್ರ/ಸ್ನೇಹಿತ; ಸಖತನ=ಸಂಗ/ಸಹವಾಸ/ಸ್ನೇಹ/ಒಡನಾಟ; ಬೆರಸು= ಕೂಡು/ಸೇರು; ಬೆರಸಲೇ ಬೇಡ=ಮಾಡಲೇ ಬೇಡ/ಮಾಡದಿರು).



೫೭. ಬಲ್ಲವರ ಒಡನಾಡೆ ಬೆಲ್ಲವನು ಸವಿದಂತೆ
ಅಲ್ಲದಜ್ಞಾನಿಯೊಡನಾಡೆ ಮೊಳಕೈಗೆ
ಕಲ್ಲು ಹೊಡೆದಂತೆ ಸರ್ವಜ್ಞ.

ತಿಳುವಳಿಕೆಯುಳ್ಳವರ ಜತೆಯಲ್ಲಿ ಗೆಳೆತನ/ನಂಟು/ವ್ಯವಹಾರವನ್ನು ಮಾಡಿದಾಗ ಉಂಟಾಗುವ ಒಲವು ನಲಿವು ಹಾಗೂ ತಿಳುವಳಿಕೆಯಿಲ್ಲದವರ ಜತೆಯಲ್ಲಿ ಮಾಡಿದಾಗ ಉಂಟಾಗುವ ನೋವು ಸಂಕಟಗಳ ಬಗೆಯನ್ನು ಈ ವಚನದಲ್ಲಿ ಹೇಳಲಾಗಿದೆ.

(ಬಲ್ಲ+ಅವರ; ಬಲ್ಲ=ಬಲ್+ಅ; ಬಲ್=ತಿಳಿ/ಅರಿ; ಬಲ್ಲ=ತಿಳಿದ/ಅರಿತ; ಬಲ್ಲವರ= ತಿಳಿದವರ/ಅರಿತವರ; ಒಡನೆ+ಆಡೆ; ಒಡನೆ=ಜತೆ/ಸಂಗಡ/ಕೂಡ; ಆಡು+ಎ; ಆಡು=ವ್ಯವಹರಿಸು;

ಒಡನಾಡೆ=ಗೆಳೆತನ/ನಂಟು/ವ್ಯವಹಾರಗಳನ್ನು ಮಾಡಿದರೆ; ಬೆಲ್ಲ=ಕಬ್ಬಿನ ಹಾಲನ್ನು ಕಾಯಿಸಿ ತಯಾರಿಸಿದ ಸಿಹಿಯಾದ ಉಂಡೆ/ವಸ್ತು; ಸವಿದ+ಅಂತೆ; ಸವಿ=ತಿನ್ನು/ರುಚಿ ನೋಡು; ಅಂತೆ=ಹಾಗೆ; ಅಲ್ಲದೆ+ಅಜ್ಞಾನಿಯ+ಒಡನೆ+ಆಡೆ; ಅಲ್ಲದೆ=ಹಾಗೆ ಮಾಡದೆ; ಅ+ಜ್ಞಾನಿ; ಜ್ಞಾನಿ=ತಿಳುವಳಿಕೆ/ಅರಿವು ಉಳ್ಳವನು;

ಅಜ್ಞಾನಿ=ತಿಳುವಳಿಕೆಯಿಲ್ಲದವನು/ಅರಿವಿಲ್ಲದವನು; ಮೊಳಕೈ=ಕಯ್ಯಿ ಮತ್ತು ತೋಳನ್ನು ಜತೆಗೂಡಿಸಿರುವ ಕೀಲಿನ ಎಡೆ/ಜಾಗ; ಹೊಡೆದ+ಅಂತೆ; ಹೊಡೆ=ಬಡಿ/ಅಪ್ಪಳಿಸು).



೫೮. ಬಲ್ಲಿದ ನುಡಿದರೆ ಬೆಲ್ಲವ ಮೆದ್ದಂತೆ
ಇಲ್ಲದ ಬಡವ ನುಡಿದರೆ ಬಾಯೊಳಗೆ
ಜಳ್ಳು ಬಿದ್ದಂತೆ ಸರ್ವಜ್ಞ.

**ಸಮಾಜದಲ್ಲಿ ಸಿರಿವಂತರ ಮಾತಿಗೆ ಮೆಚ್ಚುಗೆಯನ್ನು, ಬಡವರ ಮಾತಿಗೆ ತಿರಸ್ಕಾರವನ್ನು ತೋರಿಸುವ ಬಗೆಯನ್ನು ಹೇಳಲಾಗಿದೆ.**

(ಬಲ್ಲಿದ=ಹಣ ಆಸ್ತಿ ಗದ್ದುಗೆಯಿಂದ ಸಾಮಾಜಿಕವಾಗಿ ದೊಡ್ಡ ಅಂತಸ್ತನ್ನು ಪಡೆದವನು/ಉಳ್ಳವನು; ನುಡಿದರೆ=ಮಾತನಾಡಿದರೆ/ಏನನ್ನೂ ಹೇಳಿದರೂ; ಬೆಲ್ಲ=ಕಬ್ಬಿನ ಹಾಲನ್ನು ಕಾಯಿಸಿ ತಯಾರಿಸಿದ ಸಿಹಿಯಾದ ಉಂಡೆ/ವಸ್ತು;

ಬೆಲ್ಲವ=ಬೆಲ್ಲವನ್ನು; ಮೆದ್ದ+ಅಂತೆ=ತಿಂದ ಹಾಗೆ; ಮೆದ್ದ=ತಿಂದ; ಅಂತೆ=ಹಾಗೇ; ಮೆಲ್ಲು=ತಿನ್ನು; ಇಲ್ಲದ=ಯಾವುದೇ ಸಂಪತ್ತನ್ನು ಹೊಂದಿರದ/ಗತಿಗೇಡಿಯಾದ;

ಬಡವ=ಸಂಪತ್ತಿಲ್ಲದವನು/ಹಣಕಾಸು ಇಲ್ಲದವನು; ಬಾಯ್+ಒಳಗೆ; ಜಳ್ಳು=ಒಳಗೆ ತಿರುಳಿಲ್ಲದ ಕಾಳು; ಬಿದ್ದ+ಅಂತೆ=ಬಿದ್ದ ಹಾಗೆ)



೫೯. ಮಂದಿಯನಾಳುವಡೆ ಅಂದಣವನೇರುವಡೆ
ಸಂಧಿಸಿ ಭೋಗಪಡೆವಡೆ ಧರ‍್ಮವ
ಕುಂದದೆ ಮಾಡು ಸರ‍್ವಜ್ಞ.

ಸಂಪತ್ತು, ಗದ್ದುಗೆ ಮತ್ತು ಒಲವು ನಲಿವಿನ ಬದುಕು ದೊರಕಿದಾಗ ಸಹಮಾನವರ ಮತ್ತು ಸಮಾಜದ ಒಳಿತಿಗೆ ನೆರವಾಗುವ ಕೆಲಸದಲ್ಲಿ ತೊಡಗಬೇಕೆಂಬುದನ್ನು ಹೇಳಲಾಗಿದೆ.

(ಮಂದಿಯನು+ಆಳುವಡೆ; ಮಂದಿ=ಜನಸಮುದಾಯ/ಗುಂಪು; ಆಳುವಡೆ=ಗದ್ದುಗೆಯಲ್ಲಿ ಕುಳಿತು ಸಮಾಜದ ನಡೆನುಡಿಯಲ್ಲಿ ಕಂಡುಬರುವ ಕೆಡುಕನ್ನು ತೊಲಗಿಸಿ, ಒಳಿತನ್ನು ಕಾಪಿಡುವ ಹೊಣೆಗಾರಿಕೆ ದೊರಕಿದರೆ;

ಅಂದಣವನು+ಏರುವಡೆ; ಅಂದಣ=ಪಲ್ಲಕ್ಕಿ/ಮೇನೆ; ಏರು=ಹತ್ತು; ಅಂದಣವನೇರುವಡೆ= ಸಿರಿವಂತಿಕೆ ಬಂದು ಸಮಾಜದಲ್ಲಿ ಒಳ್ಳೆಯ ಅಂತಸ್ತು/ಗದ್ದುಗೆ ದೊರೆತರೆ; ಸಂಧಿಸಿ=ಜತೆಗೂಡಿ;

ಭೋಗ=ಆಸ್ತಿಪಾಸ್ತಿ ಹಣಕಾಸು ಗದ್ದುಗೆಗಳು ದೊರೆತಾಗ ಉಂಟಾಗುವ ಹಿಗ್ಗು/ಆನಂದ; ಪಡೆವಡೆ=ದೊರಕಿದರೆ/ಹೊಂದಿದರೆ;

ಧರ‍್ಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟು ಮಾಡುವ ನಡೆನುಡಿಗಳು; ಕುಂದು=ಕೊರತೆ/ಹಾನಿ; ಕುಂದದೆ ಮಾಡು=ಕಯ್ ಬಿಡದೆ/ಮರೆಯದೆ/ಕೊರತೆ ಬಾರದಂತೆ ಮಾಡು).



೭೦. ಮಾತಿಂದ ನಗೆನುಡಿಯು ಮಾತಿಂದ ಕೊಲೆ ಹಗೆಯು
ಮಾತಿಂದೆ ಸರ್ವರಿಗೆಯುಪಚಾರ ಲೋಕಕ್ಕೆ
ಮಾತೆ ಮಾಣಿಕವು ಸರ್ವಜ್ಞ.

ನಾವು ಆಡುವ ಮಾತುಗಳ ಬಗ್ಗೆ ಹೆಚ್ಚಿನ ಹೊಣೆಗಾರಿಕೆಯಿಂದ ಇರಬೇಕೆಂಬುದನ್ನು ಹೇಳಲಾಗಿದೆ.

(ಮಾತು+ಇಂದ; ನಗೆನುಡಿ=ನಾವಾಡುವ ಮಾತುಗಳು ಒಳ್ಳೆಯ ಉದ್ದೇಶದಿಂದ ಕೂಡಿದ್ದರೆ, ಅವು ನಮಗೆ ಮತ್ತು ಕೇಳುಗರಿಗೆ ಆನಂದ ಮತ್ತು ಉಲ್ಲಾಸವನ್ನು ನೀಡುತ್ತವೆ;

ಕೊಲೆ ಹಗೆ=ಆಡಿದ ಮಾತುಗಳ ಹಿಂದೆ ಕೆಟ್ಟ ಉದ್ದೇಶವಿದ್ದರೆ, ಅವು ನಮ್ಮ ಮತ್ತು ಇತರರ ನಡುವೆ ಮನಸ್ತಾಪ/ಮುನಿಸು/ಅಸೂಯೆ ಇಲ್ಲವೇ ಹಗೆತನವನ್ನು ಬೆಳೆಸಿ ಸಾವುನೋವುಗಳಿಗೆ ಕಾರಣವಾಗುತ್ತವೆ;

ಮಾತಿಂದೆ=ಮಾತುಗಳಿಂದಲೇ; ಸರ್ವರಿಗೆ+ಉಪಚಾರ; ಸರ್ವರಿಗೆ=ಎಲ್ಲರಿಗೂ ಅಂದರೆ ಮಾತನ್ನಾಡುವವರಿಗೆ/ ಕೇಳುವವರಿಗೆ/ಸುತ್ತಮುತ್ತಲಿನವರಿಗೆ;

ಉಪಚಾರ=ಒಳಿತು; ಲೋಕಕ್ಕೆ=ಮಾನವರ ಬಾಳಿನ ಎಲ್ಲಾ ಬಗೆಯ ವ್ಯವಹಾರಗಳಿಗೆ/ಜನ ಸಮುದಾಯದ ಉಳಿವು ಬೆಳವಣಿಗೆಗೆ; ಮಾತೆ=ಮಾತುಗಳೇ; ಮಾಣಿಕ=ರತ್ನ/ಬೆಲೆಬಾಳುವ ಹರಳು/ತುಂಬಾ ಬೆಲೆಯುಳ್ಳದ್ದು).



೬೧. ಮಾತು ಬಂದಲ್ಲಿ ತಾ ಸೋತು ಬರುವುದು ಲೇಸು
ಮಾತಿಂಗೆ ಮಾತ ಮಥನಿಸೆ ವಿಧಿ ಬಂದು
ಆತುಕೊಂಡಿಹುದು ಸರ್ವಜ್ಞ.

ಇತರರೊಡನೆ ಹೊಂದಾಣಿಕೆಯುಂಟಾಗದೆ ಮಾತಿಗೆ ಮಾತು ಬೆಳೆದಾಗ, ಕೋಪ ತಾಪಗಳಿಂದ ಕುದಿಯುತ್ತಾ ಮತ್ತೆ ಮತ್ತೆ ಮಾತನ್ನು ಮುಂದುವರಿಸಿಕೊಂಡು ಹೋದರೆ, ಅದು ಹಾನಿಗೆ ಎಡೆಮಾಡಿಕೊಡುತ್ತದೆ ಎಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಮಾತು ಬಂದಲ್ಲಿ=ಇಬ್ಬರು/ಅನೇಕರ ನಡುವೆ ಒಂದು ಸಂಗತಿಯ ಬಗ್ಗೆ ಬೇರೆ ಬೇರೆ ನಿಲುವುಗಳು ಹೊರಹೊಮ್ಮಿ ವಾದವಿವಾದ ಶುರುವಾದಾಗ; ತಾ=ಮಾತಿನಿಂದ ಉಂಟಾಗುವ ಒಳಿತು/ಕೆಡುಕಿನ ಪರಿಣಾಮಗಳನ್ನು ಅರಿತ ವ್ಯಕ್ತಿಯು; ತಾ=ತಾನು; ಸೋತು ಬರುವುದು=ವಾದವನ್ನು ಮುಂದುವರಿಸದೆ ಹಿಂದಕ್ಕೆ ಸರಿಯುವುದು;

ಲೇಸು=ಒಳ್ಳೆಯದು; ಮಾತಿಂಗೆ=ಮಾತಿಗೆ; ಮಾತ=ಮಾತನ್ನು; ಮಥನ=ಕಡೆಯುವಿಕೆ/ತಿಕ್ಕಾಟ/ಕಡೆಗೋಲಿನಿಂದ ಮೊಸರನ್ನು ಕಡೆಯುವುದು; ಮಾತಿಂಗೆ ಮಾತ ಮಥನಿಸೆ=ಒಂದು ಮಾತಿಗೆ ಎದುರಾಗಿ ಮತ್ತೊಂದು ಮಾತನ್ನು ಆಡತೊಡಗಿದರೆ;

ವಿಧಿ=ವ್ಯಕ್ತಿಯ ಜೀವನದ ಏಳುಬೀಳುಗಳನ್ನು ದೇವರು ಇಲ್ಲವೇ ಅಗೋಚರ ಶಕ್ತಿಯು ನಿರ್ಣಯಿಸುತ್ತದೆ ಎಂಬ ಜನರ ನಂಬಿಕೆ; ವಿಧಿ ಬಂದು=ಯಾವುದಾದರೊಂದು ಬಗೆಯ ಹಾನಿ/ನೋವು/ತೊಂದರೆಯು ಉಂಟಾಗಿ; ಆತುಕೊಂಡು+ಇಹುದು; ಆತುಕೊಂಡು= ಸುತ್ತಿಕೊಂಡು/ಆವರಿಸಿಕೊಂಡು; ಇಹುದು=ಇರುವುದು).



೬೨. ಮಾತ ಬಲ್ಲಾಂತಗೆ ಮಾತೊಂದು ಮಾಣಿಕವು
ಮಾತುಗಳನರಿಯದಧಮಂಗೆ ಮಾಣಿಕವು
ತೂತಾದ ಪರಿಯು ಸರ್ವಜ್ಞ.

ಮಾತನಾಡುವುದು ಒಂದು ಬಗೆಯ ಕಲೆ ಹಾಗೂ ಯಾರೊಬ್ಬರ ಮನಸ್ಸಿಗೂ ನೋವುಂಟುಮಾಡಬಾರದೆಂಬ ಎಚ್ಚರಿಕೆಯಿಂದ ಕೂಡಿರುವ ಸಾಮಾಜಿಕ ವರ್ತನೆ ಎಂಬುದನ್ನು ಹೇಳಲಾಗಿದೆ.

(ಮಾತ=ಮಾತನ್ನು; ಬಲ್ಲ+ಆತಂಗೆ; ಬಲ್ಲ=ತಿಳಿದ/ ಅರಿತ; ಆತಂಗೆ=ಅವನಿಗೆ/ ಅಂತಹ ವ್ಯಕ್ತಿಗೆ; ಬಲ್ಲಾತಂಗೆ=ತಿಳಿದವನಿಗೆ/ಅರಿತವನಿಗೆ;

ಮಾತ ಬಲ್ಲಾತ=ಯಾವ ಎಡೆಯಲ್ಲಿ, ಯಾವ ಸಮಯದಲ್ಲಿ, ಯಾರೊಡನೆ, ಹೇಗೆ ಮಾತನಾಡಬೇಕು ಇಲ್ಲವೇ ಮಾತನಾಡಬಾರದು ಎಂಬ ಅರಿವು ಮತ್ತು ಎಚ್ಚರವನ್ನು ಹೊಂದಿರುವವನು;

ಮಾತು+ಒಂದು; ಮಾಣಿಕ=ರತ್ನ/ಬೆಲೆಬಾಳುವ ಹರಳು/ತುಂಬಾ ಬೆಲೆಯುಳ್ಳ ವಸ್ತು; ಮಾತುಗಳನು+ಅರಿಯದ+ಅಧಮಂಗೆ; ಅರಿಯದ=ತಿಳಿಯದ; ಅಧಮ=ಕೆಟ್ಟ/ ನೀಚ ವ್ಯಕ್ತಿ; ತೂತು+ಆದ=ಗುಳಿಬಿದ್ದ/ಬಿರುಕುಬಿಟ್ಟ; ಪರಿ=ರೀತಿ).



೬೩. ಮೀಪೊಡೆ ಪೋಪೊಡೆ ಪಾಪವೇನದು ಕೆಸರೆ
ಮೀಪೊಡೆ ಮೈಯ ಮಲ ಪೋಪುದಾ ಪಾಪ
ಲೇಪವಾಗಿಕ್ಕು ಸರ್ವಜ್ಞ.

ದೇಗುಲಗಳ ಬಳಿ ಹರಿಯುವ ತೊರೆಗಳಲ್ಲಿ ಮುಳುಗೇಳುವುದರಿಂದ ಮಯ್ಯಿಗೆ ಅಂಟಿಕೊಂಡಿರುವ ಕೊಳೆ ಹೋಗುತ್ತದೆಯೇ ಹೊರತು, ಮಾಡಿದ ಪಾಪ ಹೋಗುವುದಿಲ್ಲ. ಮಾಡಿದ ಪಾಪ ಹೋಗಬೇಕಾದರೆ ಮತ್ತೆ ಅಂತಹ ಪಾಪವನ್ನು ಮಾಡದೆ, ಒಳ್ಳೆಯ ನಡೆನುಡಿಗಳಿಂದ ಬಾಳಿದಾಗ ಮಾತ್ರ ಪಾಪ ತೊಲಗುತ್ತದೆ ಎಂಬುದನ್ನು ಹೇಳಲಾಗಿದೆ.

(ಮೀಪೊಡೆ=ಜಳಕ/ಸ್ನಾನ ಮಾಡುವುದರಿಂದ/ಮಯ್ ತೊಳೆದು ಕೊಳ್ಳುವುದರಿಂದ; ಮೀಯು=ಜಳಕ/ಸ್ನಾನ; ಪೋಪೊಡೆ=ಹೋಗುವುದಾದರೆ;

ಪೋ=ಹೋಗು; ಪೋಪ=ಹೋಗುವ; ಪಾಪವೇನ್+ಅದು; ಪಾಪ=ಸಹಮಾನವರಿಗೆ ಮತ್ತು ಸಮಾಜಕ್ಕೆ ಮಾಡಿದ ಮೋಸ/ಕೇಡು; ಕೆಸರು=ನೀರಿನಿಂದ ಮುದ್ದೆಯಾಗಿರುವ ಮಣ್ಣು; ಪಾಪವೇನದು ಕೆಸರೆ=ಪಾಪವೆಂಬುದು ನೀರಿನಿಂದ ತೊಳೆದ ಮಾತ್ರಕ್ಕೆ ಹೋಗುವ ಕೆಸರಲ್ಲ;

ಮೈ=ದೇಹ/ಶರೀರ; ಮೈಯ=ದೇಹದ/ಶರೀರದ/ಮಯ್ಯಿನ; ಮಲ=ಕೊಳೆ; ಪೋಪುದು+ಆ; ಪೋಪುದು=ಹೋಗುವುದು; ಆ ಪಾಪ=ಜೀವನದಲ್ಲಿ ಮಾಡಿರುವ ಪಾಪ; ಲೇಪವು+ಆಗಿ+ಇಕ್ಕು; ಲೇಪ=ಬಳಿದುಕೊಂಡು; ಇಕ್ಕು=ಇರುವುದು).



೭೪. ಮುದ್ದೆಗಳು ಇಲ್ಲದೆ ನಿದ್ರೆಗಳು ಬಾರವು
ಮುದ್ದು ಮಾತುಗಳು ಸೊಗಸವು ಒಡಲಿಗೆ
ಮುದ್ದೆ ತಪ್ಪಿದರೆ ಸರ್ವಜ್ಞ.

**ಹಸಿವನ್ನು ನೀಗಿಸಿ ಜೀವದ ಉಳಿವಿಗೆ ಕಾರಣವಾಗುವ ಕೂಳಿನ ಮಹಿಮೆಯನ್ನು ಕೊಂಡಾಡಲಾಗಿದೆ.**

(ಮುದ್ದೆ=ರಾಗಿ/ಜೋಳ/ನವಣೆ ಇಲ್ಲವೇ ಇನ್ನಿತರ ದವಸಗಳ ಹಿಟ್ಟನ್ನು ನೀರಿನಲ್ಲಿ ಹದವಾಗಿ ಬೇಯಿಸಿ ಓನಿಸಿ ಕಟ್ಟಿರುವ ಉಂಡೆ; ನಿದ್ರೆಗಳು ಬಾರವು=ನೆಮ್ಮದಿಯಿಂದ ಮಲಗಲು ಆಗುವುದಿಲ್ಲ/ಕಣ್ಣಿಗೆ ನಿದ್ದೆ ಹತ್ತುವುದಿಲ್ಲ; ಬಾರವು=ಬರುವುದಿಲ್ಲ;

ಮುದ್ದು=ಒಲವು/ನಲಿವು/ಚೆಲುವು; ಸೊಗಸು=ಇಂಪು/ಹಿತ/ಹಿಗ್ಗು/ಮುದ; ಮುದ್ದುಮಾತುಗಳು ಸೊಗಸವು=ಇತರರು ಆಡುವ ಒಲವು ನಲಿವಿನ ಮಾತುಗಳು ಯಾವುದೇ ಬಗೆಯ ಆನಂದವನ್ನು ನೀಡುವುದಿಲ್ಲ; ಒಡಲು=ಹೊಟ್ಟೆ/ದೇಹ/ಮಯ್; ತಪ್ಪು=ದೊರೆಯದಿರು/ಸಿಕ್ಕದಿರು; ತಪ್ಪಿದರೆ=ದೊರೆಯದಿದ್ದರೆ/ಸಿಕ್ಕದಿದ್ದರೆ).



೭೫. ಮೂರ್ಖಂಗೆ ಬುದ್ಧಿಯನು ನೂರ್ಕಾಲ ಹೇಳಿದರೆ
ಗೋರ್ಕಲ್ಲ ಮೇಲೆ ಮಳೆಗರೆದರಾ ಕಲ್ಲು
ನೀರ್ಕೊಳ್ಳಬಹುದೆ ಸರ್ವಜ್ಞ.

ಅರಿವನ್ನು ಹೊಂದಲು ಮನಸ್ಸಿಲ್ಲದ ಇಲ್ಲವೇ ಪ್ರಯತ್ನಿಸದ ವ್ಯಕ್ತಿಗೆ ತಿಳುವಳಿಕೆಯನ್ನು ಹೇಳುವುದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಹೇಳಲಾಗಿದೆ.

(ಮೂರ್ಖ=ತಿಳಿಗೇಡಿ/ಸರಿ-ತಪ್ಪುಗಳ ಅರಿವಿಲ್ಲದವನು; ಬುದ್ಧಿ=ತಿಳುವಳಿಕೆ/ ಅರಿವು; ನೂರ್+ಕಾಲ; ಕಾಲ=ಸಮಯ; ನೂರ್ಕಾಲ=ಅನೇಕ ಬಾರಿ/ಹಲವು ಸಲ; ಗೋರ್ಕಲ್ಲು=ಗಡುಸಾದ/ಗಟ್ಟಿಯಾದ ಕಲ್ಲು; ಮಳೆ+ಕರೆದರೆ+ಆ; ಕರೆ=ಸುರಿ/ಬೀಳು;

ಮಳೆಗರೆದರೆ=ಮಳೆಯ ನೀರು ಬಿದ್ದರೆ/ ಸುರಿದರೆ; ನೀರ್+ಕೊಳ್ಳಬಹುದೆ; ಕೊಳ್= ಪಡೆಯುವುದು/ಹೊಂದುವುದು; ಬಹುದು=ಉಂಟಾಗು/ಒದಗು/ಸೇರು/ಕೂಡು;

ಆ ಕಲ್ಲು ನೀರ್ಕೊಳ್ಳಬಹುದೆ=ತನ್ನ ಮೇಲೆ ಸುರಿದ ಮಳೆನೀರನ್ನು ಹೀರಿಕೊಳ್ಳದ ಕಲ್ಲಿನಂತೆ ತಿಳಿಗೇಡಿಯಾದವನು ಇತರರು ಹೇಳುವ ತಿಳುವಳಿಕೆಯ ಮಾತನ್ನು ಅರಿತುಕೊಳ್ಳುವುದಿಲ್ಲ ಎಂಬ ತಿರುಳಿನಲ್ಲಿ ಈ ರೂಪಕವು ಬಳಕೆಯಾಗಿದೆ).



೭೬. ಮೆಲ್ಲನೇ ಹರಿವ ನೀರು ಕಲ್ಲಭೇದಿಸುತಿಕ್ಕು
ಸೊಲ್ಲರಿತು ನುಡಿವರೊಳುನುಡಿಯು ಲೋಕವ
ಗೆಲ್ಲದೆಂತಿಕ್ಕು ಸರ್ವಜ್ಞ.

ಕೋಪತಾಪವಿಲ್ಲದೆ ಆವೇಶಗೊಳ್ಳದೆ ಒಳ್ಳೆಯ ಉದ್ದೇಶದಿಂದ ಆಡುವ ಮಾತು, ಕೇಳುವವರ ಮನಸ್ಸಿಗೆ ಅರಿವನ್ನು ನೀಡಿ ಒಳಿತಿನ ಕಡೆಗೆ ಒಲಿಯುವಂತೆ ಮಾಡುತ್ತದೆ ಎಂಬುದನ್ನು ಹೇಳಲಾಗಿದೆ.

(ಮೆಲ್ಲನೇ ಹರಿವ ನೀರು=ಯಾವುದೇ ಎಡೆಯಲ್ಲಿ ಯಾವಾಗಲೂ ನೀರು ಜೋರಿಲ್ಲದೆ/ವೇಗವಿಲ್ಲದೆ ಹರಿಯುತ್ತಿರುವುದು; ಕಲ್ಲ ಭೇದಿಸುತ+ಇಕ್ಕು; ಕಲ್ಲ=ಕಲ್ಲನ್ನು/ ಬಂಡೆಯನ್ನು; ಭೇದಿಸು=ಅಲುಗಿಸು/ಸಡಿಲಗೊಳಿಸು/ಪುಸಿಗೊಳಿಸು;

ಕಲ್ಲ ಭೇದಿಸು=ಹರಿಯುವ ನೀರಿಗೆ ಅಡ್ಡಲಾಗಿರುವ ಬಂಡೆಯ ಸುತ್ತಲಿನ ಮಣ್ಣನ್ನು ಕೊರೆದು ಪುಸಿಗೊಳಿಸಿ ಬಂಡೆಯನ್ನೇ ಅಲುಗುವಂತೆ ಮಾಡುವುದು; ಇಕ್ಕು=ಇರುವುದು;

ಸೊಲ್ಲ+ಅರಿತು; ಸೊಲ್ಲು=ಮಾತು/ನುಡಿ; ಅರಿತು=ತಿಳಿದು; ಸೊಲ್ಲರಿತು=ಯಾವ ಬಗೆಯ ಮಾತನ್ನು ಆಡಬೇಕು/ಆಡಬಾರದು ಎಂಬ ಎಚ್ಚರಿಕೆಯಿಂದ/ ಹೊಣೆಗಾರಿಕೆಯಿಂದ; ನುಡಿವರ+ಒಳುನುಡಿಯು; ನುಡಿವರ=ಮಾತನಾಡುವವರ;

ಒಳುನುಡಿ=ಒಳ್ಳೆಯ ಮಾತು/ಕೇಳಿದವರ ಮನದಲ್ಲಿ ಅರಿವು ಮತ್ತು ಆನಂದವನ್ನು ಮೂಡಿಸುವಂತಹ ಮಾತುಗಳು; ಲೋಕ=ಜಗತ್ತು/ಸಮಾಜ/ಸಮುದಾಯ/ಜನಮನ; ಗೆಲ್ಲದೆ+ಎಂತು+ಇಕ್ಕು;

ಎಂತು=ಯಾವ ರೀತಿ/ಬಗೆ; ಎಂತಿಕ್ಕು=ಹೇಗೆ ತಾನೇ ಇರುವುದು; ಗೆಲ್ಲು=ಜಯವನ್ನು/ಮೆಚ್ಚುಗೆಯನ್ನು ಪಡೆ; ಲೋಕವ ಗೆಲ್ಲು=ಒಳಿತನ್ನುಂಟು ಮಾಡುವ ಮಾತು ಎಲ್ಲರ ಮನಸ್ಸಿಗೂ ಮುದವನ್ನು ನೀಡಿ ಮೆಚ್ಚುಗೆಯನ್ನು ಪಡೆಯುತ್ತದೆ).



೬೭ ಯಾತರ ಹೂವಾದರು ನಾತರೆ ಸಾಲದೆ
ಜಾತಿ ವಿಜಾತಿಯೆನಬೇಡ ಶಿವನೊಲಿ
ದಾತನೇ ಜಾತ ಸರ್ವಜ್ಞ.

ಮೇಲು-ಕೀಳೆಂಬ ಜಾತಿ ಮೆಟ್ಟಿಲುಗಳಿಂದ ಕೂಡಿರುವ ಸಮಾಜದಲ್ಲಿ "ಜಾತಿ ಎನ್ನುವುದು ಮಾನವರೇ ಕಟ್ಟಿಕೊಂಡಿರುವ ಒಂದು ಸಾಮಾಜಿಕ ರಚನೆ. ಆದುದರಿಂದ ಜಾತಿ ಎಂಬುದು ಮಾನವನ ದೇಹದಲ್ಲಿಲ್ಲ; ಮನದಲ್ಲಿ ನೆಲೆಸಿದೆ. ಜಾತಿಯ ಕಾರಣಕ್ಕಾಗಿ ಯಾವುದೇ ವ್ಯಕ್ತಿಯನ್ನು ಮೆಚ್ಚಿಕೊಳ್ಳಬಾರದು ಇಲ್ಲವೆ ಕಡೆಗಣಿಸಬಾರದು. ವ್ಯಕ್ತಿಯಲ್ಲಿರುವ ಒಳ್ಳೆಯ ನಡೆನುಡಿಗಳನ್ನು ಮಾತ್ರ ಗುರುತಿಸಬೇಕು." ಎಂಬ ಅರಿವನ್ನು ಮೂಡಿಸಲು ರೂಪಕವೊಂದರ ಮೂಲಕ ಹೇಳಲಾಗಿದೆ. ಒಂದಲ್ಲ ಒಂದು ಬಗೆಯ ಕಂಪಿನಿಂದ ಕೂಡಿರುವ ಹೂವು ಇಲ್ಲಿ ರೂಪಕವಾಗಿದೆ.

(ಯಾತರ=ಯಾವುದೇ ಬಗೆಯ; ಹೂವು+ಆದರು; ನಾತ=ಕಂಪು/ವಾಸನೆ/ ಪರಿಮಳ; ನಾತರೆ=ಕಂಪಿನಿಂದ ಕೂಡಿದ್ದರೆ; ಸಾಲದೆ=ಸಾಕಲ್ಲವೇ;

ಯಾತರ ಹೂವಾದರೂ ನಾತರೆ ಸಾಲದೆ=ಯಾವುದೇ ಹೂವಿನ ಆಕಾರ/ ಬಣ್ಣಗಳು ಹೇಗಿದ್ದರೇನು? ಒಟ್ಟಿನಲ್ಲಿ ಆ ಹೂವಿನಿಂದ ಒಳ್ಳೆಯ ಕಂಪು/ಪರಿಮಳ/ ಸುವಾಸನೆ ಹೊರಹೊಮ್ಮುತ್ತಿರಬೇಕು.

ಅಂತೆಯೇ ಮಾನವನ ಆಕಾರ/ಬಣ್ಣ/ದೇಹದ ಕಸುವು ಹೇಗಿದ್ದರೇನು ಅವನು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ವ್ಯಕ್ತಿಯಾಗಿದ್ದರೆ ಸಾಕು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ರೂಪಕ;

ಜಾತಿ ವಿಜಾತಿಯೆನಬೇಡ=ಮೇಲುಜಾತಿ/ಕೀಳುಜಾತಿ ಎಂಬ ತಾರತಮ್ಯವನ್ನು ಮಾಡಬೇಡ; ಶಿವನ+ಒಲಿದ+ಆತನೆ=ಒಳ್ಳೆಯ ನಡೆನುಡಿಗಳನ್ನೇ ಶಿವನೆಂದು ನಂಬಿರುವ ವ್ಯಕಿಯೇ; ಜಾತ=ಹುಟ್ಟಿದವನು/ ಒಳ್ಳೆಯ ವ್ಯಕ್ತಿ).



೭೮. ರಸಿಕರಾಡುವ ಮಾತು ಶಶಿ ಉದಯವಾದಂತೆ
ರಸಿಕರಲ್ಲದವರ ಬಿರುನುಡಿಯು ಕಿವಿಯೊಳು ಕೂ
ರ್ದಸಿಯ ಬಲಿದಂತೆ ಸರ್ವಜ್ಞ.

ಕೇಳುಗರ ಮನದಲ್ಲಿ ಅರಿವು ಹಾಗೂ ಆನಂದವನ್ನು ಮೂಡುವಂತೆ ಇಲ್ಲವೇ ಆತಂಕ ಹಾಗೂ ಕಳವಳವನ್ನು ಉಂಟುಮಾಡಿ ನೋಯಿಸುವಂತೆ ಆಡುವ ಮಾತುಗಳಿಂದ ಉಂಟಾಗುವ ಪರಿಣಾಮಗಳನ್ನು ಹೇಳಲಾಗಿದೆ.

(ರಸಿಕರು+ಆಡುವ; ರಸಿಕ=ಒಳಿತು ಕೆಡುಕುಗಳನ್ನು ಅರಿತವನು/ ಯಾವುದೇ ಸಂಗತಿಗಳಲ್ಲಿ ಒಳ್ಳೆಯದನ್ನು ಮತ್ತು ಚೆಲುವನ್ನು ಗುರುತಿಸಿ ತಾನೂ ಸವಿದು ಇತರರಿಗೂ ಹೇಳುವವನು; ಶಶಿ=ಚಂದ್ರ; ಉದಯವು+ಆದಂತೆ=ಬೆಳುದಿಂಗಳನ್ನು ಚೆಲ್ಲುತ್ತಾ ಮೂಡಿಬರುವಂತೆ; ರಸಿಕರು+ಅಲ್ಲದವರ; ರಸಿಕರಲ್ಲದವರು=ಒಳ್ಳೆಯದನ್ನು/ ಚೆಲುವಾದುದನ್ನು ಮೆಚ್ಚದೆ, ಎಲ್ಲವನ್ನೂ/ಎಲ್ಲರನ್ನೂ ತೆಗಳುವವರು;

ಬಿರು=ಒರಟು/ಗಡುಸು; ಬಿರುನುಡಿ=ಕೇಳುಗರ ಮನವನ್ನು ನೋಯಿಸುವಂತಹ ಮಾತುಗಳು; ಕಿವಿ+ಒಳು; ಕಿವಿಯೊಳು=ಕಿವಿಯಲ್ಲಿ/ಕಿವಿಯ ಒಳಕ್ಕೆ ;

ಕೂರ್ದಸಿ=ಕೂರ್+ದಸಿ; ಕೂರ್=ಹರಿತವಾದ/ಮೊನಚಾದ/ಚೂಪಾದ; ದಸಿ=ಶೂಲ/ಚೂಪಾದ ತುದಿಯುಳ್ಳ ಹತಾರ; ಬಲಿ=ಚುಚ್ಚು/ನಾಟು; ಬಲಿದ+ಅಂತೆ=ನಾಟಿಕೊಂಡ ಹಾಗೆ).



೭೯. ಲಿಂಗಕ್ಕೆ ತೋರಿಸುತ ನುಂಗುವಾತನೆ ಕೇಳು
ಲಿಂಗ ಉಂಬುವುದೆ ಪೊಡಮಡುತೆಲೊ ಪಾಪಿ
ಜಂಗಮಕೆ ನೀಡು ಸರ್ವಜ್ಞ.

ಜಡರೂಪಿ ಲಿಂಗದ ಮುಂದೆ ಹಲವು ಬಗೆಯ ಉಣಿಸುಗಳನ್ನು ಕೆಲವು ಗಳಿಗೆ ಇಟ್ಟು, ಅನಂತರ ತಾನೇ ಕಬಳಿಸುವುದರ ಬದಲು, ಹಸಿದು ಬರುವ ಜೀವರೂಪಿ ಜಂಗಮನಿಗೆ ಉಣಿಸನ್ನು ನೀಡಬೇಕೆಂಬುದನ್ನು ಹೇಳಲಾಗಿದೆ.

(ಲಿಂಗ=ದೇವರೆಂದು ನಂಬಿರುವ ಶಿವನ ಸಂಕೇತವಾದ ವಿಗ್ರಹ; ಲಿಂಗಕ್ಕೆ ತೋರಿಸುತ=ಲಿಂಗದ ಮುಂದೆ ತಿನಸು ಉಣಿಸುಗಳನ್ನು ಎಡೆಯಿಟ್ಟು; ನುಂಗುವ+ಆತನೆ; ನುಂಗು=ತಿನ್ನು/ಕಬಳಿಸು; ನುಂಗುವಾತ=ಕಬಳಿಸುವವನು/ತಿನ್ನುವವನು;

ಉಂಬುವುದೆ=ಉಣ್ಣುತ್ತದೆಯೇ/ತಿನ್ನುತ್ತದೆಯೇ; ಪೊಡಮಡುತ+ಎಲೊ; ಪೊಡಮಡು=ಅಡ್ಡಬೀಳು/ ನಮಸ್ಕರಿಸು; ಎಲೊ=ವ್ಯಕ್ತಿಯನ್ನು ಉದ್ದೇಶಿಸಿ ನುಡಿಯುವಾಗ ಬಳಸುವ ಪದ;

ಪಾಪಿ=ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವವನು/ ಕೆಟ್ಟಕೆಲಸಗಳಲ್ಲಿ ತೊಡಗಿದವನು; ಜಂಗಮ=ಶಿವನನ್ನು ನಂಬಿರುವ ಮತ್ತು ಕಾಯಕದ ಬೆಲೆಯನ್ನು ಅರಿತಿರುವ ವ್ಯಕ್ತಿ; ನೀಡು=ಕೊಡು/ಉಣಬಡಿಸು).



೭೦. ವಿದ್ಯೆ ಕಲಿಸದ ತಂದೆ ಬುದ್ಧಿ ಹೇಳದ ಗುರುವು
ಬಿದ್ದಿರಲು ಬಂದು ನೋಡದ ತಾಯಿಯು
ಶುದ್ಧವೈರಿಗಳು ಸರ್ವಜ್ಞ.

ಹುಟ್ಟಿಗೆ ಕಾರಣವಾಗುವ ತಾಯಿತಂದೆಗಳು ಮತ್ತು ಅರಿವನ್ನು ಮೂಡಿಸುವ ಗುರುಗಳು ತಮ್ಮ ಹೊಣೆಗಾರಿಕೆಯನ್ನು ಮರೆತಾಗ ವ್ಯಕ್ತಿಯ ಪಾಲಿಗೆ ಏನಾಗುತ್ತಾರೆ ಎಂಬುದನ್ನು ಹೇಳಲಾಗಿದೆ.

(ವಿದ್ಯೆ=ಯಾವುದೇ ಒಂದು ಸಂಗತಿಯಲ್ಲಿ ಒಳ್ಳೆಯ ತಿಳುವಳಿಕೆ ಮತ್ತು ಚೆನ್ನಾಗಿ ಕೆಲಸ ಮಾಡುವ ಕುಶಲತೆ; ಕಲಿಸು=ತಿಳಿಯುವಂತೆ/ಅರಿಯುವಂತೆ ತರಬೇತಿಯನ್ನು ನೀಡು;

ಬುದ್ಧಿ=ಅರಿವು/ವಿವೇಕ/ಯಾವುದು ಒಳಿತು-ಯಾವುದು ಕೆಡುಕು ಎಂಬುದನ್ನು ಗುರುತಿಸಿಕೊಂಡು ಒಳಿತಿನ ಕಡೆಗೆ ಅಡಿಯಿಡಬೇಕೆಂಬ ಎಚ್ಚರ;

ಬಿದ್ದು+ಇರಲು; ಬಿದ್ದಿರಲು=ರೋಗರುಜಿನಗಳಿಗೆ ಗುರಿಯಾಗಿ ನರಳುತ್ತಿರಲು; ಶುದ್ಧ=ನಿಜವಾಗಿಯೂ/ಎಲ್ಲಾ ರೀತಿಯಿಂದಲೂ; ವೈರಿ=ಹಗೆ/ಶತ್ರು).



**೭೧. ಸಜ್ಜನರ ಸಂಗ ತಾ ಹೆಜ್ಜೇನ ಕೊಡನಂತೆ**
**ದುರ್ಜನರ ಕೂಟವಣುಮಾತ್ರ ಬಚ್ಚಲ**
**ರೊಜ್ಜೆನಂತಿಹುದು ಸರ್ವಜ್ಞ.**

**ಒಳ್ಳೆಯವರ ಇಲ್ಲವೇ ಕೆಟ್ಟವರ ಒಡನಾಟದಿಂದ ಉಂಟಾಗುವ ಪರಿಣಾಮಗಳನ್ನು ಹೇಳಲಾಗಿದೆ.**

(ಸಜ್ಜನ=ಒಳ್ಳೆಯ ನಡೆನುಡಿಯುಳ್ಳವನು; ಸಂಗ=ಗೆಳೆತನ/ಒಡನಾಟ/ವ್ಯವಹಾರ; ತಾ=ಅದು; ಹೆಜ್ಜೇನು=ಹಿರಿದಾದ/ದೊಡ್ಡದಾದ ಜೇನುಹುಳು; ಕೊಡನ+ಅಂತೆ; ಕೊಡ=ಜೇನಿನ ಗೂಡು/ಗಡಿಗೆ/ಬಿಂದಿಗೆ; ಅಂತೆ=ಹಾಗೇ; ಹೆಜ್ಜೇನ ಕೊಡ=ದೊಡ್ಡಗಾತ್ರದ ಜೇನಿನ ಹುಟ್ಟು/ಗೂಡು/ಜೇನು ತುಂಬಿದ ಗಡಿಗೆ;

ಸಜ್ಜನರ ಸಂಗ ತಾ ಹೆಜ್ಜೇನ ಕೊಡನಂತೆ=ಸಿಹಿಯಾದ ಜೇನನ್ನು ಸವಿದು ನಲಿಯುವಂತೆ ಒಳ್ಳೆಯವರ ಜತೆಯಲ್ಲಿ ಮಾಡುವ ಗೆಳೆತನ/ವ್ಯವಹಾರದಿಂದ ಒಲವು ನಲಿವನ್ನು ಕಾಣುತ್ತೇವೆ/ಪಡೆಯುತ್ತೇವೆ; ದುರ್ಜನ=ಕೆಟ್ಟ ನಡೆನುಡಿಯುಳ್ಳವನು; ಕೂಟವು+ಅಣು+ಮಾತ್ರ; ಕೂಟ=ಗೆಳೆತನ/ಒಡನಾಟ/ನೆಂಟು; ಅಣು=ಸಣ್ಣ ಕಣ/ತುಸು/ಕಿಂಚಿತ್ತು;

ಅಣುಮಾತ್ರ=ತುಸುವಾಗಿದ್ದರೂ; ಬಚ್ಚಲು=ಪಾತ್ರೆಪಡಗಗಳನ್ನು ಮತ್ತು ಮಯ್ಯನ್ನು ತೊಳೆದ ನೀರು ಹರಿದು ಹೋಗಲು ಮಾಡಿರುವ ಚರಂಡಿ/ಮೋರಿ; ರೊಜ್ಜೆನ+ಅಂತೆ+ಇಹುದು; ರೊಜ್ಜು=ಕೆಸರು/ರಾಡಿ/ಬಗ್ಗಡ/ಕೊಳಕಾದ ವಸ್ತುಗಳಿಂದ ತುಂಬಿದ ನೀರು; ಇಹುದು=ಇರುವುದು;

ದುರ್ಜನರ ಕೂಟವಣುಮಾತ್ರ ಬಚ್ಚಲ ರೊಜ್ಜೆನಂತಿಹುದು=ಬಚ್ಚಲಲ್ಲಿ ಹರಿಯುತ್ತಿರುವ ನೀರು ಕೊಳಕಾಗಿ ಕೆಟ್ಟವಾಸನೆಯಿಂದ ಕೂಡಿ ವಾಕರಿಕೆಯನ್ನು ತರುವಂತೆ ಕೆಟ್ಟ ನಡೆನುಡಿಯುಳ್ಳವರ ಒಡನಾಟದಿಂದ ಸಂಕಟಕ್ಕೆ/ಅಪಮಾನಕ್ಕೆ ಒಳಗಾಗಿ ನರಳುತ್ತೇವೆ.)



೭೨. ಸತ್ತು ಹೋದರೆ ನಿನಗದೆತ್ತಣದು ಮೋಕ್ಷವೈ
ಸತ್ತು ಹೋಗದತಿಜೀವವಿರಲು ಮೋಕ್ಷದ
ಗೊತ್ತು ತಿಳಿಯೆಂದ ಸರ್ವಜ್ಞ.

ಜೀವವಿರುವ ತನಕ ಒಲವು ನಲಿವಿನಿಂದ ಕೂಡಿ ಸಮಾಜಕ್ಕೆ ಒಳಿತನ್ನು ಮಾಡುವ ದುಡಿಮೆಯಿಂದ ಬದುಕನ್ನು ನಡೆಸುವುದೇ ನಿಜವಾದ ಮುಕ್ತಿ ಎಂಬುದನ್ನು ಹೇಳಲಾಗಿದೆ.

(ಸತ್ತು ಹೋದರೆ=ಯಾವುದೇ ವ್ಯಕ್ತಿಯು ತಾನಾಗಿಯೇ ಸಾವನ್ನು ತಂದುಕೊಂಡರೆ; ನಿನಗೆ+ಅದು+ಎತ್ತಣದು; ಎತ್ತಣ=ಯಾವ ಕಡೆ/ಎಡೆ/ದಿಕ್ಕು; ಎತ್ತಣದು=ಯಾವ ರೀತಿಯಲ್ಲಿ; ಮೋಕ್ಷವೈ=ಮುಕ್ತಿಯು ದೊರೆಯುತ್ತದೆ;

ಮೋಕ್ಷ=ಹುಟ್ಟು ಬದುಕು ಸಾವುಗಳ ಸರಪಣಿಯಿಂದ ಜೀವವು ಬಿಡುಗಡೆಯನ್ನು/ ಮುಕ್ತಿಯನ್ನು ಹೊಂದುತ್ತದೆ ಎಂಬ ನಂಬಿಕೆ;

ಸತ್ತು ಹೋಗದೆ+ಅತಿ ಜೀವವು+ಇರಲು; ಸತ್ತುಹೋಗದೆ=ನೀನಾಗಿಯೇ ಸಾವನ್ನು ತಂದುಕೊಳ್ಳದೆ; ಅತಿ=ದೊಡ್ಡದಾದ/ಹಿರಿದಾದ; ಜೀವವು+ಇರಲು=ಜೀವವು ಇರುವಾಗ; ಗೊತ್ತು=ನೆಲೆ/ಜಾಗ;

ಮೋಕ್ಷದ ಗೊತ್ತು ತಿಳಿ=ಮುಕ್ತಿಯ ನೆಲೆಯಿರುವುದು ಸಾವಿನಲ್ಲಲ್ಲ, ಬದುಕಿನ ಕ್ರಿಯಾಶೀಲತೆಯಲ್ಲಿ ಎಂಬುದನ್ನು ಮನದಟ್ಟು ಮಾಡಿ ಕೊಳ್ಳುವುದು; ತಿಳಿ+ಎಂದ; ತಿಳಿ=ಅರಿತುಕೊಳ್ಳುವುದು).



೭೩. ಸತ್ಯರ ನಡೆ ತೀರ್ಥ ಮತ್ತೆ ಜಂಗಮ ತೀರ್ಥ
ಉತ್ತಮರ ಸಂಗವದು ತೀರ್ಥ ಹರಿವ ನೀ
ರೆತ್ತಣ ತೀರ್ಥ ಸರ್ವಜ್ಞ.

ದೇಗುಲಗಳ ಬಳಿ ಹರಿಯುತ್ತಿರುವ ತೊರೆಯ ನೀರು ಇಲ್ಲವೇ ಪೂಜಾರಿಯು ಕೊಡುವ ನೀರನ್ನು ಪವಿತ್ರವೆಂದು ನಂಬಿರುವ ಜನರಿಗೆ, ಯಾವುದು ಪವಿತ್ರವೆಂಬುದನ್ನು ಹೇಳಲಾಗಿದೆ.

(ಸತ್ಯ=ನಿಜ/ದಿಟ/ವಾಸ್ತವ; ಸತ್ಯರು=ಸಹ ಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟುಮಾಡುವ ವ್ಯಕ್ತಿಗಳು; ನಡೆ=ವರ್ತನೆ/ನಡವಳಿಕೆ; ಸತ್ಯರ ನಡೆ=ಸತ್ಯವಂತರು ತಮ್ಮ ಜೀವನದಲ್ಲಿ ಆಡಿದ ನುಡಿ ಮತ್ತು ಮಾಡಿದ ಕೆಲಸಗಳು;

ತೀರ್ಥ=ಪವಿತ್ರವಾದುದು/ಉತ್ತಮವಾದುದು/ಒಳ್ಳೆಯದು; ತೀರ್ಥ=ದೇವಾಲಯಗಳಲ್ಲಿ ದೇವರ ಪೂಜೆಯ ನಂತರ ನೀಡುವ ನೀರು. ಇದನ್ನು ದೇವರಲ್ಲಿ ಒಲವು ಮತ್ತು ನಂಬಿಕೆಯುಳ್ಳ ವ್ಯಕ್ತಿಗಳು ಪವಿತ್ರವೆಂದು ನಂಬಿರುತ್ತಾರೆ;

ಮತ್ತೆ=ಬಳಿಕ/ನಂತರ/ಆಮೇಲೆ; ಜಂಗಮ=ಒಳ್ಳೆಯ ನಡೆನುಡಿಗಳನ್ನೇ ಶಿವನನ್ನು ನಂಬಿರುವ ಮತ್ತು ಕಾಯಕದ ಬೆಲೆಯನ್ನು ಅರಿತಿರುವ ವ್ಯಕ್ತಿ; ಸಂಗವು+ಅದು; ಸಂಗ=ಜತೆಯಲ್ಲಿ ವ್ಯವಹರಿಸುವುದು; ನೀರು+ಎತ್ತಣ; ಎತ್ತಣ=ಯಾವ ರೀತಿಯಲ್ಲಿ/ಯಾವ ಬಗೆಯಲ್ಲಿ).



೭೪. ಸತ್ಯರು ಹುಸಿದಡೆ ಒತ್ತಿ ಬಂದಡೆ ಶರಧಿ
ಉತ್ತಮರು ತಪ್ಪಿ ನಡೆದಡೆ ಲೋಕವಿ
ನ್ನೆತ್ತ ಸಾರುವುದು ಸರ್ವಜ್ಞ.

**ಸಮಾಜದ ಒಳಿತಿಗಾಗಿ ಹೊಣೆಗಾರಿಕೆಯಿಂದ ನಡೆದುಕೊಳ್ಳಬೇಕಾದ ವ್ಯಕ್ತಿಗಳೇ ಕೆಟ್ಟ ನಡೆನುಡಿಗಳಿಂದ ವರ್ತಿಸತೊಡಗಿದಾಗ, ಅಂತಹ ಸಮಾಜಕ್ಕೆ ಕೇಡು ಕಟ್ಟಿಟ್ಟ ಬುತ್ತಿ ಎಂಬುದನ್ನು ಹೇಳಲಾಗಿದೆ.**

(ಸತ್ಯರು=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ವ್ಯಕ್ತಿಗಳು/ಸತ್ಯವಂತರು; ಹುಸಿದಡೆ=ಸುಳ್ಳನ್ನು ಹೇಳಿದರೆ; ಹುಸಿ=ಸುಳ್ಳು; ಒತ್ತು=ಆಕ್ರಮಿಸು/ಮುನ್ನುಗ್ಗಿ ಬರು/ತಳ್ಳು; ಬಂದಡೆ=ಬಂದರೆ;

ಒತ್ತಿ ಬಂದಡೆ=ದಡವನ್ನೇ ಕೊಚ್ಚುವಂತೆ ಅಲೆಗಳು ಉಕ್ಕೆದ್ದು ಅಪ್ಪಳಿಸಿದರೆ; ಶರಧಿ=ಸಮುದ್ರ/ಕಡಲು/ಸಾಗರ; ಉತ್ತಮರು=ಒಳ್ಳೆಯ ನಡೆನುಡಿಯುಳ್ಳವರು; ತಪ್ಪಿ ನಡೆದಡೆ=ನೀತಿನಿಯಮಗಳನ್ನು ಕಡೆಗಣಿಸಿ ನಡೆದುಕೊಂಡರೆ;

ಲೋಕವು+ಇನ್ನು+ಎತ್ತ; ಲೋಕ=ಜಗತ್ತಿನ ವ್ಯವಹಾರ/ಸಮಾಜದ ಬದುಕು; ಎತ್ತ=ಯಾವ ಕಡೆಗೆ; ಸಾರುವುದು= ಹೋಗುವುದು).



೭೫. ಸತ್ಯವೆಂಬುದು ತಾನು ಹಿತ್ತಲದ ಗಿಡ ನೋಡ
ಮತ್ತೆಲ್ಲಿ ನೋಡಿ ಅರಸದಲೆ ತಾನಿರ್ದ
ಹತ್ತಿರಲೇ ನೋಡ ಸರ್ವಜ್ಞ.

ತನ್ನ ಮನೆಯಲ್ಲಿಯೇ ತನ್ನ ನೆರೆಹೊರೆಯಲ್ಲಿಯೇ ಹಗಲಿರುಳು ದುಡಿಯುತ್ತಾ, ಇತರರ ಒಳಿತಿಗಾಗಿಯೇ ತಮ್ಮ ಬದುಕನ್ನೇ ಮುಡಿಪಾಗಿಟ್ಟಿರುವ ವ್ಯಕ್ತಿಗಳ ಒಳ್ಳೆಯ ನಡೆನುಡಿಗಳಿಂದಲೇ ಸತ್ಯದ ಸಂಗತಿಗಳನ್ನು ಅರಿತುಕೊಳ್ಳಬೇಕೆಂದು ಹೇಳಲಾಗಿದೆ.

(ಸತ್ಯವು+ಎಂಬುದು; ಸತ್ಯ=ನಿಜ/ದಿಟ ವಾಸ್ತವ; ತಾನು=ಅದು; ಹಿತ್ತಲು=ಮನೆಯ ಹಿಂದಿನ ಜಾಗ; ಹಿತ್ತಲದ ಗಿಡ=ಇದು ಒಂದು ನುಡಿಗಟ್ಟು, ನಮ್ಮ ಸುತ್ತಮುತ್ತಣ ಎಡೆಯಲ್ಲಿಯೇ ಕಾಣಬಹುದಾದ ವ್ಯಕ್ತಿಗಳು ಮತ್ತು ಸಂಗತಿಗಳು ಎಂಬ ತಿರುಳಿನಲ್ಲಿ ಬಳಕೆಯಾಗುತ್ತದೆ;

ಮತ್ತೆ+ಎಲ್ಲಿ=ಬೇರೆ ಕಡೆಗಳಲ್ಲಿ; ಅರಸದಲೆ=ಹುಡುಕದೆಯೆ; ಅರಸು=ಹುಡುಕು/ತಡಕಾಡು; ತಾನು+ಇರ್ದ=ತಾನು ಇರುವ; ಹತ್ತಿರ=ಸಮೀಪ/ಬಳಿ; ಹತ್ತಿರಲೇ=ಅಕ್ಕಪಕ್ಕದಲ್ಲಿಯೇ/ತನ್ನ ಸುತ್ತಮುತ್ತಣ ಪರಿಸರದಲ್ಲಿಯೇ; ನೋಡ=ನೋಡುವಂತವನಾಗು/ತಿಳಿಯಲು ಪ್ರಯತ್ನಿಸು;

ಸತ್ಯವೆಂಬುದು ತಾನು ಹಿತ್ತಲದ ಗಿಡ ನೋಡ=ನಮ್ಮ ಸುತ್ತ ಮುತ್ತಣ ಪರಿಸರದಲ್ಲಿಯೇ ಅನೇಕ ವ್ಯಕ್ತಿಗಳು ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿರುತ್ತಾರೆ. ಆದರೆ ಅಂತಹವರ ಬದುಕಿನ ಒಳ್ಳೆಯ ನಡೆನುಡಿಗಳ ಬೆಲೆಯನ್ನು ಅರಿಯದೆ/ಗುರುತಿಸದೆ, ಮತ್ತೆಲ್ಲೋ/ಮತ್ತಾರಲ್ಲೋ ಒಳಿತಿನ ಗುಣಗಳನ್ನು ಹುಡುಕುತ್ತಿರುತ್ತೇವೆ ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಳು.



೭೬. ಸಾಲವನು ಕೊಂಬಾಗ ಹಾಲೋಗರುಂಡಂತೆ
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ.

ಸಾಲದ ವ್ಯವಹಾರದಿಂದ ಉಂಟಾಗುವ ಬವಣೆಗಳನ್ನು ಹೇಳಲಾಗಿದೆ.

(ಸಾಲ=ಇತರರಿಂದ ಹಣ/ಒಡವೆ/ವಸ್ತುಗಳನ್ನು ಗೊತ್ತುಪಡಿಸಿದ ಸಮಯಕ್ಕೆ ಹಿಂತಿರುಗಿಸುವ ಕರಾರಿನೊಡನೆ ಪಡೆಯುವುದು; ಕೊಂಬ+ಆಗ; ಕೊಂಬ=ಪಡೆಯುವ/ಈಸಿಕೊಳ್ಳುವ; ಕೊಂಬಾಗ=ಪಡೆಯುವಾಗ/ತೆಗೆದುಕೊಳ್ಳುವಾಗ;

ಹಾಲು+ಓಗರ+ಉಂಡ+ಅಂತೆ; ಓಗರ=ಅನ್ನ; ಹಾಲೋಗರ=ಹಾಲು ಅನ್ನ; ಉಂಡ=ಊಟ ಮಾಡಿದ; ಅಂತೆ=ಹಾಗೆ; ಸಾಲಿಗ=ಸಾಲ ಕೊಟ್ಟವನು; ಎಳೆವಾಗ=ಎಳೆಯುವಾಗ;

ಸಾಲಿಗನು ಬಂದು ಎಳೆವಾಗ=ಸಾಲವನ್ನು ಸಮಯಕ್ಕೆ ಸರಿಯಾಗಿ ಕಟ್ಟದಿದ್ದಾಗ, ಸಾಲವನ್ನು ವಸೂಲಿ ಮಾಡಲು ಬಂದ ಸಾಲಿಗನು ಆಡುವ ಅಪಮಾನದ ನುಡಿಗಳು ಹಾಗೂ ಕೊಡುವ ಕಿರುಕುಳ;

ಕಿಬ್ಬದಿಯ=ಕಿರಿದಾದ+ಬದಿ; ಬದಿ=ಪಕ್ಕ/ಮಗ್ಗಲು; ಕಿಬ್ಬದಿ=ಸೊಂಟ/ಪಕ್ಕೆ; ಕೀಲು=ಮೂಳೆ; ಮುರಿದ+ಅಂತೆ; ಮುರಿ=ತುಂಡಾಗು)



೭೭. ಸಿರಿಬಂದ ಕಾಲದಲಿ ಕರೆದು ಧರ್ಮವ ಮಾಡು
ಪರಿಣಾಮವಕ್ಕು ಪದಪಕ್ಕು ಕೈಲಾಸ
ನೆರೆಮನೆಯಕ್ಕು ಸರ್ವಜ್ಞ.

ಸಿರಿಸಂಪದಗಳು ದೊರೆತಾಗ ಅದನ್ನು ತಾನೊಬ್ಬನೇ ಹೊಂದದೆ, ಇತರರಿಗೆ ನೆರವನ್ನು ನೀಡುವುದರ ಮೂಲಕ ಬದುಕನ್ನು ಹಸನುಗೊಳಿಸಿಕೊಳ್ಳಬೇಕೆಂಬುದನ್ನು ಹೇಳಲಾಗಿದೆ.

(ಸಿರಿ=ಆಸ್ತಿಪಾಸ್ತಿ/ಹಣಕಾಸು/ವಸ್ತುಒಡವೆ; ಸಿರಿಬಂದ ಕಾಲದಲಿ= ಸಿರಿವಂತನಾದಾಗ/ಸಂಪತ್ತು ಕೂಡಿ ಬಂದಾಗ; ಕರೆದು ಧರ್ಮವ ಮಾಡು=ಬಡಬಗ್ಗರನ್ನು/ ಸಂಕಟದಲ್ಲಿರುವವರನ್ನು ಗುರುತಿಸಿ ನೆರವನ್ನು ನೀಡು;

ಪರಿಣಾಮವು+ಅಕ್ಕು; ಪರಿಣಾಮ=ಒಳಿತು/ಆನಂದ/ಏಳಿಗೆ/ಮಂಗಳ; ಅಕ್ಕು=ಆಗುವುದು/ದೊರೆಯುವುದು; ಪದಪು+ಅಕ್ಕು; ಪದಪು=ಒಲವು/ಆದರ/ಮನ್ನಣೆ/ ಹಿಗ್ಗು;

ಕೈಲಾಸ=ದೇವರಾದ ಶಿವನು ನೆಲೆಸಿರುವ ತಾಣ/ಹುಟ್ಟು ಬದುಕು ಸಾವುಗಳ ಚಕ್ರದಿಂದ ಪಾರಾಗಿ ಶಿವನ ಬಳಿಸಾರಬೇಕೆಂದು ದೇವರನ್ನು ಪೂಜಿಸುವವರು ಹಂಬಲಿಸುವ ತಾಣ. ಇಲ್ಲಿ ಶಿವನು ನೆಲೆಸಿದ್ದಾನೆ ಎಂಬುದು ಜನಮನದಲ್ಲಿರುವ ಒಂದು ನಂಬಿಕೆ;

ನೆರೆಮನೆಯು+ಅಕ್ಕು; ನೆರಮನೆ=ಪಕ್ಕದ ಮನೆ; ಕೈಲಾಸ ನೆರೆಮನೆಯಕ್ಕು=ಮುಕ್ತಿಯನ್ನು ಪಡೆಯುವುದಕ್ಕೆ ಯೋಗ್ಯನಾಗುವೆ ಎಂಬ ರೂಪಕದ ತಿರುಳಿನಲ್ಲಿ ಈ ಪದಕಂತೆಯು ಬಳಕೆಯಾಗಿದೆ.)



೭೮. ಸಿರಿಯಣ್ಣನುಳ್ಳನಕ ಹಿರಿಯಣ್ಣನಾಗಿಕ್ಕು
ಸಿರಿಯಣ್ಣ ಹೋದ ಬೆಳಗಾಗಿ ಆಯಣ್ಣ
ನರಿಯಣ್ಣನಕ್ಕು ಸರ್ವಜ್ಞ.

ಸಂಪತ್ತು ಇದ್ದಾಗ ಮತ್ತು ಇಲ್ಲವಾದಾಗ ವ್ಯಕ್ತಿಯ ಸಾಮಾಜಿಕ ಅಂತಸ್ತಿನಲ್ಲಿ ಉಂಟಾಗುವ ಏರಿಳಿತಗಳನ್ನು ಎರಡು ರೂಪಕಗಳ ಮೂಲಕ ಹೇಳಲಾಗಿದೆ.

(ಸಿರಿ+ಅಣ್ಣನು+ಉಳ್ಳ+ಅನಕ; ಸಿರಿ=ಹಣ/ಆಸ್ತಿ/ಗದ್ದುಗೆ; ಸಿರಿಯಣ್ಣ=ಎಲ್ಲಾ ಬಗೆಯ ಸಂಪತ್ತು; ಉಳ್ಳ=ಇರುವ; ಅನಕ=ವರೆಗೆ; ಹಿರಿ+ಅಣ್ಣನು+ಆಗಿ+ಇಕ್ಕು; ಹಿರಿ=ದೊಡ್ಡ; ಹಿರಿಯಣ್ಣ=ಸಮಾಜದಲ್ಲಿ ದೊಡ್ಡ ಅಂತಸ್ತನ್ನು ಉಳ್ಳವನು/ಎಲ್ಲರಿಂದಲೂ ಒಲವು-ಮೆಚ್ಚುಗೆ-ಮನ್ನಣೆಯನ್ನು ಪಡೆದವನು;

ಇಕ್ಕು=ಇರುವುದು/ಕಂಡುಬರುವುದು; ಆಗಿಕ್ಕು=ಆಗಿರುವನು; ಸಿರಿಯಣ್ಣ ಹೋದ=ಇರುವ ಸಂಪತ್ತೆಲ್ಲವೂ ಕಳೆದುಹೋದ ನಂತರ; ಬೆಳಗು+ಆಗಿ=ಬೆಳಕು ಹರಿದು ಮರುದಿನ ಬರುತ್ತಿದ್ದಂತೆಯೇ; ಆಯಣ್ಣ=ಆ+ಅಣ್ಣ=ಆ ವ್ಯಕ್ತಿಯು;

ನರಿ+ಅಣ್ಣನು+ಅಕ್ಕು; ನರಿ=ಕಪಟತನ ಮತ್ತು ಕುತಂತ್ರದ ನಡೆನುಡಿಗಳನ್ನು ಸೂಚಿಸಲು ನರಿಯನ್ನು ಒಂದು ರೂಪಕವಾಗಿ ಜನರು ಆಡುನುಡಿಯಲ್ಲಿ ಬಳಸುತ್ತಾರೆ;

ನರಿಯಣ್ಣ=ಗತಿಗೇಡಿ/ಇತರರನ್ನು ನೆಚ್ಚಿಕೊಂಡು ಹೊಟ್ಟೆಹೊರೆದು ಕೊಳ್ಳುವವನು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಟ್ಟು; ಅಕ್ಕು=ಆಗುತ್ತಾನೆ/ಆಗುವುದು)



೭೯. ಸುರಗಿಯಲಿರಿದೇರು ಸರನೆ ಮಾದಿಹುದು ಅ
ಸ್ಥಿರದ ನಾಲಗೆಯಲಿರಿದೇರು ಅಂದಂದಿ
ಗಿರಿದಿರಿದು ಸುಡದೆ ಸರ್ವಜ್ಞ.

ಹರಿತವಾದ ಹತಾರದ ಇರಿತದಿಂದ ನಮಗೆ ಉಂಟಾದ ಗಾಯಕ್ಕಿಂತಲೂ ಇತರರು ನಮ್ಮ ಬಗ್ಗೆ ಆಡಿದ ಕೆಟ್ಟಮಾತು ಹೆಚ್ಚಿನ ನೋವನ್ನುಂಟುಮಾಡುತ್ತದೆ ಎಂಬುದನ್ನು ಹೇಳಲಾಗಿದೆ.

(ಸುರಗಿಯಲಿ+ಇರಿದ+ಏರು; ಸುರಗಿ=ಸಣ್ಣಕತ್ತಿ/ಚೂರಿ/ಹತಾರ; ಇರಿ=ತಿವಿ/ಚುಚ್ಚು; ಏರು=ಗಾಯ/ಹುಣ್ಣು; ಸುರಗಿಯಲಿರಿದೇರು=ಕತ್ತಿ/ಚೂರಿ/ಇನ್ನಿತರ ಹತಾರಗಳ ತಿವಿತದಿಂದ ಉಂಟಾದ ಗಾಯ; ಸರನೆ=ತುಸು ಸಮಯದಲ್ಲಿ/ಕೆಲವಾರು ದಿನಗಳಲ್ಲಿ; ಮಾದು+ಇಹುದು; ಮಾಯ್+ದು; ಮಾಯ್=ಗುಣವಾಗು/ವಾಸಿಯಾಗು; ಇಹುದು=ಇರುವುದು;

ಅಸ್ಥಿರ=ಅತ್ತಿತ್ತ ಹೊರಳುವ/ಅಲುಗಾಡುವ/ ಚಲಿಸುವ; ಅಸ್ಥಿರದ ನಾಲಗೆ=ಎಲುಬಿಲ್ಲದ ನಾಲಗೆ/ಸಮಯ ಸನ್ನಿವೇಶಕ್ಕೆ ತಕ್ಕಂತೆ ಆಡಿದ ಮಾತುಗಳಲ್ಲಿ ಬದಲಾವಣೆಯನ್ನು ಮಾಡಿಕೊಳ್ಳುವುದು/ ಕೊಟ್ಟ ಮಾತಿಗೆ ತಪ್ಪಿ ನಡೆಯುವುದು;

ನಾಲಗೆಯಲಿ+ಇರಿದ+ಏರು; ನಾಲಗೆಯಲಿರಿದೇರು=ಕೆಟ್ಟ ಮಾತುಗಳನ್ನಾಡಿ ಮಾಡಿದ ಅವಹೇಳನ/ಮನಸ್ಸನ್ನು ಗಾಸಿಗೊಳಿಸಿ ನೀಡಿದ ನೋವು; ಅಂದು+ಅಂದಿಗೆ+ಇರಿದು+ಇರಿದು; ಅಂದು=ಆ ದಿನ; ಅಂದಂದಿಗೆ=ಪ್ರತಿ ದಿನವೂ;

ಇರಿದಿರಿದು=ಕಡೆಗಣಿಸಿ ನುಡಿದ ಪ್ರಸಂಗವು ನೆನಪಿಗೆ ಬಂದಾಗಲೆಲ್ಲಾ ಇತರರು ಅಂದು ಆಡಿದ್ದ ಮಾತುಗಳು ಮನವನ್ನು ಚುಚ್ಚಿ ಚುಚ್ಚಿ ಕಾಡುತ್ತ; ಸುಡು=ಬೆಂಕಿಯಲ್ಲಿ ಬೇಯಿಸು/ಬೇಗೆಯನ್ನುಂಟು ಮಾಡು/ನೋವನ್ನುಂಟುಮಾಡು; ಸುಡದೆ=ನೋಯಿಸದೇ ಇರುತ್ತದೆಯೇ).



೮೦. ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಸುರಿದಿಹರೆ
ಕೊಡಬೇಡ ಕೊಡದೆ ಇರಬೇಡ ದಾನವನು
ಬಿಡಬೇಡವೆಂದ ಸರ್ವಜ್ಞ.

ಯಾವುದೇ ಒಬ್ಬ ವ್ಯಕ್ತಿಯು ತನ್ನ ಆದಾಯದ ಮಿತಿಯರಿತು ದಾನವನ್ನು ಮಾಡಬೇಕೆ ಹೊರತು, ತನ್ನಲ್ಲಿರುವುದನ್ನೆಲ್ಲಾ ಇತರರಿಗೆ ನೀಡಿ ಬರಿಗಯ್ ಆಗಬಾರದೆಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಸೊಡರ+ಎಣ್ಣೆ; ಸೊಡರು=ದೀಪ/ದೀವಿಗೆ; ಎಣ್ಣೆ=ಎಳ್ಳು/ಕಡಲೇಕಾಯಿ/ಹಿಪ್ಪೇಕಾಯಿ ಮುಂತಾದ ಕಾಳುಗಳಿಂದ ತೆಗೆದಿರುವ ಜಿಡ್ಡು; ತೀರು=ಮುಗಿ/ಇಲ್ಲವಾಗು; ತೀರಿದರೆ=ಮುಗಿದು ಹೋದರೆ;

ಕೊಡ=ಗಡಿಗೆ/ಬಿಂದಿಗೆ; ಕೊಡನ+ಎತ್ತಿ; ಕೊಡನ=ಎಣ್ಣೆಯಿಂದ ತುಂಬಿರುವ ಗಡಿಗೆಯನ್ನು/ಬಿಂದಿಗೆಯನ್ನು; ಸುರಿದು+ಇಹರೆ; ಸುರಿ=ಎರೆ/ಹಾಕು; ಇಹರೆ=ಇರುವರೆ/ಇರುತ್ತಾರೆಯೇ; ಸುರಿದಿಹರೆ=ಗಡಿಗೆ/ಬಿಂದಿಗೆಯಲ್ಲಿರುವುದೆಲ್ಲವನ್ನೂ ಬಗ್ಗಿಸುತ್ತಾರೆಯೇ;

ದಾನ=ಹಸಿವು/ಬಡತನ/ಸಂಕಟದಲ್ಲಿ ನೋಯುತ್ತಿರುವವರಿಗೆ ಅಗತ್ಯವಾದ ವಸ್ತುಗಳನ್ನು/ ಹಣಕಾಸನ್ನು/ಇತರ ರೀತಿಯ ನೆರವನ್ನು ನೀಡುವುದು; ಬಿಡಬೇಡ+ಎಂದ).



೮೧. ಹಂಗಿನರಮನೆಗಿಂತ ಎಂಗಡದ ಗುಡಿ ಲೇಸು
ಭಂಗಬಟ್ಟುಂಬ ಬಿಸಿಯನ್ನಕಿಂತಲು
ತಂಗುಳವೆ ಲೇಸು ಸರ್ವಜ್ಞ.

ಇತರರ ಮುಂದೆ ಕಯ್ಯೊಡ್ಡಿ ಬೇಡಿ ಬೇಕಾದುದನ್ನು ಪಡೆದು ನಲಿಯುವುದಕ್ಕಿಂತ, ತನ್ನತನವನ್ನು ಉಳಿಸಿಕೊಂಡು ಇದ್ದುದರಲ್ಲಿ ನೆಮ್ಮದಿಯಿಂದ ಬಾಳುವುದೇ ಒಳ್ಳೆಯದೆಂಬುದನ್ನು ಹೇಳಲಾಗಿದೆ.

(ಹಂಗಿನ+ಅರಮನೆಗಿಂತ; ಹಂಗು=ಅನ್ನ-ಬಟ್ಟೆ-ವಸತಿ-ಕೆಲಸ ಮತ್ತು ಇನ್ನಿತರ ಅಗತ್ಯಗಳಿಗಾಗಿ ಮತ್ತೊಬ್ಬರನ್ನು ಆಶ್ರಯಿಸಿ ತನ್ನತನವನ್ನು ಕಳೆದುಕೊಂಡು ಬಾಳುವುದು;

ಅರಮನೆ=ಅರಸನ ಮನೆ/ ಬಯಸಿದ್ದೆಲ್ಲವೂ ದೊರಕುವಂತಹ ಸಿರಿ ಸಂಪದಗಳ ನೆಲೆ; ಹಂಗಿನ ಅರಮನೆ=ಇದು ಒಂದು ನುಡಿಗಟ್ಟು-ತಿನ್ನಲು/ಉಣ್ಣಲು/ತೊಡಲು ಯಾವೊಂದು ಕೊರತೆಗಳಿಲ್ಲದಿದ್ದರೂ ವ್ಯಕ್ತಿಯು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಅನ್ಯರಿಗೆ ಅಡಿಯಾಳಾಗಿ ಬಾಳುವುದು;

ಎಂಗಡ=ಒಂಟಿಯಾಗಿರುವ/ಬೇರೆಯಾಗಿರುವ/ತನ್ನದೇ ಆದ; ಗುಡಿ=ಗುಡಾರ/ಕುಟೀರ/ವಸತಿ/ಗುಡಿಸಲು; ಎಂಗಡದ ಗುಡಿ=ಇದು ಒಂದು ನುಡಿಗಟ್ಟು-ಯಾವೊಂದು ಬಗೆಯ ಸಂಪತ್ತಿಲ್ಲದಿದ್ದರೂ ಇತರರ ಮುಂದೆ ಕಯ್ಯೊಡ್ಡದೆ ತಲೆತಗ್ಗಿಸದೆ ತನ್ನತನವನ್ನು ಉಳಿಸಿಕೊಂಡು ಬಾಳುವುದು;

ಲೇಸು=ಒಳ್ಳೆಯದು/ಉತ್ತಮ; ಭಂಗ+ಪಟ್ಟು+ಉಂಬ; ಭಂಗ=ಅಪಮಾನ/ಸೋಲು; ಭಂಗಪಟ್ಟು=ಇತರರಿಂದ ಕಡೆಗಣಿಸುವಿಕೆಗೆ ಗುರಿಯಾಗಿ; ಉಂಬ=ಉಣ್ಣುವ: ತಂಗುಳವೆ=ತಣ್ಣಗಾಗಿರುವ ಅನ್ನವೇ;

ತಣ್ಣನೆಯ ಕೂಳು=ತಂಗೂಳು/ತಂಗುಳು/ತಂಗಳು; ಕೂಳು=ಅನ್ನ/ಆಹಾರ/ತಿನಸು; ನುಡಿಗಟ್ಟು ಎಂದರೆ ಎರಡು ಇಲ್ಲವೇ ಮೂರುಪದಗಳು ಜತೆಗೂಡಿ ಸಾಂಕೇತಿಕವಾದ ತಿರುಳನಲ್ಲಿ ಬಳಕೆಯಾಗುವ ಪದಕಂತೆ).



೮೨. ಹದಬೆದೆಯಲಾರಂಬ ಕದನದಲಿ ಕೂರಂಬ
ನದಿಯ ಹಾಯುವಲಿ ಹರುಗೋಲ ಮರೆದಾತ
ವಿಧಿಯ ಬೈದೇನು ಸರ್ವಜ್ಞ.

ತಾನು ಮಾಡಬೇಕಾದ ಕೆಲಸವನ್ನು ಸರಿಯಾದ ಸಮಯದಲ್ಲಿ ಒಳ್ಳೆಯ ರೀತಿಯಲ್ಲಿ ಮಾಡದೆ, ಮತ್ತೊಂದನ್ನು ನಿಂದಿಸುವುದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಹೇಳಲಾಗಿದೆ.

(ಹದಬೆದೆಯಲಿ+ಆರಂಬ; ಹದ=ಸರಿಯಾದ ಸಮಯ; ಬೆದೆ=ಕಾಮದ ನಂಟನ್ನು ಪಡೆಯಲು ಜೀವಿಗಳ ಮಯ್-ಮನಗಳಲ್ಲಿ ಉಂಟಾಗುವ ತುಡಿತ/ಹೊಲಗದ್ದೆಗಳಲ್ಲಿ ದವಸ ಕಾಳು ಕಡ್ಡಿಗಳ ಬೀಜವನ್ನು ಬಿತ್ತಲು/ಸಸಿಗಳನ್ನು ನಾಟಿಮಾಡಬೇಕಾದ ಕಾಲ;

ಹದಬೆದೆಯಲಿ=ಮುಂಗಾರು ಮಳೆಯಾಗುತ್ತಿದ್ದಂತೆಯೇ ಉಳುಮೆ ಮಾಡಿದ ಹೊಲಗದ್ದೆಗಳಲ್ಲಿ ಬೆಳೆಗಳನ್ನು ಒಡ್ಡಲು ಅಂದರೆ ಬೀಜವನ್ನು ಬಿತ್ತುವ, ಸಸಿಗಳನ್ನು ನಾಟಿ ಮಾಡುವ, ಬೆಳೆದ ಪಯಿರುಗಳನ್ನು ಹರಗುವ, ಕಳೆಯನ್ನು ತೆಗೆಯುವ, ಕುಯಿಲನ್ನು ಮಾಡುವ, ಒಕ್ಕಣೆಯ ಕೆಲಸಗಳನ್ನು ಮಾಡಬೇಕಾದ ಕಾಲ;

ಕದನದಲಿ=ರಣರಂಗದಲ್ಲಿ; ಕದನ=ಕಲಹ/ಕಾಳಗ/ಸಮರ; ಕೂರ್+ಅಂಬ; ಕೂರ್=ಹರಿತವಾದ/ಮೊನೆಯುಳ್ಳ/ಚೂಪಾದ; ಅಂಬು=ಬಾಣ; ಕೂರಂಬ=ಹರಿತವಾದ ಬಾಣವನ್ನು; ಹಾಯು=ದಾಟು; ಹಾಯುವಲಿ=ದಾಟುವಾಗ;

ಹರುಗೋಲು=ದೋಣಿಯನ್ನು ಮುನ್ನಡೆಸುವಾಗ ನೀರನ್ನು ಮೀಟಲು ಬಳಸುವ ಕೋಲು; ಮರೆದ+ ಆತ=ಮರೆತವನು; ವಿಧಿ=ವ್ಯಕ್ತಿಯ ಜೀವನದ ಏಳುಬೀಳುಗಳನ್ನು ದೇವರು ಇಲ್ಲವೇ ಅಗೋಚರ ಶಕ್ತಿಯು ನಿರ್ಣಯಿಸಿರುತ್ತದೆ ಎಂಬ ನಂಬಿಕೆ; ಬೈದು+ಏನು; ಬೈದು=ನಿಂದಿಸಿ; ಬೈದೇನು=ಬಯ್ಯುವುದರಿಂದ ಯಾವ ಪ್ರಯೋಜನವಿಲ್ಲ.)



೮೩. ಹಿರಿತನವು ಹೇಡಿಂಗೆ ಗುರುತನವು ಮೂಢಂಗೆ
ದೊರೆತನವು ನಾಡ ನೀಚಂಗೆ ದೊರೆದಿಹರೆ
ಧರೆಯೆಲ್ಲ ಕೆಡುಗು ಸರ್ವಜ್ಞ.

ಒಳ್ಳೆಯ ವ್ಯಕ್ತಿತ್ವವಿಲ್ಲದವನಿಗೆ ದೊಡ್ಡ ಗದ್ದುಗೆ/ಪಟ್ಟ/ಪದವಿಯು ದೊರೆಯುವಂತಾದರೆ ನಾಡಿನ ಮತ್ತು ಜನಸಮುದಾಯದ ಬದುಕು ಹಾಳಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಲಾಗಿದೆ.

(ಹಿರಿತನ=ಕುಟುಂಬ/ಸಾಮಾಜಿಕ ಒಕ್ಕೂಟಗಳನ್ನು ಒಳ್ಳೆಯ ರೀತಿಯಲ್ಲಿ ಮುನ್ನಡೆಸುವ ಜವಾಬ್ದಾರಿ; ಹೇಡಿಂಗೆ=ಹೇಡಿಯಾದವನಿಗೆ; ಹೇಡಿ=ಅಂಜುಬುರುಕ/ಪುಕ್ಕಲ/ಎದೆಗಾರಿಕೆಯಿಲ್ಲದವನು;

ಗುರುತನ=ತನ್ನ ಒಳ್ಳೆಯ ನಡೆನುಡಿಗಳಿಂದ ವ್ಯಕ್ತಿ ಹಾಗೂ ಸಮಾಜದ ಮುನ್ನಡೆಗೆ ಬೇಕಾದ ಅರಿವನ್ನು ಜನ ಸಮುದಾಯದಲ್ಲಿ ಮೂಡಿಸುವ ಹೊಣೆಗಾರಿಕೆ; ಮೂಢಂಗೆ=ತಿಳಿಗೇಡಿಗೆ; ಮೂಢ=ಅರಿವಿಲ್ಲದವನು/ತಿಳುವಳಿಕೆಯಿಲ್ಲದವನು;

ದೊರೆತನ=ಜನಸಮುದಾಯದ ಹಿತಕ್ಕಾಗಿ ಸದಾಕಾಲ ಎಚ್ಚರದಿಂದ ಆಡಳಿತವನ್ನು ನಡೆಸುವ ಹುದ್ದೆ; ನಾಡ=ನಾಡಿನ/ದೇಶದ/ರಾಜ್ಯದ; ನೀಚಂಗೆ=ನೀಚನಾದವನಿಗೆ; ನೀಚ=ಸುಳ್ಳು/ಮೋಸ/ಕೆಟ್ಟತನದ ನಡೆನುಡಿಯುಳ್ಳವನು; ದೊರೆತು+ಇಹರೆ; ದೊರೆತು=ಸಿಕ್ಕು/ಪಡೆದು; ಇಹರೆ=ಇದ್ದರೆ;

ದೊರೆದಿಹರೆ=ದೊರಕುವಂತಾದರೆ/ಸಿಗುವಂತಾದರೆ; ಧರೆ+ಎಲ್ಲ; ಧರೆ=ಬುವಿ/ನಾಡು; ಧರೆಯೆಲ್ಲ=ಇಡೀ ನಾಡೆಲ್ಲವೂ; ಕೆಡುಗು=ಹಾಳಾಗುತ್ತದೆ).



೮೪. ಹಿರಿದು ಪಾಪವ ಮಾಡಿ ಹರಿವರು ಗಂಗೆಗೆ
ಹರಿವ ನೀರಲ್ಲಿ ಕರಗುವೊಡೆಯಾ ಪಾಪ
ಎರೆಯ ಮಣ್ಣಲ್ಲ ಸರ್ವಜ್ಞ.

ನೀರಿನಲ್ಲಿ ಮುಳುಗೆದ್ದ ಮಾತ್ರದಿಂದಲೇ ಮಾಡಿದ ಪಾಪ ಹೋಗುವುದಿಲ್ಲವೆಂಬುದನ್ನು ಹೇಳಲಾಗಿದೆ.

(ಹಿರಿ=ದೊಡ್ಡ/ಅತಿ/ಹೆಚ್ಚು; ಹಿರಿದು=ಅತಿಯಾಗಿ/ದೊಡ್ಡದಾಗಿ/ಹೆಚ್ಚಾಗಿ; ಪಾಪ=ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡು/ವಂಚನೆಯನ್ನುಂಟು ಮಾಡುವ ನಡೆನುಡಿ; ಹರಿ=ಅತ್ತಸಾರು/ಹೋಗು/ಓಡು;

ಗಂಗೆ=ನೀರು/ಉತ್ತರ ಇಂಡಿಯಾದಲ್ಲಿ ಹರಿಯುತ್ತಿರುವ ನದಿಯೊಂದರ ಹೆಸರು; ಹರಿವರು ಗಂಗೆಗೆ=ದೇಗುಲಗಳ ಬಳಿಯ ನದಿ/ಕೊಳ/ನೀರಿನ ತಾಣಗಳಲ್ಲಿ ಮೀಯುವವರು-ಇಂತಹ ಎಡೆಗಳಲ್ಲಿ ಮಿಂದೆದ್ದರೆ ಮಾಡಿದ ಪಾಪ ಹೊರಟುಹೋಗುತ್ತದೆಯೆಂಬ ನಂಬಿಕೆಯು ಜನಮನದಲ್ಲಿದೆ; ಕರಗುವೊಡೆ+ಆ;

ಕರಗುವೊಡೆ=ಕರಗಿಹೋಗುವುದಕ್ಕೆ/ಇಲ್ಲವಾಗುವುದಕ್ಕೆ; ಆ ಪಾಪ=ಮಾಡಿರುವ ಕೆಟ್ಟಕೆಲಸಗಳು; ಎರೆಯ ಮಣ್ಣು=ಕಪ್ಪನೆಯ ಬಣ್ಣದ ಮಣ್ಣು/ಜೇಡಿಮಣ್ಣು/ಮುಟ್ಟಿದಾಗ ಇಲ್ಲವೇ ತುಳಿದಾಗ ಕಯ್ ಕಾಲುಗಳಿಗೆ ಅಂಟಿಕೊಳ್ಳುವ ಜಿಗುಟು ಮಣ್ಣು;

ಆ ಪಾಪ ಎರೆಯ ಮಣ್ಣಲ್ಲ=ಕಯ್ ಕಾಲುಗಳಿಗೆ ಮೆತ್ತಿಕೊಂಡಿರುವ ಎರೆಯ ಮಣ್ಣನ್ನು ನೀರಿನಿಂದ ತೊಳೆದುಕೊಳ್ಳಬಹುದು. ಆದರೆ ಮಾಡಿದ ಪಾಪ ಹೋಗಬೇಕಾದರೆ, ಮಾಡಿದ ಕೆಟ್ಟ ಕೆಲಸಕ್ಕಾಗಿ ಮರುಗಿ, ಮತ್ತೊಮ್ಮೆ ಅಂತಹ ಕೆಟ್ಟದ್ದನ್ನು ಮಾಡದೆ, ಒಳ್ಳೆಯ ನಡೆನುಡಿಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬಾಳತೊಡಗಿದ ಹೊರತು ಪಾಪ ತೊಲಗುವುದಿಲ್ಲ. ಮಾಡಿದ ತಪ್ಪನ್ನು ತಿದ್ದಿ ಸರಿಪಡಿಸಿಕೊಂಡು ನಡೆಯದಿದ್ದರೆ ಅಂತಹ ವ್ಯಕ್ತಿಯು ನೀಚನಾಗಿಯೇ/ಕೆಡುಕನಾಗಿಯೇ ಬಾಳುತ್ತಿರುತ್ತಾನೆ ಎಂಬುದನ್ನು ಈ ರೂಪಕದ ತಿರುಳು ಹೊಂದಿದೆ).



೮೫. ಹುಟ್ಟುವಾಗಲೆ ಧನವ ಮೊಟ್ಟೆಗಟ್ಟಿಳಿದನೇ
ಕಟ್ಟೊಯ್ಯಲರಿಯ ಕಡೆಯಲ್ಲಿ ಅದನರಿದು
ಕೊಟ್ಟುಂಬ ದಾನಿ ಸರ್ವಜ್ಞ.

ಉಳ್ಳವರು ದಾನ ಮಾಡುವ ಗುಣವನ್ನು ಬೆಳೆಸಿಕೊಳ್ಳಬೇಕೆಂಬುದನ್ನು ಹೇಳಲಾಗಿದೆ.

(ಹುಟ್ಟುವ+ಆಗಲೆ; ಹುಟ್ಟುವಾಗಲೆ=ತಾಯಿಯ ಹೊಟ್ಟೆಯಿಂದ ಹೊರಬಂದ ಗಳಿಗೆಯಲ್ಲೇ; ಧನ=ಹಣ/ಚಿನ್ನಬೆಳ್ಳಿ ಒಡವೆ/ಆಸ್ತಿಪಾಸ್ತಿ; ಮೊಟ್ಟೆ+ಕಟ್ಟಿ+ಇಳಿದನೇ; ಮೊಟ್ಟೆ=ಗಂಟು/ಹೊರೆ/ಮೂಟೆ; ಇಳಿದನೇ=ಈ ಜಗತ್ತಿಗೆ ಬಂದನೇ; ಮೊಟ್ಟೆಗಟ್ಟಿಳಿದನೇ= ಗಂಟುಕಟ್ಟಿಕೊಂಡು ಜತೆಯಲ್ಲಿ ತಂದನೆ;

ಕಟ್ಟಿ+ಒಯ್ಯಲು+ಅರಿಯ; ಒಯ್ಯಲು=ತೆಗೆದುಕೊಂಡು ಹೋಗಲು; ಅರಿಯ=ತಿಳಿಯನು; ಕಟ್ಟೊಯ್ಯಲರಿಯ=ಗಂಟನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗಲಾಗದು; ಕಡೆಯಲ್ಲಿ=ಸಾವನ್ನಪ್ಪಿದಾಗ; ಅದನು+ಅರಿದು; ಅದನು=ಅದನ್ನು; ಅರಿದು=ತಿಳಿದು;

ಅದನರಿದು=ಹುಟ್ಟುವಾಗ ಸಂಪತ್ತನ್ನು ಹೊತ್ತು ತರಲಿಲ್ಲ/ಸಾಯುವಾಗ ಜತೆಯಲ್ಲಿ ಹೊತ್ತು ಕೊಂಡೊಯ್ಯುವುದಿಲ್ಲವೆಂಬ ವಾಸ್ತವವನ್ನು ಅರಿತುಕೊಂಡು; ಕೊಟ್ಟು+ಉಂಬ;

ಕೊಟ್ಟು=ತನ್ನ ಆದಾಯದ ಮಿತಿಗೆ ಒಳಪಟ್ಟಂತೆ ಇತರರಿಗೂ ನೆರವನ್ನು ನೀಡಿ; ಉಂಬ=ಉಣ್ಣುವನು/ತನ್ನ ಬಳಿಇರುವ ಸಂಪತ್ತಿನಿಂದ ನಲಿವು ನೆಮ್ಮದಿಯ ಬಾಳ್ವೆಯನ್ನು ನಡೆಸುವನು; ದಾನಿ=ಇತರರ ಹಸಿವು/ಬಡತನ/ಸಂಕಟವನ್ನು ನಿವಾರಿಸಲು ತನ್ನ ಸಂಪತ್ತನ್ನು ನೀಡುವವನು.)



೮೭. ಹುಸಿವನ ದೇಹಾರ ಕಸ ಹತ್ತಿದಾರಂಬ
ವಿಷಯ ಉಳ್ಳವನ ಗುರುತನ ಇವು ಮೂರು
ಮಸಿವಣ್ಣ ಕಂಡ ಸರ್ವಜ್ಞ.

ದೇವರ ಪೂಜೆ, ಬೇಸಾಯ ಮತ್ತು ಅರಿವನ್ನು ಮೂಡಿಸುವ ಕಸುಬುಗಳನ್ನು ಮಾಡುವವರು ಯಾವ ಬಗೆಯ ವ್ಯಕ್ತಿತ್ವವನ್ನು ಹೊಂದಿರಬಾರದು ಎಂಬುದನ್ನು ಹೇಳಲಾಗಿದೆ.

(ಹುಸಿ=ಸುಳ್ಳು/ದಿಟವಲ್ಲದ್ದು/ನಿಜವಲ್ಲದ್ದು; ಹುಸಿವನ=ಸುಳ್ಳನ್ನು ಹೇಳುವವನ; ದೇಹಾರ=ಪೂಜೆ; ಕಸ ಹತ್ತಿದ+ಆರಂಬ=ಕಳೆಯೇ ಹೆಚ್ಚಾಗಿರುವ ಬೆಳೆ; ಆರಂಬ=ಬೇಸಾಯ/ಬೆಳೆಯನ್ನು ಒಡ್ಡುವಿಕೆ;

ವಿಷಯ=ಕೆಟ್ಟ ನಡೆನುಡಿಗಳು/ಕಾಮನೆಗಳು; ಉಳ್ಳವನ=ಇರುವವನ; ಗುರುತನ=ಮಕ್ಕಳಲ್ಲಿ ಹಾಗೂ ಇತರರಲ್ಲಿ ಅರಿವನ್ನು ಮೂಡಿಸುವ ಹೊಣೆಗಾರಿಕೆಯ ಕಸುಬು; ಮಸಿ+ಬಣ್ಣ;

ಮಸಿ=ಕಪ್ಪು; ಮಸಿವಣ್ಣ ಅಂದರೆ ಪ್ರಯೋಜನವಿಲ್ಲದ್ದು/ಹಾನಿಯನ್ನು ಉಂಟುಮಾಡುವಂತಹುದು; ಕಂಡ=ಎಂಬುದನ್ನು ತಿಳಿ;

ಮಸಿವಣ್ಣ ಕಂಡ=ಸುಳ್ಳು ಹೇಳುವವನು ಮಾಡುವ ಪೂಜೆಯಿಂದ, ಕಳೆಯೇ ಹೆಚ್ಚಾಗಿರುವ ಬೆಳೆಯಿಂದ, ಕೆಟ್ಟ ನಡೆನುಡಿಗಳಿಂದ ಕೂಡಿದ ವ್ಯಕ್ತಿಯ ಗುರುತನದಿಂದ ಸಮಾಜಕ್ಕೆ ಹಾನಿಯುಂಟಾಗುತ್ತದೆ ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ.)



೮೭. ಹುಸಿವಾತ ದೇಗುಲದ ದೆಸೆಯತ್ತ ಮುಂತಾಗಿ
ನೊಸಲೆತ್ತಿ ಕರವ ಮುಗಿದರೆ ಇಷ್ಟುದ್ದ
ಹುಸಿವೆನೆಂದೆಂಬ ಸರ್ವಜ್ಞ.

ನಿತ್ಯಜೀವನದಲ್ಲಿ ಸುಳ್ಳಿನ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುತ್ತಿರುವ ವ್ಯಕ್ತಿಯು ದೇವರ ಮುಂದೆ ಮಾಡುವ ತೋರಿಕೆಯ ಆಚರಣೆಯನ್ನು ಅಣಕಮಾಡಲಾಗಿದೆ.

(ಹುಸಿವ+ಆತ; ಹುಸಿ=ಸುಳ್ಳು/ದಿಟವಲ್ಲದ್ದು/ನಿಜವಲ್ಲದ್ದು; ಆತ=ಅವನು; ಹುಸಿವಾತ=ಸುಳ್ಳು ಮತ್ತು ಮೋಸದ ನಡೆನುಡಿಗಳಿಂದ ಜನರನ್ನು ವಂಚಿಸುತ್ತಿರುವವನು; ದೇಗುಲ=ದೇವ+ಕುಲ; ಕುಲ=ಮನೆ/ಇರುವ ಜಾಗ/ಆಲಯ; ದೇಗುಲ=ದೇವಾಲಯ/ದೇವರ ವಿಗ್ರಹ ಇರುವ ಮಂದಿರ;

ದೆಸೆ+ಅತ್ತ; ದೆಸೆ=ದಿಕ್ಕು; ಅತ್ತ=ಆ ಕಡೆ; ಮುಂದಕ್ಕೆ+ತಾಗಿ; ತಾಗು=ಮುಟ್ಟು; ಮುಂತಾಗಿ=ಮುಂದೆ ನಿಂತು; ನೊಸಲ+ಎತ್ತಿ; ನೊಸಲು=ಹಣೆ;

ನೊಸಲೆತ್ತಿ=ಹಣೆಯನ್ನು ಮೇಲೆತ್ತಿ; ಕರ=ಕಯ್; ನೊಸಲೆತ್ತಿ ಕರವ ಮುಗಿದರೆ=ಹಣೆಯ ಮೇಲೆ ಎರಡು ಕಯ್ಗಳನ್ನು ಜೋಡಿಸಿಟ್ಟುಕೊಂಡು ದೇವರಿಗೆ ನಮಿಸಿದರೆ; ಇಷ್ಟು+ಉದ್ದ; ಇಷ್ಟುದ್ದ=ಅವನು ಯಾವ ಎತ್ತರಕ್ಕೆ ತನ್ನ ಕಯ್ಗಳನ್ನು ಎತ್ತಿರುವನೋ ಆ ಮಟ್ಟದಲ್ಲಿ;

ಹುಸಿವೆನ್+ಎಂದು+ಎಂಬ; ಹುಸಿವೆನ್=ಸುಳ್ಳನ್ನು ಆಡುವೆನು; ಎಂದು+ಎಂಬ; ಎಂಬ=ಎನ್ನುವನು/ಹೇಳುವನು; ಎಂದೆಂಬ=ಎಂಬುದನ್ನು ತನ್ನ ಕಪಟತನದ ಆಚರಣೆಯಿಂದ ಜಗತ್ತಿಗೆ ತಿಳಿಸುವನು/ತೋರಿಸುವನು).



೮೮. ಹೊಲಬನರಿಯದ ಗುರುವು ತಿಳಿಯಲರಿಯದ ಶಿಷ್ಯ
ನೆಲೆಯನಾರಯ್ಯದುಪದೇಶವಂಧಕನು
ಕಳನ ಹೊಕ್ಕಂತೆ ಸರ್ವಜ್ಞ.

ಒಳ್ಳೆಯ ವ್ಯಕ್ತಿತ್ವವನ್ನು ಹೊಂದಿರದ ಗುರು ಮತ್ತು ಗುಡ್ಡನಿಗೆ ಉಂಟಾಗುವ ಪಾಡನ್ನು "ಕುರುಡನೊಬ್ಬ ರಣರಂಗವನ್ನು ಹೊಕ್ಕಾಗ ತೊಳಲಾಡುವ" ಪ್ರಸಂಗದ ಮೂಲಕ ಹೇಳಲಾಗಿದೆ.

(ಹೊಲಬನು+ಅರಿಯದ; ಹೊಲಬು=ದಾರಿ/ಹಾದಿ/ಮಾರ್ಗ; ಅರಿ=ತಿಳಿ; ಅರಿಯದ=ಗೊತ್ತಿಲ್ಲದ; ಹೊಲಬನರಿಯದ=ಜೀವನದಲ್ಲಿ ಯಾವುದು ಒಳಿತು / ಯಾವುದು ಕೆಡಕು ಮತ್ತು ಯಾವುದು ಸರಿ/ಯಾವುದು ತಪ್ಪು ಎಂಬುದು ಗೊತ್ತಿಲ್ಲದ; ತಿಳಿಯಲು+ಅರಿಯದ;

ಗುರು=ಮಕ್ಕಳಲ್ಲಿ/ಇತರರಲ್ಲಿ ಅರಿವನ್ನು ಮೂಡಿಸಿ ಒಳ್ಳೆಯ ನಡೆನುಡಿಗಳನ್ನು ರೂಪಿಸುವ ಹೊಣೆಗಾರಿಕೆಯುಳ್ಳ ವ್ಯಕ್ತಿ; ಶಿಷ್ಯ=ಗುರುವಿನಿಂದ ಒಳ್ಳೆಯ ವಿದ್ಯೆಯನ್ನು ಪಡೆದು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಹೊಣೆ ಹೊತ್ತವನು; ಶಿಷ್ಯ=ಗುಡ್ಡ;

ನೆಲೆಯನು+ಆರಯ್ಯದ+ಉಪದೇಶವು+ಅಂಧಕನು; ನೆಲೆಯನು=ಒಳ್ಳೆಯ ಸಂಗತಿಗಳನ್ನು/ವಿಚಾರಗಳನ್ನು; ಆರಯ್=ಹುಡುಕು/ಯೋಚಿಸು/ಒರೆಹಚ್ಚಿನೋಡು; ಆರಯ್ಯದ=ಹುಡುಕಿ ತಿಳಿಯಲು ಪ್ರಯತ್ನಿಸದಿರುವ;

ಉಪದೇಶ=ವಿದ್ಯೆಯನ್ನು ಕಲಿಸುವುದು/ತಿಳುವಳಿಕೆಯನ್ನು ಹೇಳುವುದು; ಅಂಧಕ=ಕುರುಡ; ಕಳನ=ರಣರಂಗವನ್ನು; ಕಳ=ರಣರಂಗ/ಕದನ ನಡೆಯುವ ಜಾಗ; ಹೊಕ್ಕ+ಅಂತೆ; ಹೊಕ್ಕ=ಒಳನುಗ್ಗಿದ; ಅಂತೆ=ಹಾಗೆ).



೮೯. ಹೊಲಬನರಿಯದ ಮಾತು ತಲೆ ಬೇನೆ ಹಿಡಿದಂತೆ
ಹೊಲಬರಿದೊಂದ ನುಡಿದರೆ ಅದು ದಿವ್ಯ
ಫಲ ಪಕ್ವದಂತೆ ಸರ್ವಜ್ಞ.

ಸರಿ ತಪ್ಪುಗಳ ಅರಿವಿಲ್ಲದೆ ಆಡುವ ಮಾತುಗಳಿಂದ ಉಂಟಾಗುವ ಕೆಟ್ಟ ಪರಿಣಾಮಗಳನ್ನು ಹಾಗೂ ಒಳ್ಳೆಯ ಅರಿವಿನಿಂದ ಆಡುವ ಮಾತುಗಳಿಂದ ಉಂಟಾಗುವ ಒಳ್ಳೆಯ ಪರಿಣಾಮಗಳನ್ನು ಹೇಳಲಾಗಿದೆ.

(ಹೊಲಬನು+ಅರಿಯದ; ಹೊಲಬು=ದಾರಿ/ಮಾರ್ಗ/ಹಾದಿ; ಅರಿ=ತಿಳಿ; ಅರಿಯದ=ತಿಳಿಯದ; ಹೊಲಬನರಿಯದ ಮಾತು=ತಿಳುವಳಿಕೆಯಿಲ್ಲದ ನುಡಿ/ ನಿಜದ ಅರಿವಿಲ್ಲದ ನುಡಿ/ಒಳಿತು ಕೆಡುಕನ್ನು ವಿಂಗಡಿಸಿ ನೋಡದೆ ಆಡುವ ನುಡಿ;

ಬೇನೆ=ನೋವು/ಯಾತನೆ; ತಲೆಬೇನೆ=ತಲೆನೋವು; ಹಿಡಿದ+ಅಂತೆ; ಹೊಲಬು+ಅರಿದು+ಒಂದ; ಒಂದ ನುಡಿದರೆ=ಒಂದು ಮಾತನ್ನಾಡಿದರೆ;

ಹೊಲಬರಿದೊಂದ ನುಡಿದರೆ=ಇತರರ ಮನಸ್ಸಿಗೆ ನೋವಾಗದಂತೆ/ಸತ್ಯವನ್ನು ಮರೆಮಾಚದಂತೆ ಒಳಿತನ್ನುಂಟು ಮಾಡುವ ಮಾತುಗಳನ್ನಾಡಿದರೆ; ದಿವ್ಯ=ಒಳ್ಳೆಯದು/ ಉತ್ತಮವಾದುದು;

ಫಲ=ಹಣ್ಣು; ಪಕ್ವದ+ಅಂತೆ; ಪಕ್ವ=ಮಾಗುವುದು/ರಸದಿಂದ ಕೂಡಿ ರುಚಿಕರವಾದುದು; ಅಂತೆ=ಹಾಗೆ;

ದಿವ್ಯಫಲಪಕ್ವದಂತೆ=ಇದೊಂದು ಹೋಲಿಕೆ. ರಸದಿಂದ ತುಂಬಿ ರುಚಿಕರವಾದ ಮಾಗಿದ ಹಣ್ಣನ್ನು ತಿಂದಾಗ ಯಾವ ಬಗೆಯ ನಲಿವು ನೆಮ್ಮದಿ ದೊರೆಯುವುದೋ ಅಂತೆಯೇ ತಿಳುವಳಿಕೆಯ ಮಾತುಗಳನ್ನು ಆಡಿದಾಗ/ಕೇಳಿದಾಗ ಉಂಟಾಗುತ್ತದೆ).



೯೦. ಸರ್ವಜ್ಞನೆಂಬವನು ಗರ್ವದಿಂದಾದವನೆ
ಸರ್ವರೊಳೊಂದೊಂದ ನುಡಿ ಕಲಿತು ವಿದ್ಯದ
ಪರ್ವತವಾದ ಸರ್ವಜ್ಞ.

ಸರ್ವಜ್ಞನು ತನ್ನ ಸಾಮಾಜಿಕ ನಡೆನುಡಿ ಹಾಗೂ ಕವಿಯ ವ್ಯಕ್ತಿತ್ವ ರೂಪುಗೊಂಡ ಬಗೆಯನ್ನು ಹೇಳಿಕೊಂಡಿದ್ದಾನೆ.

(ಸರ್ವಜ್ಞ+ಎಂಬವನು; ಸರ್ವ=ಎಲ್ಲ/ಸಮಸ್ತ; ಜ್ಞ=ತಿಳಿದವನು/ಅರಿತವನು; ಸರ್ವಜ್ಞ=ಎಲ್ಲವನ್ನೂ ತಿಳಿದವನು/ಕವಿಯ ಅಂಕಿತ ನಾಮ/ಕಾವ್ಯರಚನೆಗಾಗಿ ಇಟ್ಟುಕೊಂಡ ಹೆಸರು; ಎಂಬವನು=ಎಂಬ ವ್ಯಕ್ತಿಯು;

ಗರ್ವದಿಂದ+ಆದವನೆ; ಗರ್ವ=ಅಹಂಕಾರ/ಒಣಹೆಮ್ಮೆ/ಸೊಕ್ಕು; ಆದವನೆ=ರೂಪುಗೊಂಡಿದ್ದಾನೆಯೇ/ಆಗಿದ್ದಾನೆಯೇ; ಸರ್ವಜ್ಞನೆಂಬವನು ಗರ್ವದಿಂದಾವನೆ=ಸರ್ವಜ್ಞನ ವ್ಯಕ್ತಿತ್ವವು ಗರ್ವದಿಂದ ರೂಪುಗೊಂಡಿಲ್ಲ. ಒಳಿತನ್ನು ಕೇಳುವ/ಕಾಣುವ/ತನ್ನದಾಗಿಸಿಕೊಳ್ಳುವ ವಿನಯದ ನಡೆನುಡಿಗಳಿಂದ ರೂಪುಗೊಂಡಿದೆ; ಸರ್ವರೊಳು+ಒಂದು+ಒಂದ;

ಸರ್ವರೊಳು=ಎಲ್ಲರಿಂದಲೂ; ಒಂದೊಂದ=ಒಂದೊಂದು ಬಗೆಯ/ರೀತಿಯ; ನುಡಿ=ಮಾತು; ಕಲಿ=ಅರಿತು/ತಿಳಿದು; ನುಡಿ ಕಲಿತು=ಅರಿವನ್ನು/ತಿಳುವಳಿಕೆಯನ್ನು ತನ್ನದಾಗಿಸಿಕೊಂಡು;

ವಿದ್ಯದ=ವಿದ್ಯೆಯ; ವಿದ್ಯೆ=ಅರಿವು/ತಿಳುವಳಿಕೆ/ಜ್ಞಾನ; ಪರ್ವತ+ಆದ; ಪರ್ವತ=ದೊಡ್ಡಬೆಟ್ಟ/ಗಿರಿ; ವಿದ್ಯದ ಪರ್ವತವಾದ=ಒಳ್ಳೆಯ ಅರಿವು/ತಿಳುವಳಿಕೆಯನ್ನು ದೊಡ್ಡದಾಗಿ ಪಡೆದುಕೊಂಡು ಬೆಳೆದಿದ್ದಾನೆ).



## ವಚನಕಾರರ ವಿಚಾರ ಕ್ರಾಂತಿ

ಯಾವ ಯಾವ ಜಡ್ಡುಗಟ್ಟಿದ ಕಾಲಗಳಲ್ಲಿ ಸೂಕ್ಷ್ಮ ಸಂವೇದನೆ ಉಳ್ಳವರೂ, ವಿಚಾರವಂತರೂ ಆದ ಕೆಲವೇ ಜನ ತಮ್ಮ ಸುತ್ತಣ ಪರಿಸ್ಥಿತಿಯನ್ನೂ ಮತ್ತು ಅದನ್ನು ನಿಯಂತ್ರಿಸಿಕೊಂಡು ಬಂದ ರೂಢಿಗತವಾದ ವ್ಯವಸ್ಥೆ ಹಾಗೂ ಸಂಪ್ರದಾಯಗಳನ್ನೂ ಪ್ರಶ್ನಿಸಲು ತೊಡಗುತ್ತಾರೋ, ಪ್ರತಿಭಟಿಸಲು ತೊಡಗುತ್ತಾರೋ ಅಂತಹ ಕಾಲಗಳನ್ನು ಸಂಕ್ರಮಣ ಕಾಲಗಳೆಂದು ಕರೆಯಬಹುದು. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಇಂತಹ ಒಂದು ಸಂಕ್ರಮಣ ಕಾಲ.

ಹನ್ನೆರಡನೆಯ ಶತಮಾನದ ವಚನಕಾರರು ಅಥವಾ ಶಿವಶರಣಶರಣೆಯರು ಮೂಲತಃ ನಿಷ್ಠುರ ವಿಮರ್ಶಕರು, ಪರಂಪರೆಯನ್ನು ಕುರಿತು, ಧರ್ಮವನ್ನು ಕುರಿತು, ದೇವರನ್ನು ಕುರಿತು, ತಮ್ಮ ಸುತ್ತಣ ಸಾಮಾಜಿಕ ಪರಿಸರವನ್ನು ಕುರಿತು, ಎಲ್ಲಕ್ಕೂ ಮಿಗಿಲಾಗಿ ತಮ್ಮನ್ನೇ ಕುರಿತು ವಸ್ತುನಿಷ್ಠವಾಗಿ ವಿಮರ್ಶೆ ಮಾಡಿದವರು.

**ಜಿ.ಎಸ್.ಶಿವರುದ್ರಪ್ಪ**
'ವಚನಕಾರರ ವಿಚಾರ ಕ್ರಾಂತಿ'
ಅನುರಣನ (೧೯೭೮)

## ವಚನಗಳ ಓದಿಗೆ ನೆರವಾದ ಪುಸ್ತಕಗಳು

೧. ಎಲ್. ಬಸವರಾಜು (ಸಂ) : ಅಲ್ಲಮನ ವಚನ ಚಂದ್ರಿಕೆ.
ಪ್ರಭುದೇವರ ವಚನಗಳು–ಸ್ವರ ವಚನಗಳು.
ಲೋಹಿಯಾ ಪ್ರಕಾಶನ, ಬಳ್ಳಾರಿ.
ಮೂರನೆಯ ಮುದ್ರಣ: ೨೦೦೧.

೨. ಎಂ.ಎಂ. ಕಲಬುರ್ಗಿ (ಪ್ರಧಾನ ಸಂಪಾದಕರು);
ಬಿ.ವ್ಹಿ. ಮಲ್ಲಾಪುರ (ಸಂ) :
ಅಲ್ಲಮಪ್ರಭುದೇವರ ವಚನ ಸಂಪುಟ
ಕರ್ನಾಟಕ ಸರಕಾರ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
ಮೂರನೆಯ ಮುದ್ರಣ
(ಬೈಬಲ್ ಮುದ್ರಣ ಮಾದರಿ): ೨೦೧೬

# ಅಲ್ಲಮ

ಕಾಲ: ಕ್ರಿ.ಶ. ಹನ್ನೆರಡನೆಯ ಶತಮಾನ

ಊರು:

ಅ) ಹುಟ್ಟಿದ ಊರು: ಕರುವೂರು, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.

ಆ) ಕಸುಬನ್ನು ಕಯ್ಗೊಂಡ ಊರುಗಳು:

ಬನವಾಸಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.
ಬಳ್ಳಿಗಾವಿ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

ಕಸುಬು: ದೇಗುಲದ ಪರಿಸರದಲ್ಲಿ ಆಚರಣೆಗಳು ನಡೆಯುವಾಗ ಮದ್ದಳೆ ಎಂಬ ಚರ್ಮವಾದ್ಯವನ್ನು ಬಾರಿಸುವುದು/ ನುಡಿಸುವುದು.

ದೊರಕಿರುವ ವಚನಗಳು: 1613

ವಚನಗಳ ಅಂಕಿತನಾಮ: ಗುಹೇಶ್ವರ / ಗೊಹೇಶ್ವರ.

## ಪರಿವಿಡಿ

೧. ಅಯ್ಯಾ ಸತ್ಯವ ನುಡಿಯದ
ಸದಾಚಾರದಲ್ಲಿ ನಡೆಯದ
ಸದ್ಭಕ್ತಿಯ ಹಿಡಿಯದ
ನಿಜ ಮುಕ್ತಿಯ ಪಡೆಯದ
ಸತ್ಕ್ರಿಯವ ಸಾರದ
ಸಮ್ಯಜ್ಞಾನವ ಮುಟ್ಟದ
ಸುಡು ಸುಡು
ಈ ವೇಷದ ಭಾಷೆಯ ನೋಡಿ
ಗುಹೇಶ್ವರಲಿಂಗವು ನಗುತ್ತೈದಾನೆ
ಕಾಣಾ ಚೆನ್ನಬಸವಣ್ಣಾ.

ಜನರಲ್ಲಿ ಅರಿವನ್ನು ಮೂಡಿಸಿ ಅವರನ್ನು ಒಳ್ಳೆಯ ದಾರಿಯಲ್ಲಿ ಕರೆದೊಯ್ಯುವ ಗುಣವಂತನಂತೆ, ಗುರುವಿನಂತೆ, ದೇವ ಮಾನವನಂತೆ ಉಡುಗೆಯನ್ನು ಉಟ್ಟು, ತೊಡುಗೆಯನ್ನು ತೊಟ್ಟು ಮತ್ತು ಸತ್ಯ ನೀತಿ ನ್ಯಾಯದ ನುಡಿಗಳನ್ನಾಡುತ್ತ, ತನ್ನ ನಿಜ ಜೀವನದಲ್ಲಿ ಒಂದಾದರೂ ಒಳ್ಳೆಯ ಗುಣವನ್ನು ಹೊಂದಿರದ ವ್ಯಕ್ತಿಯ ಬೂಟಾಟಿಕೆಯ ವ್ಯಕ್ತಿತ್ವವನ್ನು ಈ ವಚನದಲ್ಲಿ ಕಟುವಾಗಿ ಟೀಕಿಸಲಾಗಿದೆ.

(ಅಯ್ಯಾ=ಗಂಡಸರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಸತ್ಯ=ನಿಜ/ವಾಸ್ತವ/ದಿಟ; ನುಡಿ=ಮಾತನಾಡು/ಹೇಳು; ನುಡಿಯದ=ಹೇಳದ;

ಸತ್ಯವ ನುಡಿಯದ=ಜೀವನದಲ್ಲಿನ ವಾಸ್ತವ ಸಂಗತಿಗಳನ್ನು ಹೇಳದೆ ಇಲ್ಲಸಲ್ಲದ ಸಂಗತಿಗಳನ್ನು ಹೇಳಿ ಜನರನ್ನು ಮರುಳು ಮಾಡುವುದು/ಸುಳ್ಳನ್ನು ಹೇಳುವುದು;

ಸದಾಚಾರ+ಅಲ್ಲಿ; ಸದಾಚಾರ=ಒಳ್ಳೆಯ ವರ್ತನೆ; ನಡೆ=ಆಚರಣೆ/ನಡವಳಿಕೆ; ನಡೆಯದ=ನಡೆದುಕೊಳ್ಳದ/ಆಚರಿಸದ;

ಸದಾಚಾರದಲ್ಲಿ ನಡೆಯದ=ಸಹಮಾನವರ ಜತೆಯಲ್ಲಿ ಒಳ್ಳೆಯ ರೀತಿಯಲ್ಲಿ ನಡೆದುಕೊಳ್ಳದಿರುವುದು/ಜನರಿಗೆ ಕೇಡನ್ನುಂಟುಮಾಡುವ ರೀತಿಯಲ್ಲಿ ಕೆಟ್ಟದ್ದಾಗಿ ವರ್ತಿಸುವುದು;

ಸದ್ಭಕ್ತಿ=ಒಳ್ಳೆಯ ನಡೆನುಡಿಗಳಿಂದ ದೇವರನ್ನು ಪೂಜಿಸುವುದು; ಹಿಡಿ=ಕಯ್ಗೊಳ್ಳುವುದು/ಅನುಸರಿಸುವುದು ; ಹಿಡಿಯದ=ಅನುಸರಿಸಿದ ;

ಸದ್ಭಕ್ತಿಯ ಹಿಡಿಯದ=ದೇವರನ್ನು ಒಲಿಸಿಕೊಳ್ಳಲು ಒಳ್ಳೆಯ ನಡೆನುಡಿಗಳನ್ನು ಅನುಸರಿಸಿ ಬಾಳಬೇಕೆಂಬುದನ್ನು ತಿಳಿಯದಿರುವುದು;

ನಿಜ=ಸಹಜವಾದ/ತನ್ನ/ಸ್ವಂತದ; ಮುಕ್ತಿ=ಬಿಡುಗಡೆ/ವಿಮೋಚನೆ; ಪಡೆ=ಹೊಂದು/ಗಳಿಸು/ಸಂಪಾದಿಸು; ಪಡೆಯದ=ಗಳಿಸದ/ಹೊಂದದ;

ನಿಜ ಮುಕ್ತಿಯ ಪಡೆಯದ=ತನ್ನ ಮಯ್ ಮನವನ್ನು ಆವರಿಸಿಕೊಂಡಿರುವ ಒಳ್ಳೆಯ ಮತ್ತು ಕೆಟ್ಟ ಸಂಗತಿಗಳಲ್ಲಿ, ಕೆಟ್ಟದ್ದನ್ನು ಬಿಡದಿರುವುದು;

ಸತ್ಕ್ರಿಯ=ಒಳ್ಳೆಯ ಕೆಲಸ/ಕಾರ್ಯ; ಸಾರು=ಸಮೀಪಿಸು/ಹತ್ತಿರಕ್ಕೆ ಬರುವುದು; ಸಾರದ=ಸಮೀಪಿಸದ/ಹತ್ತಿರಕ್ಕೆ ಬರದೆ ದೂರವಿರುವುದು ;

ಸತ್ಕ್ರಿಯವ ಸಾರದ=ಒಳ್ಳೆಯ ಕೆಲಸಗಳಿಂದ ದೂರವಿರುವುದು/ಒಂದಾದರೂ ಒಳ್ಳೆಯ ಕೆಲಸವನ್ನು ಮಾಡದಿರುವುದು;

ಸಮ್ಯಕ್ ಜ್ಞಾನ>ಸಮ್ಯಜ್ಞಾನ: ಸಮ್ಯಕ್ ಜ್ಞಾನ=ಸರಿಯಾದ ತಿಳುವಳಿಕೆ/ಒಳ್ಳೆಯ ಅರಿವು; ಮುಟ್ಟು=ತಲುಪು/ಸೇರು/ಹೊಂದು;

ಸಮ್ಯಜ್ಞಾನವ ಮುಟ್ಟದ=ಸರಿಯಾದ ತಿಳುವಳಿಕೆಯನ್ನು ಹೊಂದದಿರುವುದು;

ಸುಡು=ಬೆಂಕಿಯಲ್ಲಿ ಬೇಯಿಸು; ಸುಡು ಸುಡು=ಜನಸಮುದಾಯವನ್ನು ಮತ್ತು ಸಮಾಜವನ್ನು ವಂಚಿಸುವ ವ್ಯಕ್ತಿಯ ಕೆಟ್ಟ ನಡೆನುಡಿಗಳನ್ನು ಕಂಡಾಗ ಉಂಟಾಗುವ ಕೋಪ, ಹತಾಶೆ ಮತ್ತು ಆಕ್ರೋಶವನ್ನು ಕಾರುವಾಗ ಈ ಬಗೆಯ ಪದಗಳು ಹೊರಹೊಮ್ಮುತ್ತವೆ. 'ಅವನ ಜನ್ಮಕ್ಕೆ ಬೆಂಕಿಹಾಕ' ಎಂಬ ಬಯ್ಗುಳ ಜನಸಮುದಾಯದಲ್ಲಿ ಬಳಕೆಯಲ್ಲಿದೆ;

ವೇಷ=ಉಡುಗೆ ತೊಡುಗೆ/ಸೋಗು/ತೋರಿಕೆಯ ರೂಪ; ಭಾಷೆ=ಮಾತು/ನುಡಿ; ನೋಡು=ಕಾಣು;

ಈ ವೇಷದ ಭಾಷೆಯ ನೋಡಿ=ಅಂತರಂಗದ ಮಯ್ ಮನದಲ್ಲಿ ಒಳ್ಳೆಯತನವಿಲ್ಲದೆ, ಬಹಿರಂಗದಲ್ಲಿ ಒಳ್ಳೆಯವನಂತೆ ತೊಟ್ಟಿರುವ ಉಡುಗೆ ತೊಡುಗೆಯನ್ನು ನೋಡಿ ಮತ್ತು ಆಡುವ ಮಾತುಗಳನ್ನು ಕೇಳಿ;

ಗುಹೇಶ್ವರ=ಶಿವ/ಅಲ್ಲಮನ ಮೆಚ್ಚಿನ ದೇವರು/ಅಲ್ಲಮನ ವಚನಗಳಲ್ಲಿ ಬಳಕೆಯಾಗಿರುವ ಅಂಕಿತನಾಮ; ಲಿಂಗ=ಶಿವ/ಈಶ್ವರ; ನಗುತ್ತ+ಐದಾನೆ; ಐದಾನೆ=ಇದ್ದಾನೆ;

ಗುಹೇಶ್ವರಲಿಂಗವು ನಗುತ್ತೈದಾನೆ=ಗುಹೇಶ್ವರನು ಇಂತಹ ಬೂಟಾಟಿಕೆಯ, ನಯವಂಚಕತನದ, ಒಳಗೊಂದು ಹೊರಗೊಂದು ಬಗೆಯ ನಡೆನುಡಿಯನ್ನುಳ್ಳ ವ್ಯಕ್ತಿಯನ್ನು ಕಂಡು "ಇವನದು ಒಂದು ಜೀವನವೇ" ಎಂದು ಅಣಕಿಸುವಂತೆ ನಗುತ್ತಿದ್ದಾನೆ. ಅಂದರೆ ಕಪಟತನದ ನಡೆನುಡಿಯನ್ನು ಗುಹೇಶ್ವರನು ಒಪ್ಪುವುದಿಲ್ಲ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ; ಕಾಣಾ=ವಿಚಾರಿಸಿ ನೋಡು/ತಿಳಿ;

ಚನ್ನಬಸವಣ್ಣ=ಹನ್ನೆರಡನೆಯ ಶತಮಾನದಲ್ಲಿದ್ದ ಒಬ್ಬ ಶಿವಶರಣ; ಕಾಣಾ ಚೆನ್ನಬಸವಣ್ಣ=ಅಲ್ಲಮನು ಚೆನ್ನಬಸವಣ್ಣನೊಡನೆ ಮಾತನಾಡುತ್ತಿರುವ ರೀತಿಯಲ್ಲಿ ವಚನ ರಚನೆಗೊಂಡಿದೆ.)

೨. ಅಕ್ಷರವ ಬಲ್ಲೆವೆಂದು ಅಹಂಕಾರವೆಡೆಗೊಂಡು ಲೆಕ್ಕಗೊಳ್ಳರಯ್ಯ
ಗುರುಹಿರಿಯರು ತೋರಿದ ಉಪದೇಶದಿಂದ
ವಾಗದ್ವೈತವ ಕಲಿತು ವಾದಿಪರಲ್ಲದೆ ಆಗುಹೋಗೆಂಬುದನರಿಯರು
ಭಕ್ತಿಯನರಿಯರು ಮುಕ್ತಿಯನರಿಯರು ಯುಕ್ತಿಯನರಿಯರು
ಮತ್ತೂ ವಾದಿಗೆಳಸುವರು
ಹೋದರು ಗುಹೇಶ್ವರ ಸಲೆ ಕೊಂಡ ಮಾರಿಂಗೆ.

ಓದುಬರಹವನ್ನು ಕಲಿತ ಮಾತ್ರದಿಂದಲೇ ಇತರರಿಗಿಂತ ತಾವೇ ದೊಡ್ಡವರೆಂದು ಸೊಕ್ಕಿನಿಂದ ಮೆರೆಯುತ್ತಾ, ಕೇವಲ ಮಾತಿನ ಚತುರತೆಯಿಂದಲೇ ಎಲ್ಲವನ್ನೂ ಗೆಲ್ಲುತ್ತ, ತಮಗೆ ಬೇಕಾದುದೆಲ್ಲವನ್ನೂ ಪಡೆದುಕೊಳ್ಳುತ್ತ, ಜನಸಮುದಾಯದ ಒಳಿತನ್ನು ಕಡೆಗಣಿಸುವಂತಹ ವ್ಯಕ್ತಿಗಳ ಸಾಮಾಜಿಕ ವರ್ತನೆಯನ್ನು ಈ ವಚನದಲ್ಲಿ ಟೀಕಿಸಲಾಗಿದೆ.

(ಅಕ್ಷರ=ನುಡಿಯ ಓದು/ಬರಹ; ಬಲ್ಲೆವು+ಎಂದು; ಬಲ್ಲ=ತಿಳಿದ/ಅರಿತ; ಬಲ್ಲೆವು=ತಿಳಿದಿರುವೆವು/ಅರಿತಿದ್ದೇವೆ ; ಅಕ್ಷರ ಬಲ್ಲೆವೆಂದು=ನಾವು ಓದುಬರಹವನ್ನು ಕಲಿತವರು ಎಂಬ ಒಳಮಿಡಿತದಿಂದ ಕೂಡಿ ; ಅಹಂಕಾರ+ಎಡೆ+ಕೊಂಡು ; ಅಹಂಕಾರ=ನಾವೇ ದೊಡ್ಡವರು/ಉತ್ತಮರು/ಮೇಲಿನವರು ಎಂಬ ಸೊಕ್ಕಿನ ನಡೆನುಡಿ; ಎಡೆ+ಕೊಂಡು; ಎಡೆ=ಜಾಗ/ಅವಕಾಶ/ಪಡೆ/ಹೊಂದು; ಎಡೆಗೊಂಡು=ತಳೆದು/ ಹೊಂದಿದವರಾಗಿ/ಒಳಗಾಗಿ ; ಲೆಕ್ಕ+ಕೊಳ್ಳರು+ಅಯ್ಯ ; ಲೆಕ್ಕ=ಗಣನೆ/ಎಣಿಸುವುದು; ಲೆಕ್ಕಗೊಳ್=ಇತರರನ್ನು ಒಲವು ನಲಿವಿನಿಂದ ಕಾಣುವುದು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಟ್ಟು; ಲೆಕ್ಕಗೊಳ್ಳರ್=ಇತರರ ಬಗ್ಗೆ ಒಲವು ನಲಿವಿನಿಂದ ನಡೆದುಕೊಳ್ಳದೆ, ಎಲ್ಲವನ್ನೂ/ಎಲ್ಲರನ್ನೂ ಕೀಳಾಗಿ ಕಾಣುತ್ತಾರೆ/ಕಡೆಗಣಿಸುತ್ತಾರೆ;

ಗುರು=ಅರಿವನ್ನು/ತಿಳುವಳಿಕೆಯನ್ನು ನೀಡಿ ವ್ಯಕ್ತಿತ್ವವನ್ನು ರೂಪಿಸುವ ವ್ಯಕ್ತಿ ; ಹಿರಿಯರು=ವಯಸ್ಸಿನಲ್ಲಿ ದೊಡ್ಡವರು ಮತ್ತು ಜೀವನದ ಬಗ್ಗೆ ಹೆಚ್ಚಿನ ತಿಳುವಳಿಕೆಯನ್ನು ಉಳ್ಳವರು; ತೋರಿದ=ಕಾಣುವಂತೆ/ತಿಳಿಯುವಂತೆ ಮಾಡಿದ ; ಉಪದೇಶ+ಇಂದ ; ಉಪದೇಶ=ಹೇಳಿದ ಒಳ್ಳೆಯ ನುಡಿಗಳು/ಆಡಿದ ಅರಿವಿನ ನುಡಿಗಳು/ಕಲಿಸಿದ ವಿದ್ಯೆ ; ವಾಕ್+ಅದ್ವೈತ=ವಾಗದ್ವೈತ ; ವಾಕ್=ನುಡಿ/ಮಾತು ; ಅದ್ವೈತ=ಜೀವಾತ್ಮ ಮತ್ತು ಪರಮಾತ್ಮ ಎಂಬುವು ಬೇರೆ ಬೇರೆಯಲ್ಲ, ಅವೆರಡೂ ಒಂದೇ ಎಂಬ ನಿಲುವು ; ವಾಗದ್ವೈತವ ಕಲಿತು=ಯಾವುದೇ ಸಂಗತಿಯನ್ನು ಕುರಿತ ಚರ್ಚೆಯ ಸನ್ನಿವೇಶದಲ್ಲಿ ಎದುರಾಳಿಯನ್ನು ಸೋಲಿಸುವಂತಹ ಮಾತುಗಾರಿಕೆಯನ್ನು ಹೊಂದಿರುವುದು / ಮಾತಿನ ಬಳಕೆಯಲ್ಲಿ ಹೆಚ್ಚಿನ ಜಾಣ್ಮೆಯನ್ನು ಕರಗತ ಮಾಡಿಕೊಂಡಿರುವುದು /

ಆಡುವುದು ಒಂದು, ಮಾಡುವುದು ಮತ್ತೊಂದು ಎನಿಸುವಂತಹ ಇಬ್ಬಗೆಯ ನಡೆನುಡಿಯನ್ನು ಅಳವಡಿಸಿಕೊಂಡಿರುವುದು / ನಿಜಜೀವನದಲ್ಲಿ ಆಚರಣೆಯಲ್ಲಿಲ್ಲದ ದೊಡ್ಡದೊಡ್ಡ ಆದರ್ಶದ ನುಡಿಗಳನ್ನಾಡುವುದರಲ್ಲಿ ಚತುರತೆಯನ್ನು ಗಳಿಸಿರುವುದು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಟ್ಟು ; ವಾದಿಪರ್+ಅಲ್ಲದೆ; ವಾದ=ಯಾವುದೇ ಸಂಗತಿಯನ್ನು ಕುರಿತು ಚರ್ಚಿಸುವಾಗ ತಾವಾಡುವ ನುಡಿಗಳೇ/ತಮ್ಮ ನಿಲುವೇ ಸರಿಯೆಂಬ ನಿಲುವು; ವಾದಿಪರ್=ವಾದವನ್ನು ಮಾಡುತ್ತಾರೆ ; ವಾದಿಪರ್+ಅಲ್ಲದೆ; ಅಲ್ಲದೆ=ಹೊರತಾಗಿ/ಅದನ್ನು ಬಿಟ್ಟು; ವಾದಿಪರಲ್ಲದೆ=ಸೊಗಸಾಗಿ ಮಾತನಾಡುತ್ತಾರೆಯೇ ಹೊರತು; ಆಗುಹೋಗು+ಎಂಬುದನ್ +ಅರಿಯರು; ಆಗುಹೋಗು=ಲೋಕದಲ್ಲಿನ/ ಸಮಾಜದಲ್ಲಿನ ಜನಸಮುದಾಯದ ನೋವು ನಲಿವು/ಏಳು ಬೀಳು/ಹಸಿವು ಅಪಮಾನ ಬಡತನದ ಬವಣೆಗಳು; ಎಂಬುದನ್=ಎನ್ನುವುದನ್ನು; ಅರಿ=ತಿಳಿ; ಅರಿಯರು=ಅವರಿಗೆ ತಿಳಿದಿಲ್ಲ/ಗೊತ್ತಿಲ್ಲ ;

ಭಕ್ತಿ+ಅನ್+ಅರಿಯರು ; ಭಕ್ತಿ=ದೇವರನ್ನು ಪೂಜಿಸಲು/ಒಲಿಸಿಕೊಳ್ಳಲು ವ್ಯಕ್ತಿಯು ಹೊಂದಿರಬೇಕಾದ ಒಳ್ಳೆಯ ನಡೆನುಡಿ; ಅನ್=ಅನ್ನು ; ಮುಕ್ತಿ+ಅನ್+ಅರಿಯರು; ಮುಕ್ತಿ=ಮಯ್ ಮನಗಳಲ್ಲಿ ತುಡಿಯುವಂತಹ ಕೆಟ್ಟ ಒಳಮಿಡಿತಗಳನ್ನು ಹೋಗಲಾಡಿಸಿಕೊಂಡು/ಬಿಡುಗಡೆಯನ್ನು ಹೊಂದಿ ಒಳ್ಳೆಯ ರೀತಿಯಲ್ಲಿ ಬದುಕುವುದು; ಯುಕ್ತಿ+ಅನ್+ಅರಿಯರು; ಯುಕ್ತಿ=ಮಯ್ ಮನಗಳನ್ನು ಹತೋಟಿಯಲ್ಲಿಟ್ಟುಕೊಂಡು ಒಳಿತಿನ ನಡೆನುಡಿಗಳಿಂದ ಬಾಳುವ ಚತುರತೆ/ಕುಶಲತೆ ; ಮತ್ತೂ=ಪದೇ ಪದೇ/ ಯಾವಾಗಲೂ/ಒಂದೇ ಸಮನೆ ; ವಾದಿಗೆ+ಎಳಸುವರು ; ವಾದಿಗೆ=ವಾದವನ್ನು ಮಾಡುವುದಕ್ಕೆ/ತಮ್ಮ ಮಾತು/ನಿಲುವನ್ನೇ ಮುಂದೊಡ್ಡುವುದಕ್ಕೆ ; ಎಳಸು=ಬಯಸು/ ಪ್ರಯತ್ನಿಸು/ಹಂಬಲಿಸು ; ಎಳಸುವರು=ಪ್ರಯತ್ನಿಸುತ್ತಾರೆ/ಬಯಸುತ್ತಾರೆ;

ಗುಹೇಶ್ವರ=ಶಿವ/ಅಲ್ಲಮನ ಮೆಚ್ಚಿನ ದೇವರು/ಅಲ್ಲಮನ ವಚನಗಳಲ್ಲಿ ಕಂಡುಬರುವ ಅಂಕಿತನಾಮ ; ಸಲೆ=ಸಂಪೂರ್ಣವಾಗಿ/ನಿಜವಾಗಿ ; ಕೊಂಡ=ಪಡೆದ ; ಮಾರಿಂಗೆ=ಮಾರಿ ದೇವತೆಗೆ ; ಸಲೆ ಕೊಂಡ ಮಾರಿಂಗೆ ಹೋದರು=ಮಾರಿ ದೇವತೆಯ ಕ್ರೂರನೋಟಕ್ಕೆ ಸಿಲುಕಿ ಸಂಪೂರ್ಣವಾಗಿ ನಾಶವಾದರು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ಶಾಪದ ನುಡಿ)



೩. ಅಗ್ಘವಣಿ ಪತ್ರೆ ಧೂಪ ದೀಪ ನಿವಾಳಿಯಲ್ಲಿ
ಪೂಜಿಸಿ ಪೂಜಿಸಿ ಬಳಲುತ್ತೈದಾರೆ
ಏನೆಂದರಿಯರು ಎಂತೆಂದರಿಯರು
ಜನ ಮರುಳೋ ಜಾತ್ರೆ ಮರುಳೊ ಎಂಬಂತೆ
ಎಲ್ಲರೂ ಪೂಜಿಸಿ ಏನನೂ ಕಾಣದೆ
ಲಯವಾಗಿ ಹೋದರು ಗುಹೇಶ್ವರ.

ವಿಗ್ರಹ ರೂಪದಲ್ಲಿರುವ ದೇವರಿಗೆ ಮಾಡುವ ಯಾವುದೇ ಬಗೆಯ ಆಚರಣೆಯನ್ನಾಗಲಿ ಇಲ್ಲವೇ ದೇವರ ಪೂಜೆಗೆಂದು ಬಳಸುವ ಸಾಮಗ್ರಿಯನ್ನಾಗಲಿ ಶಿವಶರಣಶರಣೆಯರು ದೊಡ್ಡದೆಂದು ಪರಿಗಣಿಸಿಲ್ಲ. ಏಕೆಂದರೆ ವ್ಯಕ್ತಿಯು ತನಗೆ ಮತ್ತು ತನ್ನ ಕುಟುಂಬಕ್ಕೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಸಾಮಾಜಿಕ ನಡೆನುಡಿಗಳಲ್ಲಿ ಅವರು ದೇವರನ್ನು ಕಾಣುತ್ತಿದ್ದರು. ಶಿವಶರಣಶರಣೆಯರ ಈ ಬಗೆಯ ನಿಲುವನ್ನು ಈ ವಚನದಲ್ಲಿ ಹೇಳಲಾಗಿದೆ.

(ಅಗ್ಘವಣಿ=ದೇವರ ವಿಗ್ರಹಗಳನ್ನು ತೊಳೆಯುವುದಕ್ಕೆ ಬಳಸುವ ನೀರು; ಪತ್ರೆ=ಬಿಲ್ವ/ಬನ್ನಿ ಮರದ ಇಲ್ಲವೇ ತುಳಸಿ ಗಿಡದ ಎಲೆ/ದಳ ; ಧೂಪ=ಕೆಂಡದ ಮೇಲೆ ಹಾಕಿದಾಗ ಉಂಟಾಗುವ ಹೊಗೆಯಲ್ಲಿ ಒಳ್ಳೆಯ ಕಂಪನ್ನು ಬೀರುವ ಸಾಂಬ್ರಾಣಿ/ಹಾಲುಮಡ್ಡಿ ಮುಂತಾದ ವಸ್ತುಗಳು; ದೀಪ=ದೀವಿಗೆ/ಸೊಡರು; ನಿವಾಳಿ+ಅಲ್ಲಿ; ನಿವಾಳಿ=ಆರತಿಯನ್ನು ಎತ್ತುವಿಕೆ; ದೀಪ ನಿವಾಳಿಯಲ್ಲಿ=ಬೆಳಗುತ್ತಿರುವ ಜ್ಯೋತಿ/ಉರಿಯುತ್ತಿರುವ ಕರ್ಪೂರವನ್ನು ಒಳಗೊಂಡ ತಟ್ಟೆಯನ್ನು ದೇವರ ವಿಗ್ರಹದ ಮುಂದೆ ಎತ್ತಿ ಹಿಡಿದು ಅತ್ತಿತ್ತ ಆಡಿಸುವ ಆಚರಣೆ; ಬಳಲುತ್ತ+ಐದಾರೆ; ಬಳಲು=ಆಯಾಸಪಡು/ದಣಿಯುವುದು/ಶ್ರಮಪಡುವುದು; ಐದಾರೆ=ಇದ್ದಾರೆ ;

ಏನ್+ಎಂದು+ಅರಿಯರು; ಎಂತು+ಎಂದು+ಅರಿಯರು; ಎಂತು=ಯಾವ ರೀತಿ/ಬಗೆ; ಅರಿ=ತಿಳಿ; ಅರಿಯರು=ತಿಳಿಯರು/ಗೊತ್ತಿಲ್ಲದವರು; ಏನೆಂದರಿಯರು ಎಂತೆಂದರಿಯರು=ಈ ರೀತಿಯ ಆಚರಣೆಗಳನ್ನು ಏಕೆ ಮಾಡಬೇಕು, ದೇವರಿಗೂ ಈ ಆಚರಣೆಗಳಿಗೂ ಇರುವ ನಂಟು ಯಾವುದು, ಇವು ಹೇಗೆ ಪರಿಣಾಮವನ್ನು ಬೀರುತ್ತವೆ ಎಂಬುದರ ಬಗ್ಗೆ ಯಾವೊಂದು ಬಗೆಯ ತಿಳುವಳಿಕೆಯೂ ಇಲ್ಲದವರು. ಹಿಂದಿನಿಂದಲೂ ದೇವರನ್ನು ಪೂಜಿಸಿಕೊಂಡು ಬಂದಿರುವ ಆಚರಣೆಗಳನ್ನು ಚಾಚುತಪ್ಪದೆ ಎಂದಿನಂತೆ ಮಾಡುತ್ತಿದ್ದಾರೆ; ಮರುಳು=ದಡ್ಡತನ/ತಿಳಿಗೇಡಿತನ/ಹುಚ್ಚು/ಮೋಹ;

ಜಾತ್ರೆ=ನೂರಾರು ಸಾವಿರಾರು ಮಂದಿ ಜತೆಗೂಡಿ ಮಾಡುವ ದೇವರ ಉತ್ಸವ ; ಜನ ಮರುಳೋ ಜಾತ್ರೆ ಮರುಳೊ=ಒಳಿತು/ಕೆಡುಕಿನ ಇಲ್ಲವೇ ಸರಿ/ತಪ್ಪುಗಳ ಅರಿವಿಲ್ಲದೆ/ ವಿವೇಚನೆಯಿಲ್ಲದೆ ಮಾಡುವ ಕೆಲಸ ಎಂಬ ತಿರುಳಿನಲ್ಲಿ ಬಳಕೆಯಲ್ಲಿರುವ ನಾಣ್ಣುಡಿ ;

"ಜನಮರುಳೋ ಜಾತ್ರೆ ಮರುಳೋ ಎಂಬಂತೆ ಎಲ್ಲರೂ ಪೂಜಿಸಿ" ಎಂಬ ನುಡಿಗಳು "ಹಿಂದಿನಿಂದಲೂ ದೇವರನ್ನು ಪೂಜಿಸಿಕೊಂಡು ಬಂದಿರುವ ಆಚರಣೆಗಳನ್ನು ಚಾಚುತಪ್ಪದೆ ಎಂದಿನಂತೆ ಮಾಡಿಕೊಂಡು ಬರುತ್ತಿದ್ದಾರೆ" ಎಂಬ ತಿರುಳಿನಲ್ಲಿ ಬಳಕೆಯಾಗಿವೆ; ಏನನೂ=ಏನನ್ನೂ/ಯಾವುದನ್ನೂ; ಕಾಣದೆ=ಸರಿಯಾಗಿ ತಿಳಿಯದೆ; ಲಯ+ಆಗಿ; ಲಯ=ನಾಶ/ಹಾಳು/ಇಲ್ಲವಾಗುವುದು; ಲಯವಾಗಿ ಹೋದರು= ಕಾಲವನ್ನು ಹಾಳುಮಾಡಿಕೊಂಡರು.)



೪. ಆಚಾರವರಿಯದೆ ವಿಭವವಳಿಯದೆ
ಕೋಪವಡಗದೆ ತಾಪ ಮುರಿಯದೆ
ಬರಿದೆ ಭಕ್ತರಾದೆವೆಂದು ಬೆಬ್ಬನೆ ಬೆರೆವವರ ಕೇಡಿಂಗೆ
ನಾನು ಮರುಗುವೆನು ಕಾಣಾ ಗುಹೇಶ್ವರ.

ಮಯ್ ಮನದಲ್ಲಿ ತುಡಿಯುವ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳ್ಳೆಯ ನಡೆನುಡಿಗಳಿಂದ ಬದುಕನ್ನು ನಡೆಸದೆ, ಇತರರ ಮುಂದೆ "ತಾವು ದೇವರನ್ನು ಒಲಿದು ಪೂಜಿಸುವ ವ್ಯಕ್ತಿಗಳು" ಎಂದು ಹೇಳಿಕೊಂಡು ಮೆರೆದಾಡುವವರನ್ನು ಕುರಿತು ಕಳವಳವನ್ನು ಈ ವಚನದಲ್ಲಿ ವ್ಯಕ್ತಪಡಿಸಲಾಗಿದೆ.

(ಆಚಾರ+ಅರಿಯದೆ; ಆಚಾರ=ತನಗೆ ಮತ್ತು ಇತರರಿಗೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳು ; ಅರಿ=ತಿಳಿ; ಅರಿಯದೆ=ತಿಳಿಯದೆ; ಆಚಾರವರಿಯದೆ=ಒಳ್ಳೆಯತನದ ನಡೆನುಡಿಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬಾಳದೆ; ವಿಭವ+ಅಳಿಯದೆ; ವಿಭವ=ಸಿರಿ/ಸಂಪತ್ತು/ಶಕ್ತಿ/ಬಲ/ಹಿರಿಮೆ; ಅಳಿ=ನಾಶ/ಇಲ್ಲವಾಗುವುದು; ವಿಭವವಳಿಯದೆ=ಸಿರಿಸಂಪತ್ತಿನಿಂದ/ ಗಳಿಸಿದ ವಿದ್ಯೆಯಿಂದ / ಪಡೆದ ಗದ್ದುಗೆಯಿಂದ ಉಂಟಾದ ಸೊಕ್ಕಿನ ನಡೆನುಡಿಗಳನ್ನು ತೊರೆಯದೆ/ಬಿಡದೆ/ಇಲ್ಲವಾಗಿಸಿಕೊಳ್ಳದೆ.

ಕೋಪ+ಅಡಗದೆ ; ಕೋಪ=ತನ್ನ ಉದ್ದೇಶ ಮತ್ತು ಆಸೆಗೆ ಇತರರಿಂದ ಅಡ್ಡಿ/ಆತಂಕ/ನೋವು/ಹಾನಿ ಉಂಟಾದಾಗ ವ್ಯಕ್ತಿಯ ಮನದಲ್ಲಿ ಕೆರಳುವ ಒಳಮಿಡಿತ/ಸಿಟ್ಟು; ಅಡಗು=ನಾಶಹೊಂದು/ಇಲ್ಲವಾಗು; ತಾಪ=ಸಂಕಟ/ವೇದನೆ/ಯಾತನೆ; ಮುರಿ=ಕೆಡು/ಹಾಳಾಗು/ನಾಶವಾಗು; ತಾಪ ಮುರಿಯದೆ=ಮನದೊಳಗಿನ ಆಕ್ರೋಶ/ಕುದಿತ ಕಡಮೆಯಾಗದೆ.

ಬರಿದೆ=ಸುಮ್ಮನೆ; ಭಕ್ತರ್+ಆದೆವ್+ಎಂದು; ಭಕ್ತ=ಒಳ್ಳೆಯ ನಡೆನುಡಿಗಳಿಂದ ದೇವರನ್ನು ಒಲಿದವನು/ಒಳ್ಳೆಯ ನಡೆನುಡಿಗಳೇ ದೇವರೆಂದು ನಂಬಿದವನು; ಆದೆವ್=ಆದೆವು/ಆಗಿದ್ದೇವೆ; ಬೆಬ್ಬನೆ=ಅತಿಯಾಗಿ/ಬಹಳವಾಗಿ; ಬೆರೆವ+ಅವರ; ಬೆರೆ=ಹೆಮ್ಮೆ/ಜಂಬ/ಉಬ್ಬು/ಸೊಕ್ಕು; ಬೆರೆವವರ=ಇತರರಿಗಿಂತ ತಾವೇ ದೊಡ್ಡವರು/ಉತ್ತಮರು/ಮೇಲಿನವರು ಎಂಬ ಸೊಕ್ಕಿನಿಂದ ನಡೆದುಕೊಳ್ಳುವ ವ್ಯಕ್ತಿಗಳ; ಕೇಡು=ಹಾನಿ/ನಾಶ/ಕೊನೆ; ಕೇಡಿಂಗೆ=ಹಾನಿಯನ್ನು ಉಂಟುಮಾಡುವಂತಹ ಕೆಟ್ಟ ನಡೆನುಡಿಗಳಿಗೆ; ಮರುಗು=ಕನಿಕರ/ಕರುಣೆ/ಕಳವಳ; ಕಾಣ್+ಆ; ಕಾಣ್=ನೋಡು/ತಿಳಿ; ಕಾಣಾ=ಕಂಡೆಯಾ/ತಿಳಿದಿರುವೆಯಾ).



೫. ಏನ ಕಂಡಡೇನಯ್ಯಾ ತನ್ನ ಕಾಣದಾತ ಕುರುಡ
ಏನ ಕೇಳಿದಡೇನಯ್ಯಾ ತನ್ನ ಕೇಳದಾತ ಕಿವುಡ
ಏನ ಮಾತನಾಡಿದಡೇನಯ್ಯಾ ತನ್ನ ಮಾತಾಡದಾತ ಮೂಕ
ದಿಟದಿಂದ ತನ್ನ ತಾ ಕಾಣಬೇಕು
ದಿಟದಿಂದ ತನ್ನ ತಾ ಕೇಳಬೇಕು
ದಿಟದಿಂದ ತನ್ನ ತಾ ಮಾತಾಡಬೇಕು
ಇದೆ ತನ್ನ ನೆಲೆ ಸ್ವಭೂಮಿ ಸ್ವಸ್ವರೂಪು ಕಾಣಾ ಗುಹೇಶ್ವರಾ.

ವ್ಯಕ್ತಿಯು ಲೋಕದಲ್ಲಿ ಕಂಡು ಕೇಳಿ ಮಾತನಾಡಿ ಪಡೆದುಕೊಂಡ ತಿಳುವಳಿಕೆಯ ಜೊತೆಜೊತೆಗೆ, ಮಾನವನ ಬದುಕಿನ ಆಗುಹೋಗುಗಳಿಗೆ ಕಾರಣವಾಗಿರುವ ವಾಸ್ತವದ ಸಂಗತಿಗಳನ್ನು ಅರಿತುಕೊಂಡು, ನಿಜದ ನಡೆನುಡಿಗಳಿಂದ ಕೂಡಿದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಾದ ಅಗತ್ಯವನ್ನು ಈ ವಚನದಲ್ಲಿ ಹೇಳಲಾಗಿದೆ.

"ನಿಜದ ನಡೆನುಡಿಗಳು" ಎಂದರೆ ತನಗೆ ಮತ್ತು ತನ್ನ ಕುಟುಂಬಕ್ಕೆ ಒಳಿತನ್ನು ಬಯಸುವಂತೆಯೇ ಜನಸಮುದಾಯಕ್ಕೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ಸಾಮಾಜಿಕ ವರ್ತನೆ.

(ಏನ್+ಅ; ಏನ್=ಯಾವುದು; ಏನ=ಯಾವುದನ್ನು/ಏನನ್ನು; ಕಂಡಡೆ+ಏನ್+ಅಯ್ಯಾ; ಕಂಡಡೆ=ನೋಡಿದರೆ; ಅಯ್ಯಾ=ಗಂಡಸರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ಏನ ಕಂಡಡೇನು=ವ್ಯಕ್ತಿಯು ತನ್ನ ಜೀವನದಲ್ಲಿ ಬಹುಬಗೆಯ ವಸ್ತುಗಳನ್ನು/ಜೀವಿಗಳನ್ನು/ಪ್ರಸಂಗಗಳನ್ನು ನೋಡಿ, ಅವುಗಳ ಒಳಿತು ಕೆಡುಕಿನ ಅಂಶಗಳನ್ನು ಅರಿತುಕೊಂಡಿದ್ದರೆ ತಾನೇ ಏನು ಪ್ರಯೋಜನ; ತನ್ನ=ತನ್ನನ್ನು; ಕಾಣದ+ಆತ; ಕಾಣ್=ನೋಡು; ಕಾಣದ=ನೋಡದ/ತಿಳಿಯದ/ಅರಿಯದ; ಆತ=ಅವನು; ಕುರುಡ=ಕಣ್ಣಿಲ್ಲದವನು/ಕಣ್ಣಿನ ದಿಟ್ಟಿಯಿಲ್ಲದವನು/ಏನನ್ನು ನೋಡಲಾರದವನು; ತನ್ನ ಕಾಣದಾತ ಕುರುಡ=ತನ್ನ ನಡೆನುಡಿಯಲ್ಲಿನ ತಪ್ಪುಗಳನ್ನು ನೋಡಿಕೊಂಡು, ಅವನ್ನು ತಿದ್ದಿ ಸರಿಪಡಿಸಿಕೊಂಡು ಬಾಳದವನು, ಕಣ್ಣಿದ್ದು ಕುರುಡನಂತಾಗುತ್ತಾನೆ ಎಂಬ ನಾಣ್ಣುಡಿಯ ತಿರುಳಿನಲ್ಲಿ ಬಳಕೆಯಾಗಿರುವ ಸೊಲ್ಲು;

ಕೇಳಿದಡೆ+ಏನ್+ಅಯ್ಯಾ; ಕೇಳು=ಆಲಿಸು/ಕಿವಿಗೊಡು; ಕೇಳಿದಡೆ=ಕೇಳಿದರೆ/ಕೇಳಿಸಿಕೊಂಡರೆ ; ಏನ ಕೇಳಿದಡೇನು=ಇತರರು ಹೇಳಿದ ನೀತಿ/ನಿಯಮ/ಸತ್ಯ/ವಾಸ್ತವದ ನುಡಿಗಳನ್ನು ಆಲಿಸಿ ಮನಗಂಡಿದ್ದರೆ ತಾನೇ ಏನು ಪ್ರಯೋಜನ; ಕೇಳದ+ಆತ;

ಕೇಳದ=ಕೇಳಿಸಿಕೊಳ್ಳದ/ಆಲಿಸಿಕೊಳ್ಳದ/ಕಿವಿಗೊಡದ; ಕಿವುಡ=ಕಿವಿ ಕೇಳಿಸದವನು/ಕೆಪ್ಪ; ತನ್ನ ಕೇಳದಾತ ಕಿವುಡ=ವ್ಯಕ್ತಿಯು ಆಡಿದ ಮಾತುಗಳು ಬೇರೆಯವರಿಗೆ ಕೇಳಿಸುವಂತೆಯೇ ತನಗೂ ಕೇಳಿಸುತ್ತಿರುವುದರಿಂದ, ತಾನಾಡಿದ ನುಡಿಗಳು ಕೇಳುಗರ ಮನಸ್ಸಿಗೆ ಮುದವನ್ನುಂಟುಮಾಡಿದವೊ ಇಲ್ಲವೇ ನೋವನ್ನುಂಟುಮಾಡಿದವೋ ಎಂಬುದರ ಬಗ್ಗೆ ಎಚ್ಚರವಿಲ್ಲದವನು/ಗಮನಿಸಿದವನು/ಲೆಕ್ಕಿಸದವನು;

ಮಾತು+ಆಡಿದಡೆ+ಏನ್+ಅಯ್ಯಾ; ಆಡಿದಡೆ=ಆಡಿದರೆ/ನುಡಿದರೆ; ಮಾತಾಡಿದಡೆ= ಮಾತನ್ನಾಡಿದರೆ; ಏನ ಮಾತನಾಡಿದಡೇನು=ನೀತಿ/ನಿಯಮ/ಸತ್ಯ/ಆದರ್ಶದ ಸಂಗತಿಗಳನ್ನು ಕುರಿತು ದೊಡ್ಡ ದೊಡ್ಡ ಮಾತುಗಳನ್ನಾಡುವುದರಿಂದ ಏನು ತಾನೇ ಪ್ರಯೋಜನ; ಮಾತು+ಆಡದ+ಆತ; ಮೂಕ=ಮಾತು ಬಾರದವನು/ಮಾತನಾಡಲಾಗದವನು; ತನ್ನ ಮಾತಾಡದಾತ ಮೂಕ=ತನಗೆ ತಿಳಿದಿರುವ ದಿಟ/ಸತ್ಯ/ವಾಸ್ತವವನ್ನು ಕುರಿತು ಮಾತನಾಡದವನು;

ದಿಟ+ಇಂದ; ದಿಟ=ಸತ್ಯ/ವಾಸ್ತವ/ನಿಜ; ತಾ=ತಾನು; ದಿಟದಿಂದ ತನ್ನ ತಾ ಕಾಣಬೇಕು/ಕೇಳಬೇಕು/ಮಾತಾಡಬೇಕು=ವಾಸ್ತವದ ನೆಲೆಗಟ್ಟಿನಲ್ಲಿ ವ್ಯಕ್ತಿಯು ತನ್ನ ನಡೆನುಡಿಗಳು ರೂಪುಗೊಳ್ಳುವುದಕ್ಕೆ ಕಾರಣವಾಗಿರುವ ನಿಸರ್ಗದಲ್ಲಿ ನಡೆಯುವ ಸಂಗತಿಗಳನ್ನು ಮತ್ತು ಸಮಾಜದ ಕಟ್ಟುಪಾಡು, ಸಂಪ್ರದಾಯ ಮತ್ತು ಆಚರಣೆಗಳ ಬಗ್ಗೆ ಚಿಂತಿಸಬೇಕು. ಅವುಗಳಲ್ಲಿ ಕಾಣುವ/ಕೇಳಿ ಬರುವ ಒಳ್ಳೆಯ/ಕೆಟ್ಟ ಸಂಗತಿಗಳನ್ನು ಒರೆಹಚ್ಚಿ ನೋಡಬೇಕು. ನಿಸರ್ಗ ಮತ್ತು ಸಮಾಜದ ನಡುವೆ ಸಿಲುಕಿ ತನ್ನ ಮಯ್ ಮನಗಳಲ್ಲಿ ಉಂಟಾಗುತ್ತಿರುವ ತುಡಿತಗಳನ್ನು ತಿಳಿದುಕೊಂಡು, ತನ್ನ ಒಳಿತಿಗಾಗಿ ಹಂಬಲಿಸುವಂತೆಯೇ ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಾಳುವಂತಹ ದಿಟದ/ವಾಸ್ತವದ/ಸತ್ಯದ ನಡೆನುಡಿಗಳನ್ನು ರೂಪಿಸಿಕೊಳ್ಳಬೇಕೆಂಬ ತಿರುಳನ್ನು ಈ ನುಡಿಗಳು ಹೊಂದಿವೆ;

ಇದೆ=ಈ ರೀತಿಯಲ್ಲಿ ಚಿಂತಿಸುವುದೆ/ಆಲೋಚಿಸುವುದೆ; ನೆಲೆ=ಗುರಿ/ಉದ್ದೇಶ/ ನಿಲುವು; ಸ್ವ=ಸ್ವಂತ/ವ್ಯಕ್ತಿಗೆ ಸೇರಿದ/ತನ್ನದೇ ಆದ; ಭೂಮಿ=ಜಾಗ/ನೆಲ; ಸ್ವರೂಪು=ನಿಜವಾದ ರೂಪ/ಸಹಜವಾದ ಗುಣ/ಇರುವಿಕೆ; ಕಾಣ್+ಆ; ಕಾಣಾ=ತಿಳಿದು ನೋಡು/ಅರಿತು ನೋಡು; ಇದೆ ತನ್ನ ನೆಲೆ ಸ್ವಭೂಮಿ ಸ್ವಸ್ವರೂಪು=ವಾಸ್ತವದ ಸಂಗತಿಗಳನ್ನು ಅರಿತುಕೊಂಡು ಒಳ್ಳೆಯ ರೀತಿಯಲ್ಲಿ ಬಾಳುವುದೇ ವ್ಯಕ್ತಿಯ ಜೀವನದ ಗುರಿಯಾಗಿರಬೇಕು.)



೬ ಕಲ್ಲ ಮನೆಯ ಮಾಡಿ
ಕಲ್ಲ ದೇವರ ಮಾಡಿ
ಆ ಕಲ್ಲು ಕಲ್ಲ ಮೇಲೆ ಕೆಡೆದರೆ
ದೇವರೆತ್ತ ಹೋದರೋ
ಲಿಂಗಪ್ರತಿಷ್ಠೆಯ ಮಾಡಿದವಂಗೆ
ನಾಯಕ ನರಕ ಗುಹೇಶ್ವರ.

ಜಡರೂಪದ ದೇವರನ್ನು ನಿರಾಕರಿಸುವುದರ ಜತೆಗೆ, ಕಲ್ಲು/ಮರ/ಮಣ್ಣು/ಲೋಹದಿಂದ ಮಾಡಿರುವ ಲಿಂಗವನ್ನು ದೇಗುಲದಲ್ಲಿ ನೆಲೆಗೊಳಿಸುವ ಆಚರಣೆಯನ್ನು ಈ ವಚನದಲ್ಲಿ ಕಟುವಾದ ಮಾತುಗಳಿಂದ ಅಲ್ಲಗಳೆಯಲಾಗಿದೆ.

ದೇವರನ್ನು ಒಪ್ಪಿಕೊಂಡಿರುವ ಶಿವಶರಣಶರಣೆಯರು ದೇಗುಲವನ್ನು ನಿರಾಕರಿಸುವುದಕ್ಕೆ ಕಾರಣವೇನೆಂದರೆ, ವಿಗ್ರಹದ ರೂಪದಲ್ಲಿ ಕಡೆದಿರುವ ದೇವರನ್ನು ದೇಗುಲದ ಒಳಗುಡಿಯಲ್ಲಿ ನೆಲೆಗೊಳಿಸುತ್ತಿದ್ದಂತೆಯೇ, ವಿಗ್ರಹದ ಹತ್ತಿರಕ್ಕೆ ಹೋಗಿ ಪೂಜಿಸಲು ಪೂಜಾರಿಯು ಮಾತ್ರ ಯೋಗ್ಯನಾಗುತ್ತಾನೆ. ಇನ್ನುಳಿದವರು ಒಳಗುಡಿಯಿಂದ ಹೊರನಿಲ್ಲಬೇಕಾಗುತ್ತದೆ. ಇಲ್ಲಿಂದಲೇ ಮಾನವರಲ್ಲಿ ಮೇಲು-ಕೀಳಿನ ವಿಂಗಡಣೆಯು ಮೊದಲಾಗುತ್ತದೆ. ಮೇಲು/ಕೀಳಿನ ಜಾತಿಮೆಟ್ಟಲುಗಳಿಂದ ಕೂಡಿರುವ ನಮ್ಮ ಸಮಾಜದ ಜಾತಿರಚನೆಯ ಕಟ್ಟುಪಾಡುಗಳನ್ನು ದೇಗುಲದಲ್ಲಿ ನಡೆಯುವ ಆಚರಣೆಗಳು ಮುಂದುವರಿಸಿಕೊಂಡು ಬರುತ್ತಿವೆ. ಮೇಲು ಜಾತಿಯವರಿಗೆ ಮತ್ತು ಮೇಲು ವರ್ಗದವರಿಗೆ ಅಂದರೆ ಸಿರಿವಂತರಿಗೆ ಹಾಗೂ ದೊಡ್ಡದೊಡ್ಡ ಗದ್ದುಗೆಯಲ್ಲಿರುವವರಿಗೆ ಮನ್ನಣೆಯನ್ನು ನೀಡುವ ದೇಗುಲದ ಆಚರಣೆಗಳು, ಕೆಳಜಾತಿ ಮತ್ತು ಕೆಳವರ್ಗದ ಅಂದರೆ ಹಣವಿಲ್ಲದ/ಸಂಪತ್ತಿಲ್ಲದ/ಗದ್ದುಗೆಯಿಲ್ಲದ ಜನಸಮುದಾಯವನ್ನು ಕಡೆಗಣಿಸಿವೆ. ಈ ರೀತಿ ಮೇಲು-ಕೀಳಿನ ತರತಮವು ಮುಂದುವರಿದುಕೊಂಡು ಹೋಗಲು ಕಾರಣವಾಗಿರುವ ಮತ್ತು ನೆರವಾಗಿರುವ ದೇಗುಲದ ನೆಲೆಯಿಂದ ಶಿವಶರಣಶರಣೆಯರು ದೂರಸರಿದಿದ್ದಾರೆ.

(ಕಲ್ಲ್+ಅ=ಕಲ್ಲ; ಕಲ್ಲ=ಕಲ್ಲಿನ/ಕಲ್ಲನ್ನು ಬಳಸಿ; ಕಲ್ಲ ಮನೆಯ ಮಾಡಿ=ಕಲ್ಲಿನ ದಿಂಡುಗಳಿಂದ ಅಡಿಪಾಯ ಹಾಕಿ, ಕಲ್ಲಿನಿಂದ ಗೋಡೆಗಳನ್ನು ಕಟ್ಟಿ, ನೆಲಕ್ಕೆ ಕಲ್ಲಿನ ಚಪ್ಪಡಿಗಳನ್ನು ಹಾಸಿ, ಕಲ್ಲಿನ ಕಂಬಗಳನ್ನು ನಿಲ್ಲಿಸಿ, ಮಾಳಿಗೆಗೆ ಕಲ್ಲಿನ ಹಾಸುಗಳನ್ನು ಹೊದಿಸಿ ದೇಗುಲವನ್ನು ಕಟ್ಟಿರುವುದು ; ಕಲ್ಲ ದೇವರ ಮಾಡಿ=ದೇವರ ವಿಗ್ರಹವನ್ನು ಕಲ್ಲಿನಿಂದಲೇ ಕಡೆದು ರೂಪಿಸಿ ;

ಆ ಕಲ್ಲು=ಮಾಳಿಗೆಯಾಗಿ ಹೊದಿಸಿರುವ ಕಲ್ಲಿನ ಚಪ್ಪಡಿಗಳು ; ಕಲ್ಲ ಮೇಲೆ=ದೇವರ ವಿಗ್ರಹದ ಮೇಲೆ; ಕೆಡೆ=ಬೀಳು; ಕಲ್ಲ ಮೇಲೆ ಕೆಡೆದರೆ=ಒಳಗುಡಿಯಲ್ಲಿ ಇಟ್ಟಿರುವ ದೇವರ ವಿಗ್ರಹದ ಮೇಲೆ ಬಿದ್ದರೆ; ದೇವರು+ಎತ್ತ ; ಎತ್ತ=ಯಾವ ಕಡೆಗೆ ; ಲಿಂಗ=ಶಿವನ ಸಂಕೇತದ ವಿಗ್ರಹ; ಪ್ರತಿಷ್ಠೆ=ನೆಲೆಗೊಳಿಸುವುದು; ಲಿಂಗ ಪ್ರತಿಷ್ಠೆ=ವಿಗ್ರಹ ರೂಪದ ಲಿಂಗವನ್ನು ದೇಗುಲದಲ್ಲಿ ನೆಲೆಗೊಳಿಸುವಿಕೆ; ಮಾಡಿದವಂಗೆ=ಮಾಡಿದವನಿಗೆ; ನಾಯಕ=ಅತಿ ಹೆಚ್ಚಿನ.

ನರಕ=ಈ ಲೋಕದಲ್ಲಿ ಜನರಿಗೆ ಕೇಡನ್ನು ಬಗೆದು ಸಾವನ್ನಪ್ಪಿದ ವ್ಯಕ್ತಿಯು ಅನಂತರ ತಾನು ಮಾಡಿದ ಕೆಟ್ಟಕೆಲಸಗಳಿಗೆ ತಕ್ಕಂತೆ ನಾನಾ ಬಗೆಯ ದಂಡನೆಗಳಿಗೆ ಗುರಿಯಾಗಿ ನರಳುವ ಮತ್ತೊಂದು ಲೋಕದಲ್ಲಿರುವ ಜಾಗ. ಜನರಿಗೆ ಕೇಡನ್ನು ಬಗೆದವರು ಸಂಕಟದ ನೆಲೆಯಾದ ನರಕಕ್ಕೆ, ಒಳಿತನ್ನು ಮಾಡಿದವರು ಆನಂದದ ನೆಲೆಯಾದ ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆಯು ಜನಸಮುದಾಯದ ಮನದಲ್ಲಿದೆ;

ನಾಯಕ ನರಕ=ಅತಿ ಹೆಚ್ಚಿನ ದಂಡನೆಗಳನ್ನು ನೀಡಿ ವ್ಯಕ್ತಿಯನ್ನು ಹಿಂಡಿಹಿಪ್ಪೆ ಮಾಡುವ ಜಾಗ. ಕೆಟ್ಟ ನಡೆನುಡಿಗಳಿಂದ ಜನರನ್ನು ವಂಚಿಸುವ ವ್ಯಕ್ತಿಗೆ ಹೆಚ್ಚಿನ ನೋವು/ಸಂಕಟ/ಹಾನಿಯುಂಟಾಗಲಿ ಎಂಬ ಒಳಮಿಡಿತದ ತಿರುಳಿನಲ್ಲಿ ಬಳಕೆಯಾಗುವ ಶಾಪರೂಪದ ನುಡಿಗಟ್ಟು.)



೭. ಕಾಯದ ಕಳವಳವ ಗೆಲಿದಡೇನೊ
ಮಾಯದ ತಲೆಯನರಿಯದನ್ನಕ್ಕರ
ಮಾಯದ ತಲೆಯನರಿದಡೇನೊ
ಜ್ಞಾನದ ನೆಲೆಯನರಿಯದನ್ನಕ್ಕರ
ಜ್ಞಾನದ ನೆಲೆಯನರಿದಡೇನೊ
ತಾನು ತಾನಾಗದನ್ನಕ್ಕರ
ತಾನು ತಾನಾದ ಶರಣರ ನಿಲವಿಂಗೆ
ಒಂದು ಧಾರೆ ಮೇರೆಯುಂಟೆ ಗುಹೇಶ್ವರಾ.

ತನ್ನ ಮಯ್ ಮನದಲ್ಲಿ ಮೂಡುವ ಕಾಮನೆಗಳನ್ನು ಹಂತ ಹಂತವಾಗಿ ಹತೋಟಿಗೆ ತಂದುಕೊಳ್ಳುತ್ತಾ, ತನ್ನನ್ನು ತಾನು ಅರಿತುಕೊಂಡು ಬಾಳುವ ಶಿವಶರಣನ ವ್ಯಕ್ತಿತ್ವ ರೂಪುಗೊಳ್ಳುವ ಬಗೆಯನ್ನು ಈ ವಚನದಲ್ಲಿ ಹೇಳಲಾಗಿದೆ.

(ಕಾಯ=ಮಯ್/ದೇಹ/ಶರೀರ; ಕಳವಳ=ತುಡಿತ/ತಳಮಳ/ಚಿಂತೆ; ಕಾಯದ ಕಳವಳ=ವ್ಯಕ್ತಿಯ ಮಯ್ ಮನದಲ್ಲಿ ನಿರಂತರವಾಗಿ ತುಡಿಯುತ್ತಿರುವ ಹಸಿವು ಮತ್ತು ಕಾಮದ ಬಯಕೆ; ಗೆಲಿದಡೆ+ಏನೊ; ಗೆಲ್=ಜಯಿಸು; ಗೆಲಿದಡೆ=ಗೆದ್ದರೆ/ಜಯಿಸಿದರೆ; ಏನ್=ಯಾವುದು; ಏನೊ=ಯಾವುದನ್ನು ಪಡೆದಂತಾಯಿತು;

"ಕಾಯದ ಕಳವಳವ ಗೆಲ್ಲುವುದು" ಎಂದರೆ ವ್ಯಕ್ತಿಯು ತನ್ನ ಮಯ್ ಮನದಲ್ಲಿ ತುಡಿಯುವಂತಹ ಹಸಿವು ಮತ್ತು ಕಾಮವನ್ನು ಸಮಾಜ ಒಪ್ಪಿತವಾದ ರೀತಿಯಲ್ಲಿ ಈಡೇರಿಸಿಕೊಳ್ಳುವುದು. "ಸಮಾಜ ಒಪ್ಪಿತವಾದ ರೀತಿ" ಎಂದರೆ ವ್ಯಕ್ತಿಯು ತನ್ನ ಅಗತ್ಯಗಳನ್ನು ಪೂರಯಿಸಿಕೊಳ್ಳುವಾಗ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯದಿರುವುದು;

ಮಾಯ/ಮಾಯೆ=ವ್ಯಕ್ತಿಯ ಮಯ್ ಮನದಲ್ಲಿ ಬಯಕೆಗಳನ್ನು ಕೆರಳಿಸಿ ತಮ್ಮತ್ತ ಸೆಳೆಯುವ ವಸ್ತು/ಜೀವಿ/ವ್ಯಕ್ತಿಗಳು;

ತಲೆ+ಅನ್+ಅರಿಯದ+ಅನ್ನಕ್ಕರ; ತಲೆ=ಆದಿ/ಮೊದಲು; ಮಾಯದ ತಲೆ=ವ್ಯಕ್ತಿಯ ಮಯ್ ಮನದಲ್ಲಿ ನೂರೆಂಟು ಬಗೆಯ ಕಾಮನೆಗಳನ್ನು ಕೆರಳಿಸುವಂತಹ ಸಂಗತಿಗಳ ಮೂಲ; ಅನ್=ಅನ್ನು; ಅರಿ=ತಿಳಿ/ಗ್ರಹಿಸು; ಅರಿಯದ=ತಿಳಿಯದ/ಗ್ರಹಿಸದ;

"ಮಾಯದ ತಲೆಯನ್ನು ಅರಿಯುವುದು" ಎಂದರೆ ವ್ಯಕ್ತಿಯು ತನ್ನ ಮಯ್ ಮನದಲ್ಲಿ ಬಹುಬಗೆಯ ಕಾಮನೆಗಳು ಕೆರಳಲು ಕಾರಣವಾದ ಸಂಗತಿಗಳನ್ನು ತಿಳಿಯುವುದು;

ಅನ್ನಕ್ಕರ=ಅಲ್ಲಿಯವರೆಗೆ/ಅಲ್ಲಿಯತನಕ; ಅರಿಯದನ್ನಕ್ಕರ=ತಿಳಿಯುವತನಕ/ಗ್ರಹಿಸುವವರೆಗೆ;

ಕಾಯದ ಕಳವಳವ ಗೆಲಿದಡೇನೊ ಮಾಯದ ತಲೆಯನರಿದನ್ನಕ್ಕರ=ಕಾಯದ ಕಳವಳವನ್ನು ಗೆದ್ದ ಮಾತ್ರಕ್ಕೆ ಎಲ್ಲವನ್ನೂ ಪಡೆದಂತಾಗುವುದಿಲ್ಲ. ಮಾಯೆಯ ಮೂಲವನ್ನು ಅರಿಯಬೇಕು. ಮಾಯೆಯ ಮೂಲ ಎಂದರೆ "ಮಯ್ ಮನದಲ್ಲಿ ಬಹು ಬಗೆಯ ಬಯಕೆಗಳು ಎಡೆಬಿಡದೆ ತನ್ನನ್ನು ಏಕೆ ಕಾಡುತ್ತಿವೆ? ಇದಕ್ಕೆ ನಿಸರ್‍ಗ ಸಹಜವಾದ ಮತ್ತು ಸಾಮಾಜಿಕವಾದ ಕಾರಣಗಳು ಯಾವುವು ಎಂಬುದನ್ನು ತಿಳಿಯಬೇಕು";

ತಲೆ+ಅನ್+ಅರಿದಡೆ+ಏನೊ; ಅರಿದಡೆ=ತಿಳಿದರೆ/ಗ್ರಹಿಸಿಕೊಂಡರೆ; ಜ್ಞಾನ=ಅರಿವು/ ತಿಳುವಳಿಕೆ; ನೆಲೆ+ಅನ್+ಅರಿಯದ+ಅನ್ನಕ್ಕರ; ನೆಲೆ=ಜಾಗ/ಗುರಿ/ಉದ್ದೇಶ;

ಜ್ಞಾನದ ನೆಲೆ= ಮಾನವ ಸಮುದಾಯದ ಜೀವನದಲ್ಲಿ "ಯಾವುದು ಸರಿ-ಯಾವುದು ತಪ್ಪು; ಯಾವುದು ದಿಟ-ಯಾವುದು ಸಟೆ; ಯಾವುದು ನೀತಿ-ಯಾವುದು ಅನೀತಿ" ಎಂಬ ಅರಿವನ್ನು ಪಡೆದುಕೊಳ್ಳುವುದು;

ಮಾಯದ ತಲೆಯನರಿದಡೇನೊ ಜ್ಞಾನದ ನೆಲೆಯನರಿಯದನ್ನಕ್ಕರ=ಮಾಯೆಯ ಮೂಲವನ್ನು ತಿಳಿದ ಮಾತ್ರಕ್ಕೆ ಎಲ್ಲವನ್ನೂ ಪಡೆದಂತಾಗುವುದಿಲ್ಲ. ಜ್ಞಾನದ ನೆಲೆಯನ್ನು ಅರಿಯಬೇಕು. "ಜ್ಞಾನದ ನೆಲೆ" ಎಂದರೆ ವ್ಯಕ್ತಿಯು ತಾನು ಒಳ್ಳೆಯ ರೀತಿಯಲ್ಲಿ ಬದುಕನ್ನು ನಡೆಸಬೇಕು ಎಂಬ ಅರಿವನ್ನು ಪಡೆದುಕೊಳ್ಳುವುದು;

ನೆಲೆ+ಅನ್+ಅರಿದಡೆ+ಏನೊ; ತಾನು=ವ್ಯಕ್ತಿಯು; ತಾನ್+ಆಗದ+ಅನ್ನಕ್ಕರ;

ತಾನು ತಾನಾಗುವುದು=ಮಾನವ ಜೀವಿಯಾಗಿ ತನ್ನನ್ನು ನಿಯಂತ್ರಿಸುತ್ತಿರುವ ಮತ್ತು ಮುನ್ನಡೆಸುತ್ತಿರುವ ನಿಸರ್‍ಗದ ನಿಯಮ ಹಾಗೂ ಸಮಾಜದ ಕಟ್ಟುಪಾಡುಗಳು ಯಾವುವು ಎಂಬುದನ್ನು ಅರಿತುಕೊಂಡು ಬಾಳುವುದು;

ಜ್ಞಾನದ ನೆಲೆಯನರಿದಡೇನೊ ತಾನು ತಾನಾಗದನ್ನಕ್ಕರ=ಅರಿವನ್ನು ತಿಳಿದುಕೊಂಡ ಮಾತ್ರಕ್ಕೆ ಎಲ್ಲವನ್ನೂ ಪಡೆದಂತಾಗುವುದಿಲ್ಲ. ಪಡೆದ ಅರಿವನ್ನು ತನ್ನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕು;

ಶರಣ=ಒಳ್ಳೆಯ ನಡೆನುಡಿಗಳಿಂದ ಬಾಳುವುದರ ಮೂಲಕ ಶಿವನನ್ನು ಒಲಿದವನು/ ಶಿವನಿಗೆ ತಲೆಬಾಗಿದವನು; ನಿಲವು=ಇರುವಿಕೆ/ರೀತಿ/ಆಲೋಚನೆ/ಚಿಂತನೆ; ಧಾರೆ=ಪ್ರವಾಹ/ ನಿರಂತರತೆ/ಎಡೆಬಿಡದೆ ಮುಂದುವರಿಯುವುದು; ಮೇರೆ=ಎಲ್ಲೆ/ಗಡಿ/ಮಿತಿ; ಉಂಟೆ=ಇದೆಯೇ; ಒಂದು ಧಾರೆ ಮೇರೆಯುಂಟೆ=ಯಾವುದೇ ಎಲ್ಲೆಯಿರುವುದಿಲ್ಲ/ ಅನಂತವಾದುದು;

ತಾನು ತಾನಾದ ಶರಣರ ನಿಲವಿಂಗೆ ಒಂದು ಧಾರೆ ಮೇರೆಯುಂಟೆ=ತನ್ನನ್ನು ತಾನು ಅರಿತುಕೊಂಡು ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿರುವ ಶರಣನ ವ್ಯಕ್ತಿತ್ವಕ್ಕೆ ಎಲ್ಲೆ ಎಂಬುದೇ ಇಲ್ಲ; ಗುಹೇಶ್ವರ=ಶಿವ/ಅಲ್ಲಮನ ಮೆಚ್ಚಿನ ದೇವರು/ಅಲ್ಲಮನ ವಚನಗಳಲ್ಲಿ ಬಳಕೆಯಾಗಿರುವ ಅಂಕಿತನಾಮ;)

೮. ಕಾಲುಗಳೆರಡೂ ಗಾಲಿ ಕಂಡಯ್ಯ
ದೇಹವೆಂಬುದೊಂದು ತುಂಬಿದ ಬಂಡಿ ಕಂಡಯ್ಯ
ಬಂಡಿಯ ಹೊಡೆವವರೈವರು ಮಾನಿಸರು
ಒಬ್ಬರಿಗೊಬ್ಬರು ಸಮವಿಲ್ಲಯ್ಯ
ಅದರಿಚ್ಚೆಯನರಿದು ಹೊಡೆಯದಿದ್ದರೆ
ಅದರಚ್ಚು ಮುರಿಯಿತ್ತು ಗುಹೇಶ್ವರ.

ಜೀವನದಲ್ಲಿ ಎಲ್ಲಾ ಬಗೆಯ ಚಟುವಟಿಕೆಗಳಿಗೆ, ಆಗುಹೋಗುಗಳಿಗೆ, ಏಳುಬೀಳುಗಳಿಗೆ ಕಾರಣವಾಗುವ ಕಣ್ಣು, ಕಿವಿ, ಮೂಗು, ತೊಗಲು, ನಾಲಿಗೆಯನ್ನು ಹತೋಟಿಯಲ್ಲಿಟ್ಟುಕೊಂಡು ಬಾಳಬೇಕಾದ ಅಗತ್ಯವನ್ನು ಶಬ್ದಚಿತ್ರವೊಂದರ ಮೂಲಕ ಈ ವಚನದಲ್ಲಿ ಹೇಳಲಾಗಿದೆ.

(ಕಾಲುಗಳ್+ಎರಡೂ; ಗಾಲಿ=ಚಕ್ರ; ಕಂಡ+ಅಯ್ಯ; ಕಂಡ=ನೋಡಿದ; ಅಯ್ಯ=ಗಂಡಸರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಕಂಡಯ್ಯ=ತಿಳಿದು ನೋಡು/ಅರಿತು ನೋಡು; ದೇಹ+ಎಂಬುದು+ಒಂದು; ದೇಹ=ಮಯ್/ಶರೀರ ಎಂಬುದು=ಎನ್ನುವುದು ; ಬಂಡಿ=ಗಾಡಿ/ಚಕ್ಕಡಿ; ತುಂಬಿದ ಬಂಡಿ=ಸರಕಿನಿಂದ ತುಂಬಿದ ಗಾಡಿ; ಹೊಡೆವವರು+ಐವರು;

ಹೊಡೆ=ಮುನ್ನಡೆಸು/ಮುಂದೆ ಮುಂದೆ ಸಾಗುವಂತೆ/ಚಲಿಸುವಂತೆ ಮಾಡು; ಹೊಡೆವವರು=ಮುನ್ನಡೆಸುವವರು/ಮುಂದೆ ಮುಂದೆ ಸಾಗುವಂತೆ ಮಾಡುವವರು ; ಐವರು=ಅಯ್ದು ಮಂದಿ; ಮಾನಿಸ=ಮಾನವ; ಮಾನವನ/ದೇಹವನ್ನು ಸರಕು ತುಂಬಿದ ಬಂಡಿಯನ್ನಾಗಿಯೂ, ಮಯ್ ಮನಗಳನ್ನು ಹತೋಟಿಯಲ್ಲಿಟ್ಟುಕೊಂಡು ಬದುಕಿನ ನಡೆನುಡಿಗಳನ್ನು ರೂಪಿಸುವ ಕಣ್ಣು, ಕಿವಿ, ಮೂಗು, ತೊಗಲು, ನಾಲಿಗೆಯೆಂಬ ಅಯ್ದು ಇಂದ್ರಿಯಗಳನ್ನು ಬಂಡಿಯನ್ನು ಮುನ್ನಡೆಸುವ ವ್ಯಕ್ತಿಗಳನ್ನಾಗಿಯೂ ಕಲ್ಪಿಸಿಕೊಳ್ಳಲಾಗಿದೆ;

ಒಬ್ಬರಿಗೆ+ಒಬ್ಬರು; ಸಮ+ಇಲ್ಲ+ಅಯ್ಯ; ಸಮ=ಒಂದೇ ಬಗೆ/ಒಂದೇ ರೀತಿ; ಒಬ್ಬರಿಗೊಬ್ಬರು ಸಮವಿಲ್ಲಯ್ಯ=ಕಣ್ಣಮುಂದಿನ ವಸ್ತುಗಳನ್ನು ಮತ್ತು ಲೋಕದಲ್ಲಿ ನಡೆಯುವ ಆಗುಹೋಗುಗಳನ್ನು ಕಾಣುತ್ತಿದ್ದಂತೆಯೇ, ಉಳಿದೆಲ್ಲ ಇಂದ್ರಿಯಗಳು ಮೋಹಕ್ಕೆ ಒಳಗಾಗಿ ಬಹುಬಗೆಯ ಒಳಮಿಡಿತಗಳಿಂದ ತುಡಿಯತೊಡಗುತ್ತವೆ. ಆಗ ಅವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ತುಂಬಾ ತೊಡಕಿನ ಕೆಲಸವಾಗುತ್ತದೆ ಎಂಬ ತಿರುಳಿನಲ್ಲಿ ಬಳಕೆಯಾಗಿವೆ;

ಅದರ+ಇಚ್ಚೆಯನ್+ಅರಿದು; ಅದರ=ಅಯ್ದು ಇಂದ್ರಿಯಗಳ; ಇಚ್ಚೆಯನ್= ಬಯಕೆಯನ್ನು/ಆಸೆಯನ್ನು/ಕಾಮನೆಯನ್ನು; ಅರಿದು=ತಿಳಿದು/ಹೊಂದಾಣಿಕೆಯನ್ನು ಮಾಡಿ ಕೊಂಡು/ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು ಎಂಬುದನ್ನು ತಿಳಿದು ; ಹೊಡೆಯದೆ+ಇದ್ದರೆ ; ಹೊಡೆಯದಿದ್ದರೆ=ಕೆಡುಕನ್ನುಂಟು ಮಾಡುವ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳಿತಿನ ನಡೆನುಡಿಗಳನ್ನು ಆಚರಣೆಯಲ್ಲಿ ತರದಿದ್ದರೆ;

ಅದರ+ಅಚ್ಚು; ಅದರ=ಗಾಡಿಯ/ಬಂಡಿಯ; ಅಚ್ಚು=ಗಾಡಿ/ಬಂಡಿಯಲ್ಲಿನ ಎರಡು ಚಕ್ರಗಳನ್ನು ಒಂದುಗೂಡಿಸಲೆಂದು ಹಾಕಿರುವ ಕಬ್ಬಿಣದ ಉಪಕರಣ/ಇರಚಿ; ಮುರಿ=ತುಂಡಾಗು; ಮುರಿಯಿತ್ತು=ತುಂಡಾಗುತ್ತದೆ; ಅದರಚ್ಚು ಮುರಿಯಿತ್ತು=ಮಾನವನ ಬದುಕು ಮುನ್ನಡೆಯದೆ, ದುರಂತದಲ್ಲಿ ಕೊನೆಗೊಳ್ಳುತ್ತದೆ ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ ; ರೂಪಕವೆಂದರೆ ಶಬ್ದಗಳ ಮೂಲಕವೇ ಯಾವುದಾದರೊಂದು ಬಗೆಯ ಪ್ರಸಂಗವನ್ನು ಇಲ್ಲವೇ ಸಂಗತಿಯನ್ನು ಓದುಗನ/ಕೇಳುಗನ ಕಣ್ಣಿಗೆ ಕಟ್ಟುವಂತೆ ಅಂದರೆ ಮನದಲ್ಲಿ ಮೂಡುವಂತೆ ಬಣ್ಣಿಸುವುದು.)



೯. ಕಾಲೇ ಕಂಭಗಳಾದವೆನ್ನ
ದೇಹವೇ ದೇಗುಲವಾಯಿತ್ತಯ್ಯ
ಎನ್ನ ನಾಲಗೆಯೆ ಘಂಟೆ, ಶಿರ ಸುವರ್ಣದ ಕಳಶ ಇದೇನಯ್ಯ
ಸರವೆ ಲಿಂಗಕ್ಕೆ ಸಿಂಹಾಸನವಾಗಿದ್ದಿತ್ತಯ್ಯ
ಗುಹೇಶ್ವರ ನಿಮ್ಮ ಪ್ರಾಣಲಿಂಗಪ್ರತಿಷ್ಠೆ ಪಲ್ಲಟವಾಗದಂತಿದ್ದೆನಯ್ಯ.

ಅಲ್ಲಮನು ರೂಪಕದ ನುಡಿಗಳ ಮೂಲಕ ಈ ವಚನದಲ್ಲಿ ತನ್ನ ದೇಹದ ಅಂಗಗಳನ್ನು ದೇಗುಲ ಶಿಲ್ಪದ ರಚನೆಯೊಂದಿಗೆ ಹೋಲಿಸುತ್ತಾ, ತನ್ನ ದೇಹವೇ ದೇವಾಲಯವಾಗಿರುವುದನ್ನು ಹೇಳಿದ್ದಾನೆ.

(ಕಾಲೇ=ನನ್ನ ಎರಡು ಕಾಲುಗಳು ; ಕಂಭಗಳ್+ಆದವು+ಎನ್ನ ; ಕಂಭ=ಮಾಳಿಗೆಗೆ ಆಸರೆಯಾಗಿ/ಒದೆಯಾಗಿ/ಊರೆಯಾಗಿ ನಿಲ್ಲಿಸುವ ಕಲ್ಲಿನ ಸಾಮಗ್ರಿ/ಉಪಕರಣ; ಆದವು=ಆಗಿರುವುವು; ಎನ್ನ=ನನ್ನ; ದೇಹ=ಮಯ್/ಶರೀರ; ದೇಗುಲ+ ಆಯಿತ್ತು+ಅಯ್ಯ; ದೇವ+ಕುಲ=ದೇಗುಲ; ದೇವ=ಜೀವನದಲ್ಲಿ ಬರುವ ಎಡರುತೊಡರುಗಳನ್ನು ನಿವಾರಿಸಿ, ತಮಗೆ ಒಳಿತನ್ನು ಮಾಡಿ ಕಾಪಾಡುವ ವ್ಯಕ್ತಿಯನ್ನು/ಶಕ್ತಿಯನ್ನು 'ದೇವ/ದೇವರು' ಎಂದು ಮಾನವ ಸಮುದಾಯ ನಂಬಿದೆ; ಕುಲ=ವಾಸದ ಜಾಗ/ಮನೆ/ನೆಲೆ; ದೇಗುಲ=ದೇವರ ವಿಗ್ರಹ ಇರುವ ಮಂದಿರ; ಆಯಿತ್ತು=ಆಗಿದೆ; ಅಯ್ಯ=ಗಂಡಸರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ;

ಘಂಟೆ=ಕಂಚು/ಹಿತ್ತಾಳೆ ಮೊದಲಾದ ಲೋಹಗಳಿಂದ ತಯಾರಿಸಿದ ಉಪಕರಣ. ದೇವರ ವಿಗ್ರಹಕ್ಕೆ ಮಂಗಳಾರತಿಯನ್ನು ಮಾಡುವಾಗ ಇದನ್ನು ಬಾರಿಸುವುದರ ಮೂಲಕ ನಾದವನ್ನು ಹೊರಡಿಸುತ್ತಾರೆ/ಗಂಟೆ; ಶಿರ=ತಲೆ ; ಸುವರ್ಣ=ಚಿನ್ನ/ಹೊನ್ನು/ಬಂಗಾರ; ಕಳಶ=ದೇಗುಲದ ಗೋಪುರದ ತುತ್ತತುದಿಯಲ್ಲಿ ಕಂಡುಬರುವ ಕಂಚು/ಹಿತ್ತಾಳೆ/ ಚಿನ್ನದ ತಗಡಿನ ಹೊದಿಕೆಯಿಂದ ಕೂಡಿದ ವಸ್ತು ; ಇದು+ಏನ್+ಅಯ್ಯ ; ಸರ=ಉಲಿ/ ದನಿ/ಶಿವನ ಹೆಸರಿನ ಉಚ್ಚಾರಣೆ; ಸಿಂಹಾಸನ+ಆಗಿ+ಇದ್ದಿತ್ತು+ಅಯ್ಯ ; ಸಿಂಹ+ಆಸನ ; ಸಿಂಹ=ಕಾಡಿನಲ್ಲಿರುವ ಒಂದು ಬಗೆಯ ಪ್ರಾಣಿ; ಆಸನ=ಗದ್ದುಗೆ/ಕುಳಿತುಕೊಳ್ಳಲು ಬಳಸುವ ವಸ್ತು ; ಸಿಂಹಾಸನ=ಕಾಡಿನ ರಾಜನೆಂದು ಹೆಸರು ಪಡೆದಿರುವ ಸಿಂಹದ ಮೊಗದ ಕೆತ್ತನೆಯಿಂದ ಕೂಡಿರುವ ಗದ್ದುಗೆ ;

ಪ್ರಾಣಲಿಂಗ=ಶಿವಶರಣಶರಣೆಯರ ಮಯ್-ಮನಗಳಲ್ಲಿ ನೆಲೆಸಿರುವ ಲಿಂಗ/ ಶಿವಶರಣಶರಣೆಯರ ಒಳಿತಿನ ನಡೆನುಡಿಗಳಲ್ಲಿ ಒಂದಾಗಿ ಬೆರೆತಿರುವ ಲಿಂಗ;

ಪ್ರತಿಷ್ಠೆ=ಹಿರಿಮೆ/ದೊಡ್ಡತನ/ಕೀರ್ತಿ/ಮರ್ಯಾದೆ/ಸಾಮಾಜಿಕ ಅಂತಸ್ತು; ಪಲ್ಲಟ+ಆಗದ+ಅಂತು+ಇದ್ದೆನ್+ಅಯ್ಯ; ಪಲ್ಲಟ=ಬದಲಾವಣೆ/ಮಾರ್ಪಾಟು/ತಲೆಕೆಳಗು; ಅಂತು=ಹಾಗೆ ; ಪ್ರತಿಷ್ಠೆ ಪಲ್ಲಟವಾಗದಂತೆ=ಗುಹೇಶ್ವರನ ಹಿರಿಮೆಗೆ ಹಾನಿ ತಟ್ಟದಂತೆ/ಕೆಟ್ಟಹೆಸರು ಬರದಂತೆ / ಕಳಂಕ ಬಾರದಂತೆ ; ಇದ್ದೆನ್+ಅಯ್ಯ; ಇದ್ದೆನ್=ಇರುವೆನು; ಇದ್ದೆನಯ್ಯ=ನಡೆದುಕೊಳ್ಳುತ್ತಿದ್ದೇನೆ.)



೧೦. ಕುಲಮದ ಛಲಮದ ವಿದ್ಯಾಮದದವರ ತೋರದಿರಾ
ಅವರ ಆರೂಢ ಪದವಿಯನೆನಗೆ ತೋರದಿರಾ
ಅವರ ಗರುವ ಗಂಭೀರತನವನೆನಗೆ ತೋರದಿರಾ
ಶಮೆ ದಮೆಯುಳಿದು ದಶಮುಖ ನಿಂದು
ಲಿಂಗದಲ್ಲಿ ಲೀಯವಾದವರನಲ್ಲದೆ ಎನಗೆ ತೋರದಿರಾ ಗುಹೇಶ್ವರ.

"ನಾವೇ ಎಲ್ಲವನ್ನೂ ತಿಳಿದವರು / ನಾವೇ ಎಲ್ಲರಿಗಿಂತ ದೊಡ್ಡವರು / ನಮ್ಮಿಂದಲೇ ಎಲ್ಲವೂ ನಡೆಯುತ್ತಿದೆ" ಎಂಬ ಮೇಲರಿಮೆಯ ಒಳಮಿಡಿತದಿಂದ ಕೂಡಿ, ಕುಲಮದ / ಚಲಮದ / ವಿದ್ಯಾಮದದಿಂದ ಮೆರೆಯುತ್ತಾ, ಇತರರನ್ನು ಕೀಳಾಗಿ ಕಾಣುವಂತಹ ವ್ಯಕ್ತಿಗಳ ನಡೆನುಡಿಗಳನ್ನು ಈ ವಚನದಲ್ಲಿ ಅಲ್ಲಗಳೆಯಲಾಗಿದೆ.

"ಕುಲಮದ" ಎಂದರೆ ವ್ಯಕ್ತಿಯು ತಾನು ಹುಟ್ಟಿ ಬೆಳೆದು ಬಾಳುತ್ತಿರುವ ಜಾತಿ, ಮತ, ವಂಶ, ಮನೆತನವು ಮೇಲಿನದು, ದೊಡ್ಡದು, ಪವಿತ್ರವಾದುದು ಎಂಬ ತಿಳಿಗೇಡಿತನದ ಒಳಮಿಡಿತಕ್ಕೆ ಒಳಗಾಗಿ, ಸಮಾಜದಲ್ಲಿರುವ ಇನ್ನಿತರ ಜಾತಿ, ಮತ, ವಂಶ, ಮನೆತನಕ್ಕೆ ಸೇರಿದ ಜನಸಮುದಾಯವನ್ನು ಕೀಳೆಂದು ಕಡೆಗಣಿಸಿ, ಸೊಕ್ಕಿನಿಂದ ಕೊಬ್ಬಿ ಮೆರೆಯುವ ನಡೆನುಡಿ. ಇನ್ನಿತರ ಜಾತಿ, ಮತಗಳಿಗೆ ಸೇರಿದ ವ್ಯಕ್ತಿಗಳು ವಿದ್ಯೆಯನ್ನು ಪಡೆದು, ಅರಿವನ್ನು ಹೊಂದಿ, ಒಳ್ಳೆಯ ಗದ್ದುಗೆಗಳನ್ನೇರಿ, ಆಸ್ತಿಪಾಸ್ತಿ, ಹಣಕಾಸನ್ನು ಸಂಪಾದಿಸಿ ಸಮಾಜದಲ್ಲಿ ತಲೆಯೆತ್ತಿ ಬಾಳುವುದನ್ನು ಕುಲಮದವುಳ್ಳ ವ್ಯಕ್ತಿಗಳು ಸಹಿಸುವುದಿಲ್ಲ. ಇದಕ್ಕಾಗಿ ಜಾತಿ, ಮತ ದೇವರ ಹೆಸರಿನಲ್ಲಿ ಇಲ್ಲಸಲ್ಲದ, ಸುಳ್ಳಿನಿಂದ ಕೂಡಿದ, ಕಟ್ಟುಕತೆಯ ಸಂಗತಿಗಳನ್ನು ಹರಡುತ್ತಾ, ನೂರೆಂಟು ಬಗೆಯ ಜಾತಿ ಮತಗಳಿಂದ ಹೆಣೆದುಕೊಂಡು ರೂಪುಗೊಂಡಿರುವ ಸಮಾಜದ ಜನಸಮುದಾಯಗಳ ಮನದಲ್ಲಿ ಪರಸ್ಪರ ಅನುಮಾನದ, ಅಪನಂಬಿಕೆಯ, ಹಗೆತನದ ಬೆಂಕಿ ಹತ್ತಿ ಉರಿಯುವಂತೆ ಮಾಡುತ್ತಾ, ಸಮಾಜದಲ್ಲಿನ ಜನತೆಯು ಒಗ್ಗಟ್ಟಿನಿಂದ ಜತೆಗೂಡಿ ನೆಮ್ಮದಿಯಿಂದ ಬದುಕನ್ನು ನಡೆಸದಂತಹ ಹುನ್ನಾರಗಳನ್ನು ಹೂಡುತ್ತಿರುತ್ತಾರೆ.

"ಛಲಮದ" ಎಂದರೆ ವ್ಯಕ್ತಿಯು ತಾನು ತಿಳಿದುಕೊಂಡಿರುವುದು /ಹೇಳುತ್ತಿರುವುದು/ ಮಾಡುತ್ತಿರುವುದೇ ಸರಿ ಎಂಬ ಒಳಮಿಡಿತದಿಂದ ಕೂಡಿ, ಇತರರು ನೀಡುವ ಯಾವುದೇ ಬಗೆಯ ಸಲಹೆ /ಸೂಚನೆ/ತಿಳುವಳಿಕೆಯ ಮಾತುಗಳಿಗೆ ಬೆಲೆಕೊಡದ ನಡೆನುಡಿ. ಚಲಮದವುಳ್ಳ ವ್ಯಕ್ತಿಗಳು ತಮ್ಮ ಹಟಮಾರಿತನ ನಡೆನುಡಿಗಳಿಂದ "ತಾನು/ತನ್ನ ಕುಟುಂಬ/ ತನ್ನ ಸಮಾಜ ಹಾಳಾದರೂ ಲೆಕ್ಕಿಸದೆ, ಇತರರಿಗೆ ಕೇಡನ್ನು ಬಗೆಯಲು" ಮುನ್ನುಗ್ಗುತ್ತಾರೆ.

"ವಿದ್ಯಾಮದ" ಎಂದರೆ ವ್ಯಕ್ತಿಯು ಅಕ್ಕರದ ಓದು ಬರಹದ ಕಲಿಕೆಯಿಂದ ಪಡೆದ ಅರಿವಿನಿಂದ ತನಗೆ ಮತ್ತು ಸಹಮಾನವರಿಗೆ ಒಳಿತನ್ನು ಉಂಟುಮಾಡುವ ಕೆಲಸಗಳನ್ನು

ಮಾಡದೆ, ತಾನೊಬ್ಬನೇ ಹೆಚ್ಚಿನ ತಿಳುವಳಿಕೆಯುಳ್ಳವನು ಎಂಬ ಒಳಮಿಡಿತದಿಂದ ಕೂಡಿ, ಇನ್ನುಳಿದವರನ್ನು ತಿಳಿಗೇಡಿಗಳೆಂದು ಕಡೆಗಣಿಸುವ ನಡೆನುಡಿ. ವಿದ್ಯಾಮದವುಳ್ಳವರು ತಾವು ಕಲಿತ ವಿದ್ಯೆಯಿಂದ ಸಹಮಾನವರನ್ನು ವಂಚಿಸುವ ಕಲೆಯಲ್ಲಿ ಪರಿಣತರಾಗಿ ಜನಸಮುದಾಯಗಳ ಬದುಕನ್ನು ಹಾಳುಮಾಡುವುದಲ್ಲದೇ, ಇತರರನ್ನು ಹೆಜ್ಜೆಹೆಜ್ಜೆಗೂ ಅಪಮಾನಗೊಳಿಸುತ್ತಿರುತ್ತಾರೆ.

ನೆಮ್ಮದಿಯ ಬದುಕಿಗೆ ಅಗತ್ಯವಾದ ಅನ್ನ, ಬಟ್ಟೆ ವಸತಿ, ಕೆಲಸ, ಸಂಪತ್ತು, ಆರೋಗ್ಯವನ್ನು ಪಡೆದು ಒಲವು=ನಲಿವುಗಳಿಂದ ಜತೆಗೂಡಿ ಬಾಳಬೇಕಾದ ಜನಸಮುದಾಯಕ್ಕೆ ಎಲ್ಲಾ ರೀತಿಯಿಂದಲೂ ಕೇಡನ್ನುಂಟುಮಾಡುವ ಕುಲಮದ, ಚಲಮದ, ವಿದ್ಯಾಮದವುಳ್ಳ ವ್ಯಕ್ತಿಗಳಿಂದ ದೂರವಿರಬೇಕೆಂಬ ಎಚ್ಚರಿಕೆಯನ್ನು ಈ ವಚನದಲ್ಲಿ ನೀಡಲಾಗಿದೆ.

ಮಯ್ ಮನಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳ್ಳೆಯ ನಡೆನುಡಿಗಳಿಂದ ತಮಗೆ ಮತ್ತು ಸಮಾಜದಲ್ಲಿನ ಸಹಮಾನವರಿಗೆ ಒಳಿತನ್ನುಂಟು ಮಾಡುವ ವ್ಯಕ್ತಿಗಳನ್ನು ನೋಡುವುದು ಮತ್ತು ಅಂತಹವರೊಡನೆ ಮಾತ್ರ ಒಡನಾಡುವುದು ಒಳ್ಳೆಯದೆಂಬ ಇಂಗಿತವನ್ನು ಈ ವಚನದಲ್ಲಿ ಸೂಚಿಸಲಾಗಿದೆ.

(ಕುಲ=ಜಾತಿ/ಮತ/ವಂಶ/ಮನೆತನ ; ಮದ=ಸೊಕ್ಕು/ಗರ್ವ; ಕುಲಮದ=ತನ್ನ ಜಾತಿ/ವಂಶ/ಮನೆತನವೇ ದೊಡ್ಡದು ಎಂಬ ಮೇಲರಿಮೆಯಿಂದ ಕೂಡಿದ ಸೊಕ್ಕಿನ ನಡೆನುಡಿ; ಛಲ=ತಾನು ಅಂದುಕೊಂಡಿದ್ದನ್ನು ಅದರ ಒಳಿತು/ಕೆಡುಕಿನ ಪರಿಣಾಮಗಳನ್ನು ಲೆಕ್ಕಿಸದೆ ಮಾಡಿ ಮುಗಿಸಬೇಕೆನ್ನುವ ನಡೆನುಡಿ; ಛಲಮದ=ತನ್ನ ಅನಿಸಿಕೆಯಂತೆ ಎಲ್ಲವೂ ನಡೆಯಬೇಕೆಂಬ ಮೊಂಡುತನದ ನಡೆನುಡಿ; ವಿದ್ಯಾ=ವಿದ್ಯೆ/ಅರಿವು/ತಿಳುವಳಿಕೆ/ಅಕ್ಕರದ ಓದು ಬರಹ; ವಿದ್ಯಾಮದ=ಅಕ್ಕರದ ಓದುಬರಹದಿಂದ ತಾನು ಇತರರಿಗಿಂತ ಹೆಚ್ಚು ತಿಳಿದವನು ಎಂಬ ಸೊಕ್ಕಿನ ನಡೆನುಡಿ ; ತೋರದಿರು+ಆ; ತೋರದಿರು=ತೋರಬೇಡ/ನನ್ನ ಕಣ್ಣಿಗೆ ಕಾಣುವಂತೆ ಮಾಡಬೇಡ ;

ಆರೂಢ=ಪಡೆದಿರುವ/ಹೊಂದಿರುವ; ಪದವಿಯನ್+ಎನಗೆ ; ಪದವಿ=ಹುದ್ದೆ/ಗದ್ದುಗೆ ; ಆರೂಢ ಪದವಿ=ಸಮಾಜದಲ್ಲಿ ಏರಿರುವಂತಹ ದೊಡ್ಡ ಗದ್ದುಗೆ/ಮೇಲಿನ ಅಂತಸ್ತು ; ಎನಗೆ=ನನಗೆ ; ಗರುವ=ಸೊಕ್ಕು/ಹೆಮ್ಮೆ ; ಗಂಭೀರತನವನ್+ಎನಗೆ ; ಗಂಭೀರತನ=ಜನರೊಡನೆ ಹೆಚ್ಚು ಮಾತುಕತೆಗಳನ್ನಾಡದೆ/ಒಲವು ನಲಿವುಗಳಿಂದ ಬೆರೆಯದೆ ಗತ್ತಿನಿಂದ ಕೂಡಿದ ನಡೆನುಡಿ ; ಶಮೆ+ದಮೆ+ಉಳಿದು ; ಶಮೆ= ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ; ದಮೆ=ಕಣ್ಣು/ಕಿವಿ/ಮೂಗು /ತೊಗಲು/ನಾಲಿಗೆಯಿಂದ ಉಂಟಾಗುವ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು ಬಾಳುವುದು ;

ಉಳಿದು=ಹೊಂದಿ/ಪಡೆದು ; ದಶ=ಹತ್ತು ; ಮುಖ=ದಿಕ್ಕು/ದಿಶೆ/ಎಡೆ ; ದಶಮುಖ= ಎಲ್ಲೆಡೆಗಳಲ್ಲಿಯೂ /ಎಲ್ಲಾ ಕಡೆಗಳಲ್ಲಿಯೂ ; ನಿಂದು=ನೆಲೆಸಿ/ಹರಡಿ ; ಲಿಂಗ+ಅಲ್ಲಿ; ಲೀಯ+ಆದವರನ್+ಅಲ್ಲದೆ ;

ಲಿಂಗ=ಈಶ್ವರ/ಒಳ್ಳೆಯ ನಡೆನುಡಿಗಳಿಗೆ ಪ್ರೇರಣೆಯನ್ನು ನೀಡುವ ದೇವರು ; ಲೀಯ=ಬೆರೆಯುವಿಕೆ/ಕೂಡಿಕೊಳ್ಳುವಿಕೆ ; ಲಿಂಗದಲ್ಲಿ ಲೀಯವಾದವರು=ಒಳ್ಳೆಯತನದ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವುದನ್ನೇ ಲಿಂಗ/ದೇವರೆಂದು ನಂಬಿ ಬಾಳುತ್ತಿರುವವರು; ಅಲ್ಲದೆ=ಹೊರತುಪಡಿಸಿ/ಬಿಟ್ಟು ; ಎನಗೆ ತೋರದಿರಾ=ನನಗೆ ತೋರಿಸಬೇಡ/ಕಾಣಿಸಬೇಡ.)



೧೧. ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವರು
ವೀರರೂ ಅಲ್ಲ ಧೀರರೂ ಅಲ್ಲ
ಇದು ಕಾರಣ ನೆರೆ ಮೂರುಲೋಕವೆಲ್ಲವು
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ
ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರೋ.

ತಾವು ಮಾಡಬೇಕಾದ ಕೆಲಸವನ್ನು ಒಲವು ನಲಿವುಗಳಿಂದ ಸರಿಯಾಗಿ ಮಾಡದೆ, ಹತ್ತಾರು ಬಗೆಯ ನೆಪಗಳನ್ನೊಡ್ಡಿ, ಕಾಲ ಕಳೆಯುವಂತಹ ವ್ಯಕ್ತಿಗಳ ನಡೆನುಡಿಗಳನ್ನು ಈ ವಚನದಲ್ಲಿ ಟೀಕಿಸಲಾಗಿದೆ.

ದೂರದ ಪಯಣಕ್ಕಾಗಿ ಇಲ್ಲವೇ ಕಾಳಗದ ಕಣಕ್ಕೆ ತೆರಳುವುದಕ್ಕಾಗಿ ಕೊಟ್ಟಿರುವ ಕುದುರೆಯನ್ನು ಹತ್ತಿ, ಅದನ್ನು ಹತೋಟಿಯಲ್ಲಿಟ್ಟುಕೊಂಡು ಸವಾರಿ ಮಾಡುತ್ತ ಮುನ್ನಡೆಸುವ ಕುಶಲತೆ ಹಾಗೂ ತಲುಪಬೇಕಾದ ಎಡೆಯತ್ತ ಹೋಗುವ ಹಂಬಲವಿಲ್ಲದ ವ್ಯಕ್ತಿಗಳು, ತಮ್ಮ ಕಣ್ಣಮುಂದಿರುವ ಕುದುರೆಯನ್ನು "ಸವಾರಿಗೆ ಲಾಯಕ್ಕಾಗಿಲ್ಲ" ಎಂದು ಆರೋಪಿಸಿ, ಕುದುರೆಯ ಮೊಗಕ್ಕೆ ಹಾಕುವ ಕಡಿವಾಣ ಮತ್ತು ಅದರ ಬೆನ್ನಿನ ಮೇಲೆ ಹಾಕಬೇಕಾದ ಜೀನನ್ನು ತಮ್ಮ ಹೆಗಲ ಮೇಲೆ ಹೊತ್ತುಕೊಂಡು ಮತ್ತೊಂದು ಕುದುರೆಗಾಗಿ ಹುಡುಕಾಡುತ್ತ ಅಲೆಯುತ್ತಿರುವ ಸಂಗತಿಯೊಂದನ್ನು ಒಂದು ರೂಪಕವನ್ನಾಗಿ ಅಲ್ಲಮನು ಚಿತ್ರಿಸಿದ್ದಾನೆ. ಈ ಶಬ್ದಚಿತ್ರವು "ವ್ಯಕ್ತಿಗಳು ತಮ್ಮ ಮೇಲಿನ ಹೊಣೆಗಾರಿಕೆಯಿಂದ ಜಾರಿಕೊಂಡು ತಿಳಿಗೇಡಿತನದಿಂದ ನಡೆದುಕೊಳ್ಳುವುದನ್ನು" ಸೂಚಿಸುತ್ತದೆ.

ಜಗತ್ತಿನಲ್ಲಿ ನಿತ್ಯವೂ ನೂರೆಂಟು ಬಗೆಯ ಕೆಲಸಗಳಲ್ಲಿ ತೊಡಗಿರುವ ಜನರಲ್ಲಿ ಕೆಲವರು, ತಾವು ಮಾಡುತ್ತಿರುವ ಕೆಲಸದಲ್ಲಿ ತಮ್ಮ ಮಯ್ ಮನಗಳನ್ನು ಇಡಿಯಾಗಿ ತೊಡಗಿಸದೆ, ಅಸಡ್ಡೆ ಮತ್ತು ಸೋಮಾರಿತನದಿಂದ ಕೆಲಸವನ್ನು ಹದಗೆಡಿಸುತ್ತಾರೆ. ಇದಕ್ಕೆ ಬದಲಾಗಿ ಮತ್ತೊಂದು ಕೆಲಸವನ್ನು ಹೆಸರಿಸುತ್ತಾ, ಅದರ ಕಡೆಗೆ ಒಲವನ್ನು ತೋರಿಸುತ್ತಾ "ಆ ಕೆಲಸ ದೊರೆತಿದ್ದರೆ ತುಂಬಾ ಚೆನ್ನಾಗಿ ಮಾಡುತ್ತಿದ್ದೆ" ಎಂದು ಹೇಳಿಕೊಳ್ಳುವುದನ್ನು ಪದೇ ಪದೇ ನಾವೆಲ್ಲರೂ ಕೇಳುತ್ತಿರುತ್ತೇವೆ. ಈ ಬಗೆಯ ಮಾತುಗಳನ್ನು ಕೆಲವೊಮ್ಮೆ ನಾವು ಮಾಡಬೇಕಾಗಿರುವ ಕೆಲಸದ ಬಗೆಗೂ ನಾವೇ ಆಡಿಕೊಳ್ಳುತ್ತಿರುತ್ತೇವೆ.

ತಮ್ಮ ಬದುಕು, ಸಹಮಾನವರ ಮತ್ತು ಸಮಾಜದ ಒಳಿತಿನ ಬಗ್ಗೆ ಕಾಳಜಿಯಿಲ್ಲದ ಜನರು ತಾವು ಮಾಡಬೇಕಾಗಿರುವ ಕೆಲಸದಲ್ಲಿ ಕುಂದುಕೊರತೆಗಳನ್ನು ಹುಡುಕಿ, ಅದನ್ನು ಕಯ್ ಬಿಡುವುದಕ್ಕಾಗಿ ತಮ್ಮ ಸುತ್ತಮುತ್ತಲಿನ ನಿಸರ್ಗದ ಪರಿಸರ, ಸಾಮಾಜಿಕ ವಾತಾವರಣ ಇಲ್ಲವೇ ಹಣಕಾಸಿನ ಸಂಗತಿಗಳಲ್ಲಿರುವ ಅಡೆತಡೆಗಳನ್ನು ನೆಪಗಳನ್ನಾಗಿ ಮುಂದೊಡ್ಡುವುದರಲ್ಲಿ ಕಡುಜಾಣರಾಗಿರುತ್ತಾರೆಯೇ ಹೊರತು, ತಮ್ಮ ಪಾಲಿನ ಕೆಲಸವನ್ನು ಚೆನ್ನಾಗಿ ಮತ್ತು ಸರಿಯಾಗಿ ಮಾಡುವುದಕ್ಕಾಗಿ ತಮ್ಮಲ್ಲಿರುವ ಜಾಣತನ, ಕುಶಲತೆ, ಕಸುವನ್ನು ಒಗ್ಗೂಡಿಸಿ ದುಡಿಯಬೇಕೆಂಬ ಮನಸ್ಸನ್ನು ಹೊಂದಿರುವುದಿಲ್ಲ.

ಶಿವಶರಣಶರಣೆಯರ ಪಾಲಿಗೆ "ಲಿಂಗ" ಎಂದರೆ ಕಲ್ಲು/ಮಣ್ಣು/ಲೋಹಗಳಿಂದ ರೂಪುಗೊಂಡಿರುವ ಶಿವನಲ್ಲ; ಸಮಾಜದಲ್ಲಿನ ಸಹಮಾನವರಿಗೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳನ್ನೇ ಲಿಂಗರೂಪಿಯಾದ ಶಿವನೆಂದು ಅವರು ನಂಬಿದ್ದರು. ಆದುದರಿಂದಲೇ ಲಿಂಗದ ಬಗೆಗಿನ ಒಲವಿಗೆ/ಪೂಜೆಗೆ/ನೆನಪಿಗೆ ವ್ಯಕ್ತಿಗಳ ಸಾಮಾಜಿಕ ನಡೆನುಡಿಗಳನ್ನು ತಳಕುಹಾಕಿದ್ದರು/ಹೆಣೆದಿದ್ದರು. ತಾವು ಮಾಡಬೇಕಾದ ಕೆಲಸವನ್ನು ಕಡೆಗಣಿಸುವ ವ್ಯಕ್ತಿಗಳು ಲಿಂಗದ ಸ್ವರೂಪವನ್ನಾಗಲಿ/ಲಿಂಗದ ಒಳಿತಿನ ಮೊಗವನ್ನಾಗಲಿ ತಿಳಿಯಲಾರರು ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ತಮ್ಮ ಪಾಲಿನ ಕೆಲಸವನ್ನು ಕಡೆಗಣಿಸುವವರನ್ನು ಕುರಿತು "ಗುಹೇಶ್ವರನೆಂಬ ಲಿಂಗವನು ಅವರೆತ್ತ ಬಲ್ಲರೋ" ಎಂದು ಕಟುವಾಗಿ ಟೀಕಿಸಲಾಗಿದೆ.

(ಕೊಟ್ಟ=ನೀಡಿದ; ಕುದುರೆ+ಅನ್+ಏರಲ್+ಅರಿಯದೆ; ಅನ್=ಅನ್ನು; ಏರಲ್=ಹತ್ತಿ ಸವಾರಿ ಮಾಡಲು; ಅರಿ=ತಿಳಿ; ಅರಿಯದೆ=ತಿಳಿಯದೆ/ಕುಶಲತೆಯಿಲ್ಲದೆ/ ಚಾಕಚಕ್ಯತೆಯಿಲ್ಲದೆ; ಮತ್ತು+ಒಂದು; ಮತ್ತೊಂದು=ಬೇರೊಂದನ್ನು/ಇನ್ನೊಂದನ್ನು; ಬಯಸು=ಇಚ್ಚಿಸು/ಕೇಳು; ವೀರ=ಕೆಚ್ಚೆದೆಯುಳ್ಳವನು/ಕಸುವುಳ್ಳವನು; ಧೀರ=ಎದೆಗಾರಿಕೆಯುಳ್ಳವನು/ದಿಟ್ಟತನವುಳ್ಳವನು; ನೆರೆ=ಇಡಿಯಾಗಿ/ಸಂಪೂರ್ಣವಾಗಿ/ ಎಲ್ಲವನ್ನು ಒಳಗೊಂಡು;

ಮೂರುಲೋಕ+ಎಲ್ಲವು; ಮೂರುಲೋಕ=ದೇವಲೋಕ/ಭೂಲೋಕ/ ಪಾತಾಳಲೋಕ ಎಂಬ ಮೂರು ಲೋಕಗಳು. ಮಾನವರು ನೆಲೆಸಿರುವ ಭೂಲೋಕದ ಕೆಳಗೆ ನಾಗದೇವತೆಗಳು ನೆಲೆಸಿರುವ ಪಾತಾಳಲೋಕ ಮತ್ತು ಭೂಲೋಕದ ಮೇಲೆ ಇಂದ್ರ ಮೊದಲಾದ ದೇವತೆಗಳು ನೆಲೆಸಿರುವ ದೇವಲೋಕವಿದೆ ಎಂಬ ಕಲ್ಪನೆಯು

ಜನಮನದಲ್ಲಿತ್ತು; ಹಲ್ಲಣ=ಜೀನು/ಕುದುರೆಯ ಬೆನ್ನ ಮೇಲೆ ಸವಾರನು ಕುಳಿತುಕೊಳ್ಳಲು ನೆರವಾಗಲು ತಯಾರಿಸಿರುವ ತೊಗಲಿನ ವಸ್ತು; ಬಳಲುತ್ತ+ಐದಾರೆ; ಬಳಲು=ಆಯಾಸಗೊಳ್ಳುವುದು/ದಣಿಯುವುದು; ಐದಾರೆ=ಎಯ್ದಾರೆ>ಅಯ್ದಾರೆ=ಇದ್ದಾರೆ;

ಬಳಲುತ್ತೈದಾರೆ=ದಣಿದು ಸುಸ್ತಾಗುತ್ತಿದ್ದಾರೆ/ಆಯಾಸದಿಂದ ಬಸವಳಿಯುತ್ತಿದ್ದಾರೆ; ಗುಹೇಶ್ವರನ್+ಎಂಬ; ಲಿಂಗ+ಅನ್+ ಅವರ್+ಎತ್ತ; ಗುಹೇಶ್ವರ=ಶಿವ; ಎತ್ತ=ಯಾವ ಕಡೆಯಿಂದ/ರೀತಿಯಿಂದ; ಬಲ್ಲ=ತಿಳಿ/ಅರಿ; ಬಲ್ಲರೋ=ತಿಳಿದಿದ್ದಾರೆಯೋ/ ಅರಿತಿದ್ದಾರೆಯೋ; ಎತ್ತ ಬಲ್ಲರೋ=ಯಾವ ರೀತಿಯಲ್ಲಿ ತಾನೆ ತಿಳಿಯಬಲ್ಲರು).



೧೨. ಕ್ರಿಯಾಮಥನವಿಲ್ಲದೆ ಕಾಣ ಬಂದುದೇ
ಇಕ್ಷುವಿನೊಳಗಣ ಮಧುರ
ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ತಿಲದೊಳಗಣ ತೈಲ
ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ಕ್ಷೀರದೊಳಗಣ ಘೃತ
ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ಕಾಷ್ಠದೊಳಗಣ ಅಗ್ನಿ
ಇದು ಕಾರಣ ಗೊಹೇಶ್ವರ ಲಿಂಗವ ತನ್ನೊಳರಿದೆನೆಂಬ
ಮಹಂತಂಗೆಲ್ಲಡೆ
ಸತ್ಕ್ರಿಯಾಚರಣೆಯೇ ಸಾಧನ ಕಾಣೆ ಭೋ.

ಕಬ್ಬಿನ ಜಲ್ಲೆಯನ್ನು ಗಾಣಕ್ಕೆ ಕೊಟ್ಟು ಅರೆದಾಗ ಸಿಹಿಯಾದ ಕಬ್ಬಿನ ಹಾಲು ದೊರಕುತ್ತದೆ; ಎಳ್ಳಿನ ಕಾಳುಗಳನ್ನು ಗಾಣದಿಂದ ಅರೆದಾಗ ಎಣ್ಣೆಯು ದೊರಕುತ್ತದೆ; ಹಾಲಿಗೆ ಹೆಪ್ಪನ್ನು ಹಾಕಿ ತಯಾರಿಸಿದ ಮೊಸರನ್ನು ಕಡೆದಾಗ ಬರುವ ಬೆಣ್ಣೆಯನ್ನು ಕಾಯಿಸಿದರೆ ತುಪ್ಪ ದೊರೆಯುತ್ತದೆ ; ಒಣಗಿದ ಮರದ ತುಂಡಿಗೆ ಸುಡುವ ಕಿಡಿಗಳನ್ನು ಇಲ್ಲವೇ ಉರಿಯನ್ನು ಮುಟ್ಟಿಸಿದಾಗ ಒಣಗಿದ ಮರದ ತುಂಡು ಬೆಂಕಿಯನ್ನು ಕಾರತೊಡಗುತ್ತದೆ; ಇಲ್ಲೆಲ್ಲಾ ಅರೆಯುವ, ಕಡೆಯುವ, ಮುಟ್ಟಿಸುವ ಕ್ರಿಯೆಯು ನಡೆಯದಿದ್ದರೆ ಏನನ್ನೂ ಪಡೆಯಲಾಗುತ್ತಿರಲಿಲ್ಲ. ಈ ಸಂಗತಿಗಳ ಮೂಲಕ ಯಾವುದೇ ಒಬ್ಬ ವ್ಯಕ್ತಿಯು ತಾನು ಪಡೆದ ಅರಿವನ್ನು ತನ್ನ ದಿನನಿತ್ಯದ ನಡೆನುಡಿಗಳಲ್ಲಿ ಅಳವಡಿಸಿಕೊಂಡು ಆಚರಣೆಗೆ ತಂದಾಗ ಮಾತ್ರ ಬದುಕು ಹಸನಾಗುತ್ತದೆಯೇ ಹೊರತು, ಅದು ಕೇವಲ ಮಾತಿನ ರೂಪದಲ್ಲಿದ್ದರೆ, ಅಂತಹ ಅರಿವಿನಿಂದ ಯಾವುದೇ ಪ್ರಯೋಜನವಿಲ್ಲವೆಂಬ ನಿಲುವನ್ನು ಈ ವಚನದಲ್ಲಿ ಹೇಳಲಾಗಿದೆ.

(ಕ್ರಿಯಾ+ಮಥನ+ಇಲ್ಲದೆ; ಕ್ರಿಯಾ=ಕೆಲಸ/ಕಾರ್ಯ/ಕ್ರಿಯೆ; ಮಥನ=ಹಿಂಡುವಿಕೆ/ತೀಡುವಿಕೆ/ಉಜ್ಜುವಿಕೆ; ಕ್ರಿಯಾಮಥನ=ಹಿಂಡುವ/ತೀಡುವ/ಉಜ್ಜುವ ಕೆಲಸಗಳಲ್ಲಿ ತೊಡಗುವುದು; ಕಾಣಬಂದುದೇ=ನೋಡಲು ಬರುವುದೇ/ಕಾಣಲು ಆಗುವುದೇ/ಪಡೆಯಲು ಆಗುತ್ತದೆಯೇ ; ಇಕ್ಷುವಿನ್+ಒಳಗಣ; ಇಕ್ಷು=ಕಬ್ಬು; ಇಕ್ಷುವಿನ=ಕಬ್ಬಿನ; ಒಳಗಣ=ಒಳಗೆ ಇರುವ ; ಮಧುರ=ಸಿಹಿ/ಸವಿ ; ಇಕ್ಷುವಿನೊಳಗಣ ಮಧುರ=ಕಬ್ಬಿನ ಜಲ್ಲೆಯೊಳಗಿರುವ ಸಿಹಿಯಾದ ರಸ ; ತಿಲದ+ಒಳಗಣ ; ತಿಲ=ಎಳ್ಳು/ಎಳ್ಳಿನ ಕಾಳು; ತೈಲ=ಎಣ್ಣೆ/ಜಿಡ್ಡು; ತಿಲದೊಳಗಿನ ತೈಲ=ಎಳ್ಳು ಕಾಳಿನ ಒಳಗಿರುವ ಜಿಡ್ಡು/ಎಣ್ಣೆ ; ಕ್ಷೀರದ+ಒಳಗಣ ; ಕ್ಷೀರ=ಹಾಲು; ಘೃತ=ತುಪ್ಪ ; ಕ್ಷೀರದೊಳಗಣ ಘೃತ=ಹೆಪ್ಪುಗೊಂಡ ಹಾಲಿನಲ್ಲಿರುವ ತುಪ್ಪದ ಕಣ;

ಕಾಷ್ಠದ+ಒಳಗಣ; ಕಾಷ್ಠ=ಮರದ ತುಂಡು/ಕಟ್ಟಿಗೆ/ಸವುದೆ; ಅಗ್ನಿ=ಬೆಂಕಿ; ಕಾಷ್ಠದೊಳಗಣ ಅಗ್ನಿ=ಮರದ ಕಟ್ಟಿಗೆಯಲ್ಲಿರುವ ಉರಿದು ಕಿಡಿಕಾರುವ ಬೆಂಕಿಯ ಕಣ; ಇದು ಕಾರಣ=ಆದುದರಿಂದ ; ಗೊಹೇಶ್ವರ>ಗುಹೇಶ್ವರ=ಶಿವ; ಗೊಹೇಶ್ವರಲಿಂಗವ= ಗೊಹೇಶ್ವರ/ಗುಹೇಶ್ವರನೆಂಬ ದೇವರನ್ನು; ತನ್ನ+ಒಳಗೆ+ಅರಿದೆನ್+ಎಂಬ; ಅರಿ=ತಿಳಿ; ಅರಿದೆನ್=ತಿಳಿದಿದ್ದೇನೆ; ಎಂಬ=ಎನ್ನುವ; ಮಹಂತಂಗೆ+ಎಲ್ಲಡೆ; ಮಹಂತ=ಸಮಾಜದಲ್ಲಿ ಎಲ್ಲರ ಒಲವು ಆದರಗಳಿಗೆ ಪಾತ್ರನಾದ ವ್ಯಕ್ತಿ; ಗೊಹೇಶ್ವರಲಿಂಗವ ತನ್ನೊಳರಿದೆನೆಂಬ ಮಹಂತ=ಒಳ್ಳೆಯ ನಡೆನುಡಿಗಳಿಂದ ಬಾಳುವುದನ್ನೇ ದೇವರೆಂದು/ ಗೊಹೇಶ್ವರಲಿಂಗವೆಂದು ತಿಳಿದಿರುವ ವ್ಯಕ್ತಿ ;

ಎಲ್ಲೆಡೆ=ಜೀವನದ ಎಲ್ಲಾ ರಂಗಗಳಲ್ಲಿಯೂ; ಸತ್ಕ್ರಿಯಾ+ಆಚರಣೆಯೇ; ಸತ್ಕ್ರಿಯಾ=ಒಳ್ಳೆಯ ಕೆಲಸ/ಕಾರ್ಯ/ಕ್ರಿಯೆ/ಗೇಮೆ; ಆಚರಣೆ=ಕಾರ್ಯರೂಪಕ್ಕೆ ತರುವುದು/ ಕೆಲಸವನ್ನು ಮಾಡಿ ತೋರಿಸುವುದು; ಸಾಧನ=ಉಪಕರಣ/ಸಾಮಗ್ರಿ ;

"ಗೊಹೇಶ್ವರಲಿಂಗವ ತನ್ನೊಳರಿದೆನೆಂಬ ಮಹಂತಂಗೆಲ್ಲಡೆ ಸತ್ಕ್ರಿಯಾಚರಣೆಯೇ ಸಾಧನ" ಎಂಬ ವಾಕ್ಯವು "ಒಳ್ಳೆಯ ನಡೆನುಡಿಗಳನ್ನೇ ಶಿವನೆಂದು ನಂಬಿರುವ ವ್ಯಕ್ತಿಗಳು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವುದನ್ನೇ ದೇವರನ್ನು ಪೂಜಿಸಲು ಇರುವ ಒಂದು ಉಪಕರಣವೆಂದು ನಂಬಿರುತ್ತಾರೆ" ಎಂಬ ತಿರುಳನ್ನು ಹೊಂದಿದೆ ; ಭೋ=ಹೇಳುವ ಸಂಗತಿಯ ಕಡೆಗೆ ಇತರರ ಗಮನವನ್ನು ಸೆಳೆಯಲೆಂದು ಬಳಸುವ ಪದ; ಕಾಣಿ ಭೋ=ಕಾಣಿರಿ/ನೋಡಿರಿ/ತಿಳಿಯಿರಿ.)



೧೩. ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝಂಕಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನು.

"ಕೃತಯುಗ–ತ್ರೇತಾಯುಗ–ದ್ವಾಪರಯುಗ–ಕಲಿಯುಗ" ಎನ್ನುವ ಪದಗಳು ನಾಲ್ಕು ಬಗೆಯ ಕಾಲಮಾನಗಳನ್ನು ಹೆಸರಿಸುತ್ತವೆ. ಹಿಂದಿನ ಕಾಲದಿಂದ ಇಂದಿನವರೆಗೆ ಮಾನವಕುಲ ಹುಟ್ಟಿ ಬೆಳೆದು ಬಾಳಿಬಂದ ಸಮಯವನ್ನು ಕನ್ನಡ ನುಡಿಸಮುದಾಯವು ಈ ರೀತಿ ನಾಲ್ಕು ಹಂತಗಳಲ್ಲಿ ಗುರುತಿಸಿಕೊಂಡಿದೆ. ಕೃತಯುಗದಲ್ಲಿ ಮಾನವ ಸಮುದಾಯದಲ್ಲಿ ತುಂಬಾ ಒಳ್ಳೆಯತನದ ನಡೆನುಡಿಗಳು ಇದ್ದುವೆಂದು, ಮುಂದಿನ ಯುಗಗಳಲ್ಲಿ ಒಳ್ಳೆಯತನ ಕಡಿಮೆಯಾಗುತ್ತಾ ಬಂದು, ಇದೀಗ ಕಲಿಯುಗದಲ್ಲಿ ಮಾನವರ ನಡೆನುಡಿಗಳಲ್ಲಿ ಕೆಟ್ಟತನವೇ ಹೆಚ್ಚಾಗಿ ಕಂಡುಬರುತ್ತಿದೆಯೆಂಬ ಒಳಮಿಡಿತವು ಜನಮನದಲ್ಲಿ ನೆಲೆಯೂರಿದೆ.

ಆದರೆ ಈ ವಚನದಲ್ಲಿ ಅಲ್ಲಮನು ಒಂದು ಯುಗ ಕಳೆದು ಮತ್ತೊಂದು ಯುಗ ಬಂದಂತೆಲ್ಲಾ ಮಾನವರ ಅರಿವು ಹೆಚ್ಚಾಗುತ್ತಾ, ಅವರ ನಡೆನುಡಿಗಳಲ್ಲಿ ಇನ್ನೂ ಹೆಚ್ಚಿನ ಮಾನವೀಯ ಮಿಡಿತಗಳು ಅಂದರೆ ಸಹಜೀವಿಗಳ ಬಗ್ಗೆ ಒಲವು ಮತ್ತು ಕರುಣೆಯ ಒಳಮಿಡಿತಗಳು ಹಾಗೂ ಜವಾಬ್ದಾರಿಯುತವಾದ ವರ್ತನೆಗಳು ಕಂಡು ಬರುತ್ತಿವೆಯೆಂದು ಹೇಳುತ್ತಾ, ಅದನ್ನು ನಾಲ್ಕು ಹಂತಗಳಲ್ಲಿ ಗುರು–ಗುಡ್ಡನ ನಡುವಣ ನಂಟಿನಲ್ಲಿ ಉಂಟಾದ ಒಳಿತಿನ ಬೆಳವಣಿಗೆಯ ಮೂಲಕ ಚಿತ್ರಿಸಿದ್ದಾನೆ.

ತನ್ನ ಬಳಿ ಅರಿವನ್ನು ಪಡೆಯಲು/ವಿದ್ಯೆಯನ್ನು ಕಲಿಯಲು ಬಂದ ಹುಡುಗನ ಮಯ್ ಮೇಲೆ ಗುರು ಮೊದಮೊದಲು ಮನಬಂದಂತೆ ಹಲ್ಲೆ ಮಾಡುತ್ತಿದ್ದ. ಒಂದು ಜಡವಸ್ತುವನ್ನು ಹೊಡೆದು ಬಡಿದು ಕೊರೆದು ಕತ್ತರಿಸಿ ಅದಕ್ಕೆ ಒಂದು ರೂಪವನ್ನು ಕೊಡುವಂತೆ ಗುರು ಗುಡ್ಡನ ಮೇಲೆ ತನ್ನ ಬಲವನ್ನು ಈ ಹಂತದಲ್ಲಿ ತೋರಿಸುತ್ತಿದ್ದ.

ಎರಡನೆಯ ಹಂತದಲ್ಲಿ ಗುರು ಗುಡ್ಡನನ್ನು "ತನ್ನಂತೆ ಒಂದು ಜೀವಿ" ಎಂದು ತಿಳಿದು, ಅವನ ಮಯ್ ಮನಗಳ ಮೇಲೆ ಹಿಡಿತವನ್ನು ಪಡೆಯಲೆಂದು ಬಯ್ಯುತ್ತಿದ್ದ. ತಮ್ಮ ಬಳಿ ಇರುವ ವ್ಯಕ್ತಿಗಳನ್ನು "ತಮ್ಮ ಇಚ್ಚೆಗೆ ತಕ್ಕಂತೆ ತಗ್ಗಿ ಬಗ್ಗಿ ನಡೆಯುವಂತೆ ಮಾಡಲು" ಬಡಿಯುವಿಕೆ ಮತ್ತು ಬಯ್ಯುವಿಕೆಯನ್ನು ಉಪಕರಣಗಳನ್ನಾಗಿ ಮಾನವರು ಬಳಸುತ್ತಾರೆ. ಅಂತೆಯೇ ಇಲ್ಲಿ ಗುರು ಗುಡ್ಡನನ್ನು ತನ್ನ ಹತೋಟಿಯಲ್ಲೇ ಇರಬೇಕಾದ ಮತ್ತು ಬೆಳೆಯಬೇಕಾದ ವ್ಯಕ್ತಿಯೆಂದು ತಿಳಿದಿದ್ದ.

ಮೂರನೆಯ ಹಂತದಲ್ಲಿ ಗುಡ್ಡನ ಮನದ ಒಳಮಿಡಿತಗಳನ್ನು ಅರಿತುಕೊಂಡು, ಅದಕ್ಕೆ ತಕ್ಕಂತೆ ವಿದ್ಯೆಯನ್ನು ಕಲಿಸುವ ರೀತಿಯನ್ನು ಗುರು ಅಳವಡಿಸಿಕೊಂಡಿದ್ದಾನೆ. ಆದುದರಿಂದಲೇ ಜಂಕಿಸಿ ಅಂದರೆ ಕಣ್ಸನ್ನೆ ಮತ್ತು ಕಯ್ಸನ್ನೆಗಳಿಂದಲೇ ಗುಡ್ಡನ ಮನವನ್ನು ವಿದ್ಯೆಯತ್ತ ಹೊರಳುವಂತೆ ಮಾಡಿ ಓದುಬರಹ ಮತ್ತು ಬದುಕಿನ ಕಲೆಯನ್ನು ಕಲಿಸುತ್ತಿದ್ದ.

ನಾಲ್ಕನೆಯ ಹಂತದಲ್ಲಿ ಗುಡ್ಡನನ್ನು ಗುರು ತನ್ನಂತೆ ಒಂದು ಜೀವಿಯೆಂದು ತಿಳಿಯುವುದರ ಜತೆಜತೆಗೆ, ಮುಂದೆ ಬೆಳೆದು ಬಾಳಿ ಬದುಕಬೇಕಾದ ಅವನನ್ನು ಒಲವು ನಲಿವುಗಳಿಂದ ಕಾಣುತ್ತಾ, ಅವನಲ್ಲಿ ಮಾನವ ಜೀವನದ ಒಳಿತಿನ ಬಗ್ಗೆ ಅಪಾರವಾದ ನಂಬಿಕೆಯನ್ನು ಮೂಡಿಸಿ ಮುನ್ನಡೆಯುವಂತೆ ಮಾಡತೊಡಗಿದ್ದಾನೆ.

ಕಾಲ ಉರುಳಿದಂತೆಲ್ಲಾ ಮಾನವ ಸಮಾಜದಲ್ಲಿ ಉಂಟಾಗುವ ಬಹುಬಗೆಯ ಬದಲಾವಣೆಗಳು ಗುರುವಿನ ವ್ಯಕ್ತಿತ್ವದ ಮೇಲೆ ಪರಿಣಾಮವನ್ನು ಬೀರಿ ಗುರುವಿನಲ್ಲಿ ಗುಡ್ಡನ ಬಗೆಗೆ ಒಲವು, ಕರುಣೆ ಮತ್ತು ಸಮಾನತೆಯ ನಡೆನುಡಿಗಳು ಹೊರಹೊಮ್ಮುವಂತೆ ಮಾಡಿವೆ.

(ಕೃತಯುಗ+ಅಲ್ಲಿ; ಶ್ರೀ=ವ್ಯಕ್ತಿಗೆ ಒಲವು/ನಲಿವನ್ನು ಸೂಚಿಸುವ ಪದ ; ಗುರು=ವಿದ್ಯೆಯನ್ನು ಕಲಿಸುವ/ಅರಿವನ್ನು ಮೂಡಿಸುವ/ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸುವ ವ್ಯಕ್ತಿ ; ಶಿಷ್ಯಂಗೆ=ಗುಡ್ಡನಿಗೆ; ಶಿಷ್ಯ=ವಿದ್ಯೆಯನ್ನು ಕಲಿಯುವ/ಅರಿವನ್ನು ಪಡೆಯುವ ಹಂಬಲವುಳ್ಳವನು/ಗುಡ್ಡ ; ಬಡಿದು=ಹೊಡೆದು ; ಬಡಿ=ಹೊಡೆ/ಚಚ್ಚು/ ಮಯ್ಯ ಮೇಲೆ ಹಲ್ಲೆಯನ್ನು ನಡೆಸು; ಬುದ್ಧಿ=ತಿಳುವಳಿಕೆ/ಅರಿವು ; ಕಲಿಸು= ಹೇಳಿಕೊಡು/ತಿಳಿಯುವಂತೆ ಮಾಡು; ಆಗಲಿ=ಒಪ್ಪಿಗೆಯನ್ನು ಸೂಚಿಸುವುದು ; ಮಹಾಪ್ರಸಾದ+ಎಂದೆನ್+ಅಯ್ಯ ; ಮಹಾ=ದೊಡ್ಡ/ಹೆಚ್ಚಿನ ; ಪ್ರಸಾದ=ಅನುಗ್ರಹ/ ದಯೆ/ಒಳಿತು ; ಎಂದೆನ್=ಹೇಳಿದೆನು ; ಅಯ್ಯ=ಗಂಡಸರೊಡನೆ ಮಾತನಾಡುವಾಗ ಒಲವು/ನಲಿವನ್ನು ಸೂಚಿಸಲು ಬಳಸುವ ಪದ ;

ತ್ರೇತಾಯುಗ+ಅಲ್ಲಿ ; ಬಯ್+ದು ; ಬಯ್=ತೆಗಳು/ನಿಂದಿಸು ; ಬೈದು=ಬಯ್ಗುಳದ ನುಡಿಗಳನ್ನು ಬಳಸಿ ನಿಂದಿಸುವುದು/ತೆಗಳುವುದು; ದ್ವಾಪರ+ಅಲ್ಲಿ ; ಝುಂಕಿಸು=ಬೆದರಿಸು/ಗದರಿಸು; ಝುಂಕಿಸಿ=ಕಣ್ಣಿನ ಗುಡ್ಡೆಗಳನ್ನು ಅತ್ತಿತ್ತ ಹೊರಳಿಸುವ ನೋಟವನ್ನು ಬೀರುತ್ತಾ/ಕಯ್ಗಳನ್ನು ಅತ್ತಿತ್ತ ಆಡಿಸುತ್ತಾ/ಮೊಗದಲ್ಲಿ ತೋರಿಸುವ ಬಹುಬಗೆಯ ಒಳಮಿಡಿತಗಳ ಮೂಲಕವೇ ಗದರಿಸಿ/ಬೆದರಿಸಿ/ತುಸು ಎಚ್ಚರಿಕೆಯನ್ನು ನೀಡಿ ;

ಕಲಿಯುಗ+ಅಲ್ಲಿ ; ವಂದಿಸು=ಪ್ರೀತಿಸು/ಆದರಿಸು; ವಂದಿಸಿ=ಒಲವನ್ನು ತೋರಿ/ನಲಿವಿನಿಂದ ನಡೆಸಿಕೊಂಡು ; ಕಟ್ಟಳೆ=ನಿಯಮ/ಕಟ್ಟುಪಾಡು ; ಕಲಿತನ=ಪರಾಕ್ರಮ/ಅಳವು/ಶಕ್ತಿ; ಕಾಲದ ಕಟ್ಟಳೆಯ ಕಲಿತನ=ಕಾಲ ಉರುಳಿದಂತೆಲ್ಲಾ ಸಮಾಜದ ಕಟ್ಟುಪಾಡುಗಳಲ್ಲಿ/ಆಗುಹೋಗುಗಳಲ್ಲಿ/ವ್ಯಕ್ತಿಯ ನಡೆನುಡಿಗಳಲ್ಲಿ ಉಂಟಾಗುವ ಬದಲಾವಣೆಗಳು; ಬೆರಗು+ಆದೆನು; ಬೆರಗು=ಅಚ್ಚರಿ/ವಿಸ್ಮಯ/ಸೋಜಿಗ.)



೧೪. ಜಾಲಗಾರನ ಕಾಲು ಮುಳ್ಳು ತಾಗಿ ನೊಂದಿತ್ತೆಂಬಂತೆ
ಸೂನೆಗಾರನ ಮನೆಯಲ್ಲಿ ಹೆಣ ಹೋಗಿ ಅಳುವಂತೆ
ಕನ್ನಗಳ್ಳನ ಮನೆಯಲ್ಲಿ ಬಟ್ಟಲು ಹೋಗಿ ಮರುಗುವಂತೆ
ಠಕ್ಕನ ಪೂಜೆಗೆ ಮೆಚ್ಚುವನೆ ನಮ್ಮ ಗುಹೇಶ್ವರನು.

ಈ ವಚನದಲ್ಲಿ ಎರಡು ಸಂಗತಿಗಳನ್ನು ಹೇಳಲಾಗಿದೆ.

೧) ಸಾಮಾಜಿಕ ವ್ಯಕ್ತಿಗಳಲ್ಲಿ ಹೆಚ್ಚಿನವರು ತಮ್ಮ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಆಗುತ್ತಿರುವ ತೊಂದರೆ/ಕಿರುಕುಳ/ಸಾವು/ನೋವು/ಅಪಮಾನ/ಹಾನಿಯ ಬಗ್ಗೆ ಎಂದೂ ಯಾವುದೇ ಬಗೆಯ ಆತಂಕಕ್ಕೆ ಒಳಗಾಗುವುದಿಲ್ಲ ಹಾಗೂ ತಮ್ಮ ವರ್ತನೆಯಿಂದ ಉಂಟಾದ ಆಗುಹೋಗುಗಳನ್ನು ಒರೆಹಚ್ಚಿ ನೋಡಿಕೊಳ್ಳುವುದಿಲ್ಲ. ಆದರೆ ಇತರರಿಂದ ತಮಗೆ ನೋವು/ಹಾನಿಯುಂಟಾದಾಗ, ಅದಕ್ಕಾಗಿ ಮನನೊಂದು ಒದ್ದಾಡುತ್ತಾರೆ/ಕಳವಳಗೊಳ್ಳುತ್ತಾರೆ. ಸಾಮಾಜಿಕ ವ್ಯಕ್ತಿಗಳಲ್ಲಿರುವ ಈ ಬಗೆಯ ಇಬ್ಬಂದಿತನದ ನಡವಳಿಕೆಯನ್ನು ಅಂದರೆ "ತಮ್ಮಿಂದ ಇತರರಿಗೆ ಕೇಡಾದರೂ ಚಿಂತೆಯಿಲ್ಲ; ತಮಗೆ ಮಾತ್ರ ಯಾವ ಬಗೆಯಿಂದಲೂ ಕೇಡಾಗಬಾರದು" ಎಂಬುದನ್ನು ಮೂರು ಪ್ರಸಂಗಗಳ ಮೂಲಕ ಗುರುತಿಸಲಾಗಿದೆ.

ಚೂಪಾದ ಮೊನೆಯುಳ್ಳ ಲೋಹದ ಗಾಳಕ್ಕೆ ಎರೆಹುಳವನ್ನು ಸಿಕ್ಕಿಸಿ, ಅದನ್ನು ನೀರಿನಲ್ಲಿ ಇಳಿಬಿಟ್ಟು ಮೀನನ್ನು ಹಿಡಿಯುವ ಜಾಲಗಾರನಿಗೆ/ಬೆಸ್ತನಿಗೆ ಒಮ್ಮೆ ಮುಳ್ಳೊಂದು ಕಾಲಿಗೆ ಚುಚ್ಚಿದಾಗ, ನೋವನ್ನು ತಾಳಲಾರದೆ ನೊಂದುಕೊಳ್ಳುತ್ತಾನೆ. ಮುಳ್ಳಿನ ಮೊನೆಯಿಂದ ತನಗಾದ ನೋವಿಗೆ ಮಿಡುಕಾಡುವ ಅವನ ಮನಕ್ಕೆ ತನ್ನಿಂದ ಪ್ರತಿನಿತ್ಯವೂ ಗಾಳದ ಮೊನೆಗೆ ಸಿಲುಕಿ ಒದ್ದಾಡುವ ಎರೆಹುಳುವಿನ ನೋವಾಗಲಿ ಇಲ್ಲವೇ ಗಾಳದ ಕೊಕ್ಕೆಯು ಗಂಟಲಿನಲ್ಲಿ ಸಿಕ್ಕಿಕೊಂಡಾಗ ನೋವಿನಿಂದ ವಿಲವಿಲನೆ ಒದ್ದಾಡುವ ಮೀನಿನ ಸಂಕಟವಾಗಲಿ ತಟ್ಟುವುದಿಲ್ಲ.

ಕುರಿಕೋಳಿ ಮುಂತಾದ ಜೀವಿಗಳನ್ನು ಕೊಂದು ಮಾರಾಟಮಾಡುವ ಸೂನೆಗಾರ/ಕಟುಕನ ಮನೆಯಲ್ಲಿ ಒಂದು ದಿನ ಅವನ ಕುಟುಂಬಕ್ಕೆ ಸೇರಿದ ವ್ಯಕ್ತಿಯೊಬ್ಬರು ಸಾವನ್ನಪ್ಪಿದಾಗ, ಅವರ ಅಗಲಿಕೆಯನ್ನು ತಾಳಲಾರದೆ ಸೂನೆಗಾರನು ಸಂಕಟದಿಂದ ಕಣ್ಣೀರುಗರೆಯುತ್ತಾನೆ. ಆದರೆ ತಾನು ನಿತ್ಯವೂ ಹತ್ತಾರು ಜೀವಿಗಳ ಕೊರಳನ್ನು ಕತ್ತರಿಸಿ ಅವುಗಳ ಜೀವ ತೆಗೆದು ಸಾಯಿಸುತ್ತಿರುವುದು ಅವನ ಮನವನ್ನು ಎಂದೂ ಕಾಡುವುದಿಲ್ಲ.

ಕಂಡಕಂಡವರ ಮನೆಯ ಗೋಡೆಯನ್ನು ಕೊರೆದು, ಒಳನುಗ್ಗಿ ಅವರ ಮನೆಯ ಒಡವೆವಸ್ತುಗಳನ್ನು ದೋಚಿ, ಅದರಿಂದಲೇ ಜೀವನ ನಡೆಸುವ ಕಳ್ಳನ ಮನೆಯಲ್ಲಿ ಒಮ್ಮೆ ಒಂದು ಚಿಕ್ಕ ಬಟ್ಟಲು ಕಳುವಾದಾಗ, ಅದನ್ನು ಕಳೆದುಕೊಂಡ ಸಂಕಟದಿಂದ ಆ ಕಳ್ಳನ ಮನ ತಳಮಳಗೊಳ್ಳುತ್ತದೆ. ಆದರೆ ತಾನು ಮಾಡುವ ಕನ್ನ ಕೊರೆಯುವ ಕಸುಬಿನಿಂದ ಹಾನಿಗೊಳಗಾಗಿ ಸಂಕಟಕ್ಕೆ ಒಳಗಾದವರ ಬಗ್ಗೆ ಒಂದು ಗಳಿಗೆಯಾದರೂ ಈ ಕಳ್ಳ ಎಂದೂ ಚಿಂತಿಸುವುದಿಲ್ಲ.

೨) ಸಮಾಜದಲ್ಲಿನ ಜನಸಮುದಾಯದ ಬದುಕಿಗೆ ಹಾನಿಯನ್ನುಂಟು ಮಾಡಿ, ಅವರನ್ನು ಹಸಿವು, ಬಡತನ, ಅಪಮಾನದ ಸಂಕಟಕ್ಕೆ ಗುರಿಮಾಡಿ ಗೋಳಾಡಿಸುವುದಲ್ಲದೇ, ಅವರ ದುಡಿಮೆಯ ಗಳಿಕೆಯೆಲ್ಲವನ್ನೂ ದೋಚಿ ಕೂಡಿಟ್ಟ ಸಂಪತ್ತಿನಿಂದ ದೇವರ ಪೂಜೆಯನ್ನು ಮಾಡುವ ನಯವಂಚಕರನ್ನು/ಕ್ರೂರಿಗಳನ್ನು ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣಶರಣೆಯರು ತಿರಸ್ಕರಿಸಿದ್ದರು. ಏಕೆಂದರೆ ದೇವರನ್ನು ಪೂಜಿಸುವವರು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳನ್ನು ಹೊಂದಿರಬೇಕೆಂಬ ನಿಲುವನ್ನು ಶಿವಶರಣಶರಣೆಯರು ತಳೆದಿದ್ದರು.

ಈ ಹಿನ್ನೆಲೆಯಲ್ಲಿ ಈ ವಚನದ ಕೊನೆಯ ಸಾಲಿನಲ್ಲಿ "ಕಳ್ಳನು ಮಾಡುವ ಪೂಜೆಯನ್ನು ಗುಹೇಶ್ವರನು ಮೆಚ್ಚುವುದಿಲ್ಲ/ಒಪ್ಪುವುದಿಲ್ಲವೆಂದು" ಹೇಳಲಾಗಿದೆ.

(ಜಾಲ+ಕಾರ=ಜಾಲಗಾರ ; ಜಾಲ=ಕೆರೆಕಟ್ಟೆಹೊಳೆನದಿ ಮುಂತಾದ ನೀರಿನ ತಾಣದಲ್ಲಿ ವಾಸಿಸುವ ಮೀನು ಮತ್ತು ಇತರ ಜೀವಿಗಳನ್ನು ಹಿಡಿಯಲು ಬಳಸುವ ಬಲೆ/ಗಾಳ; ಕಾರ=ಮಾಡುವವನು/ತೊಡಗುವವನು; ಜಾಲಗಾರ=ನೂಲಿನಿಂದ ಮಾಡಿದ ಬಲೆ ಇಲ್ಲವೇ ಲೋಹದಿಂದ ಮಾಡಿದ ಕೊಕ್ಕೆಯನ್ನು ಬಳಸಿ ಜಲಚರಗಳನ್ನು ಹಿಡಿಯುವವನು/ಬೆಸ್ತ ; ತಾಗಿ=ಚುಚ್ಚಿಕೊಂಡು/ಹೊಕ್ಕಿಕೊಂಡು ; ಮುಳ್ಳು ತಾಗಿ=ಹರಿತವಾದ ಮೊನೆಯುಳ್ಳ ಮುಳ್ಳು ನಾಟಿಕೊಂಡು ; ನೊಂದು+ಇತ್ತು+ಎಂಬ+ಅಂತೆ ; ನೊಂದಿತ್ತು=ನೋವಾಯಿತು; ಎಂಬ=ಎನ್ನುವ; ಅಂತೆ=ಹಾಗೆ;

ಸೂನೆ+ಕಾರ=ಸೂನೆಗಾರ; ಸೂನೆ=ಪ್ರಾಣಿಗಳನ್ನು ಕೊಲ್ಲುವ ಜಾಗ/ಕಟುಕರ ಅಂಗಡಿ; ಸೂನೆಗಾರ=ಪ್ರಾಣಿಗಳ ಮಾಂಸವನ್ನು ಮಾರುವವನು/ಪ್ರಾಣಿಗಳನ್ನು ಕತ್ತರಿಸುವ ಕಸುಬುಳ್ಳವನು/ಕಟುಕ; ಹೆಣ ಹೋಗಿ=ವ್ಯಕ್ತಿಗೆ ಸಾವು ಉಂಟಾಗಿ ; ಅಳುವ+ಅಂತೆ ; ಅಳು=ಸಂಕಟಪಡು/ಕಣ್ಣೀರು ಸುರಿಸು;

ಕನ್ನ+ಕಳ್ಳ=ಕನ್ನಗಳ್ಳ ; ಕನ್ನ=ಗೋಡೆಯಲ್ಲಿ ಕೊರೆದ ಕಂಡಿ/ಒಬ್ಬ ವ್ಯಕ್ತಿ ನುಗ್ಗಿಹೋಗಲು ಆಗುವಂತೆ ಗೋಡೆಯಲ್ಲಿ ಕೊರೆದಿರುವ ಜಾಗ ; ಕನ್ನಗಳ್ಳ=ಮನೆಯ ಗೋಡೆಯನ್ನು

ಕೊರೆದು, ಅದರ ಎಡೆಯಲ್ಲಿ ಮನೆಯೊಳಕ್ಕೆ ನುಗ್ಗಿ ಒಡವೆ ವಸ್ತುಗಳನ್ನು ದೋಚುವವನು ; ಬಟ್ಟಲು=ಗುಂಡಾಗಿರುವ ಚಿಕ್ಕದಾದ ಪಾತ್ರೆ; ಬಟ್ಟಲು ಹೋಗಿ= ಬಟ್ಟಲು ಕಳುವಾಗಿ/ಕಳೆದುಹೋಗಿ ; ಮರುಗುವ+ಅಂತೆ ; ಮರುಗು= ಸಂಕಟಪಟು/ ಕಳವಳಿಸು/ಚಿಂತಿಸು ;

ಠಕ್ಕ=ಮೋಸಗಾರ/ವಂಚಕ/ಕಳ್ಳ/ನೀಚ; ಮೆಚ್ಚು=ಒಲಿಯುವುದು/ಒಪ್ಪುವುದು/ ಹೊಗಳುವುದು; ಮೆಚ್ಚುವನೆ=ಮೆಚ್ಚುತ್ತಾನೆಯೇ.)



೧೫. ತನು ಒಂದು ದ್ವೀಪ ಮನ ಒಂದು ದ್ವೀಪ
ಆಪ್ಯಾಯನ ಒಂದು ದ್ವೀಪ ವಚನ ಒಂದು ದ್ವೀಪ
ಇಂತೀ ನಾಲ್ಕು ದ್ವೀಪದೆಡೆಯ ಬೆಸೆಗೊಂಬಡೆ
ಗುಹೇಶ್ವರ ನಿಮ್ಮ ಸ್ಥಾನಂಗಳು.

ವ್ಯಕ್ತಿಯ ನಡೆನುಡಿಗಳನ್ನು ರೂಪಿಸುವುದರಲ್ಲಿ ಮಯ್, ಮನಸ್ಸು ಮತ್ತು ಮಾತುಗಳ ಪಾತ್ರ ದೊಡ್ಡದು. ಇವುಗಳ ನಡುವೆ ಪರಸ್ಪರ ಹೊಂದಾಣಿಕೆಯಿದ್ದಾಗ ಮಾತ್ರ ವ್ಯಕ್ತಿಯ ಬದುಕಿನಲ್ಲಿ ನಲಿವು, ನೆಮ್ಮದಿ, ಹಿತವುಂಟಾಗುತ್ತದೆ. ನಿಸರ್ಗ ಸಹಜವಾದ ಸೆಳೆತ ಮತ್ತು ಸಮಾಜದ ಕಟ್ಟುಪಾಡುಗಳ ನಡುವೆ ಸಿಲುಕಿದ ವ್ಯಕ್ತಿಯು ತನ್ನ ಮಯ್ಯಲ್ಲಿ ಕೆರಳುವ ಕಾಮನೆಗಳನ್ನು, ಮನದಲ್ಲಿ ತುಡಿಯುವ ಒಳಮಿಡಿತಗಳನ್ನು ಮತ್ತು ಆಡುವ ಮಾತುಗಳೆಲ್ಲವನ್ನು ಬೇರೆಬೇರೆಯಾಗಿ ಬಿಡದೆ, ಒಳಿತಿನ ಕಡೆಗೆ ಒಗ್ಗೂಡಿಸುವುದರ ಮೂಲಕ ತನಗೆ ಮತ್ತು ಸಮಾಜಕ್ಕೆ ಹಿತವನ್ನುಂಟುಮಾಡುವ ನಡೆನುಡಿಗಳನ್ನು ರೂಪಿಸಿ ಕೊಳ್ಳಬೇಕೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

(ತನು=ಮಯ್/ದೇಹ/ಶರೀರ; ದ್ವೀಪ=ನೀರಿನಿಂದ ಸುತ್ತುವರಿದ ಪ್ರಾಂತ್ಯ/ನಡುಗಡ್ಡೆ; ದ್ವೀಪ ಎಂಬ ಪದವನ್ನು "ಪ್ರತ್ಯೇಕವಾಗಿರುವುದು/ಬೇರೆಯಾಗಿರುವುದು/ಒಂಟಿಯಾಗಿರುವುದು/ಸಂಪರ್ಕವಿಲ್ಲದಿರುವುದು" ಎಂಬ ತಿರುಳಿನ ಒಂದು ರೂಪಕವಾಗಿ ಬಳಸಲಾಗಿದೆ. ವ್ಯಕ್ತಿಯ ಮಯ್ಯಲ್ಲಿ ತುಡಿಯುವ ಕಾಮನೆಗಳು, ಮನಗಳಲ್ಲಿ ಮೂಡುವ ಬಯಕೆಗಳು ಮತ್ತು ಆಡುವ ಮಾತುಗಳ ನಡುವೆ ಹೊಂದಾಣಿಕೆಯಿಲ್ಲದಿರುವ ಬಗೆಯನ್ನು ದ್ವೀಪವೆಂಬ ರೂಪಕದ ಮೂಲಕ ಚಿತ್ರಿಸಿಲಾಗಿದೆ ;

ಮನ=ಮನಸ್ಸು ; ಆಪ್ಯಾಯನ=ನೆಮ್ಮದಿ/ನಲಿವು/ಹಿತ/ಮನಸ್ಸನ್ನು ಶಾಂತವಾಗಿರಿಸಿ ಕೊಳ್ಳುವಿಕೆ ; ವಚನ=ಮಾತು/ನುಡಿ ; ಇಂತು+ಈ ; ಇಂತು=ಈ ರೀತಿಯಾಗಿ/ಬಗೆಯಲ್ಲಿ ; ದ್ವೀಪದ+ಎಡೆಯ; ಎಡೆ=ಜಾಗ/ನೆಲೆ ; ಬೆಸೆ+ಕೊಂಬಡೆ ; ಬೆಸೆ=ಕೂಡಿಸು/ಸೇರಿಸು/ಒಂದು ಮಾಡು; ಕೊಂಬಡೆ=ಕೊಳ್ಳುವುದಾದರೆ/ಪಡೆಯುವುದಾದರೆ/ಗಳಿಸುವುದಾದರೆ ;

ನಾಲ್ಕು ದ್ವೀಪದೆಡೆಯ ಬೆಸೆಗೊಂಬಡೆ=ನಾಲ್ಕನ್ನು ಸೇರಿಸಿ ಒಂದು ಮಾಡಿದರೆ ಅಂದರೆ ವ್ಯಕ್ತಿಯ ತನುಮನವಚನಗಳು ಒಂದಾಗಿ ಬೆಸೆದುಕೊಂಡು ಒಳಿತಿನ ನಡೆನುಡಿಗಳನ್ನು ಅಳವಡಿಸಿಕೊಂಡಾಗ ಮಾತ್ರ ಬದುಕಿಗೆ ನೆಮ್ಮದಿ ದೊರೆಯುತ್ತದೆ ;

ಗುಹೇಶ್ವರ=ಅಲ್ಲಮನ ಮೆಚ್ಚಿನ ದೇವರು/ಶಿವ ; ಸ್ಥಾನ=ಜಾಗ/ನೆಲೆ/ಎಡೆ ; ಗುಹೇಶ್ವರ ನಿಮ್ಮ ಸ್ಥಾನಂಗಳು=ದೇವರು ಇರುವ ನೆಲೆ/ಮಯ್ ಮನಸ್ಸು ಮಾತುಗಳು ಜತೆಗೂಡಿ ನೆಮ್ಮದಿಯಿಂದ ಕೂಡಿದ ಒಳ್ಳೆಯ ನಡೆನುಡಿಗಳನ್ನು ಹೊಂದಿರುವ ವ್ಯಕ್ತಿಗಳಿಗೆ ಗುಹೇಶ್ವರನು ಒಲಿಯುತ್ತಾನೆ.)



೧೬. ತನು ಬತ್ತಲೆಯಿದ್ದಡೇನೋ ಮನಶುಚಿಯಾಗದನ್ನಕ್ಕರ
ಮಂಡೆ ಬೋಳಾದಡೇನೋ ಭಾವ ಬಯಲಾಗದನ್ನಕ್ಕರ
ಭಸ್ಮವ ಪೂಸಿದಡೇನೋ ಕರಣಾದಿ ಗುಣಂಗಳನೊತ್ತಿ ಮೆಟ್ಟಿ
ಸುಡದನ್ನಕ್ಕರ
ಇಂತೀ ಆಶೆಯ ವೇಷದ ಭಾಷೆಗೆ
ಗುಹೇಶ್ವರ ನೀ ಸಾಕ್ಷಿಯಾಗಿ ಛೀ ಎಂಬೆನು.

ವ್ಯಕ್ತಿಯು ತನ್ನ ಮಯ್=ಮನದಲ್ಲಿ ತುಡಿಯುವ ಕೆಟ್ಟಬಯಕೆಗಳನ್ನು ಹತ್ತಿಕ್ಕಿಕೊಂಡು ಒಳಿತಿನ ನಡೆನುಡಿಗಳಿಂದ ಬಾಳದೆ, ಹೊರನೋಟಕ್ಕೆ ಮಾತ್ರ ಎಲ್ಲ ಕಾಮನೆಗಳನ್ನು ತೊರೆದವನಂತೆ ತೋರಿಸಿಕೊಳ್ಳಲು ತಳೆದಿರುವ ಬಹುಬಗೆಯ ರೂಪಗಳನ್ನು ಈ ವಚನದಲ್ಲಿ ಅಲ್ಲಗಳೆಯಲಾಗಿದೆ.

(ತನು=ಮಯ್/ದೇಹ/ಶರೀರ ; ಬತ್ತಲೆ+ಇದ್ದಡೆ+ಏನೋ; ಬತ್ತಲೆ=ಮಯ್ ಮೇಲೆ ಉಡುಗೆ ತೊಡುಗೆಯಿಲ್ಲದಿರುವುದು/ಬರಿ ಮಯ್; ಇದ್ದಡೆ=ಇದ್ದರೆ ; ಏನೋ=ಏನು ತಾನೆ ಪ್ರಯೋಜನ/ಏನನ್ನು ಪಡೆದಂತಾಗುತ್ತದೆ ; ಮನ+ಶುಚಿ+ಆಗದ+ಅನ್ನಕ್ಕರ ; ಮನ=ಮನಸ್ಸು; ಶುಚಿ=ಯಾವುದೇ ಬಗೆಯ ಕೊಳೆಯಾಗಲಿ/ಕಲೆಯಾಗಲಿ ಇಲ್ಲದಿರುವುದು ; ಮನಶುಚಿ=ಮನದಲ್ಲಿ ಮೂಡುವಂತಹ ಬಯಕೆಗಳಲ್ಲಿ ಒಳಿತನ್ನು ಉಳಿಸಿಕೊಂಡು, ಕೆಡುಕಿನ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವ ಕೆಲಸ; ಆಗದ=ಉಂಟಾಗದಿರುವುದು/ಆಗದೆ ಹೋಗುವುದು; ಅನ್ನಕ್ಕರ=ಅಲ್ಲಿಯವರೆಗೆ/ಅಲ್ಲಿಯ ತನಕ ; ಆಗದನ್ನಕ್ಕರ=ಆಗದಿರುವ ತನಕ ;

ಮಂಡೆ=ತಲೆ/ತಲೆಬುರುಡೆ ; ಬೋಳ್+ಆದಡೆ+ಏನೋ ; ಬೋಳ್=ತಲೆಗೂದಲನ್ನು ತೆಗೆಸುವುದು/ದೇವರಿಗೆ ತಲೆಗೂದಲನ್ನು ಮುಡಿ ಕೊಡುವುದು ; ಆದಡೆ=ಆದರೆ/ಹಾಗೆ ಮಾಡಿದರೆ ; ಭಾವ=ಮನದೊಳಗೆ ತುಡಿಯುವಂತಹ ಒಳಮಿಡಿತಗಳು ; ಬಯಲ್+ಆಗದ+ಅನ್ನಕ್ಕರ ; ಬಯಲು=ಇಲ್ಲವಾಗುವುದು/ಲಯಗೊಳ್ಳುವುದು ; ಭಾವ ಬಯಲು=ಮನದೊಳಗೆ ತುಡಿಯುವಂತಹ ನೂರಾರು ಒಳಮಿಡಿತಗಳಲ್ಲಿ ಕೆಟ್ಟ ಬಯಕೆಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳ್ಳೆಯ ಬಯಕೆಗಳು ಅಂದರೆ ತನಗೆ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಒಳಮಿಡಿತಗಳನ್ನು ಮಾತ್ರ ಹೊಂದುವುದು ;

ಭಸ್ಮ=ಬೂದಿ/ಯಾವುದಾದರೊಂದು ವಸ್ತುವನ್ನು ಬೆಂಕಿಯಿಂದ ಸುಟ್ಟಾಗ ದೊರೆಯುವ ಪುಡಿ/ಗೋವಿನ ಸಗಣಿಯನ್ನು ಒಣಗಿಸಿ ಬೆಂಕಿಯಲ್ಲಿ ಸುಟ್ಟಾಗ ದೊರೆಯುವ ಪುಡಿ;

ಪೂಸಿದಡೆ+ಏನೋ ; ಪೂಸು=ಬಳಿದುಕೊಳ್ಳುವುದು/ಲೇಪಿಸಿಕೊಳ್ಳುವುದು; ಪೂಸಿದಡೆ=ನೋಡುವವರ ಕಣ್ಣಿಗೆ ತಾವು ದೇವರಲ್ಲಿ ಒಲವು ಉಳ್ಳವರೆಂದು ತೋರಿಸಿಕೊಳ್ಳುವುದಕ್ಕಾಗಿ ಪವಿತ್ರವೆಂದು ನಂಬಿರುವ ಬೂದಿ ಮತ್ತು ಹಣೆ/ಮಯ್ ಮೇಲೆ ಬಳಿದುಕೊಂಡರೆ ; ಕರಣ+ಆದಿ; ಕರಣ=ಒಡಲು/ದೇಹ/ಮಯ್; ಆದಿ=ಮೊದಲು/ಮೂಲ ; ಗುಣಂಗಳನ್+ಒತ್ತಿ ; ಗುಣ=ನಡತೆ/ನಡೆನುಡಿ ; ಒತ್ತಿ=ಅಮುಕಿ/ಅದುಮಿ; ಮೆಟ್ಟಿ=ತುಳಿದು; ಸುಡದ+ಅನ್ನಕ್ಕರ; ಸುಡು=ಸುಟ್ಟುಹಾಕು/ಇಲ್ಲವಾಗಿಸು/ನಾಶಪಡಿಸು ; ಸುಡದನ್ನಕ್ಕರ=ಸುಟ್ಟು ನಾಶಮಾಡದ ತನಕ ;

ಕರಣಾದಿ ಗುಣಂಗಳನ್ನು ಒತ್ತಿ ಮೆಟ್ಟಿ ಸುಡುವುದು=ಕಣ್ಣು/ಕಿವಿ/ಮೂಗು/ತೊಗಲು/ನಾಲಗೆ ಎಂಬ ಅಯ್ದು ಬಗೆಯ ಇಂದ್ರಿಯಗಳಿಂದ ಮಯ್ ಮನಗಳಲ್ಲಿ ತುಡಿಯುವಂತಹ ಒಳ್ಳೆಯ ಮತ್ತು ಕೆಟ್ಟ ಒಳಮಿಡಿತಗಳಲ್ಲಿ, ಕೆಟ್ಟ ಕಾಮನೆಗಳನ್ನು ಮನದಲ್ಲಿಯೇ ಹತ್ತಿಕ್ಕಿ, ಅವನ್ನು ಹೊರಕ್ಕೆ ಬಿಡದಂತೆ ಎಚ್ಚರ ವಹಿಸುವುದು ; ಇಂತು+ಈ ; ಇಂತು=ಈ ರೀತಿಯಲ್ಲಿ/ಬಗೆಯಲ್ಲಿ ; ಆಸೆ=ಕಾಮನೆ/ಬಯಕೆ ; ವೇಷ=ಉಡುಗೆ ತೊಡುಗೆ ; ಭಾಷೆ=ಆಡುವ ನುಡಿ ;

ಈ ಆಸೆಯ ವೇಷದ ಭಾಷೆಗೆ=ಮಯ್ ಮನಗಳಲ್ಲಿ ಅಪಾರವಾದ ಕೆಟ್ಟಕಾಮನೆಗಳನ್ನು ಇಟ್ಟುಕೊಂಡು, ತನ್ನೊಡನೆ ವ್ಯವಹರಿಸುವವರ ಕಣ್ಮನಗಳಲ್ಲಿ ಎಲ್ಲ ಬಗೆಯ ಕಾಮನೆಗಳನ್ನು ತೊರೆದವನಂತೆ ಕಾಣಿಸಿಕೊಳ್ಳಲೆಂದು ತಳೆದಿರುವ ರೂಪ ಮತ್ತು ನಡೆನುಡಿಗಳಿಗೆ ; ಗುಹೇಶ್ವರ=ಶಿವನೇ/ದೇವರೇ; ನೀ=ನೀನು ; ಸಾಕ್ಷಿ+ಆಗಿ ; ಸಾಕ್ಷಿ=ಕಂಡದ್ದನ್ನು ಕಂಡಂತೆ ಹೇಳುವ ವ್ಯಕ್ತಿ ; ಛೀ=ಕೆಟ್ಟದ್ದನ್ನು ಕಂಡಾಗ/ಗುರುತಿಸಿದಾಗ ತಿರಸ್ಕಾರ ಸೂಚಕವಾಗಿ ಆಡುವ ಮಾತು ; ಎಂಬೆನು=ಎನ್ನುವೆನು.)



೧೭. ದೇಹದೊಳಗೆ ದೇವಾಲಯವಿದ್ದು
ಮತ್ತೆ ಬೇರೆ ದೇವಾಲಯವೇಕೆ
ಎರಡಕ್ಕೆ ಹೇಳಲಿಲ್ಲಯ್ಯ ಗುಹೇಶ್ವರ
ನೀನು ಕಲ್ಲಾದರೆ ನಾನೇನಪ್ಪೆನು.

ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣಶರಣೆಯರು ದೇಗುಲವನ್ನು ನಿರಾಕರಿಸಿ, ದೇವರನ್ನು ಒಪ್ಪಿಕೊಂಡಿದ್ದರು. ಅವರ ದೇವರು "ಕಲ್ಲು/ಮಣ್ಣು/ಲೋಹ/ಮರದಿಂದ ಮಾಡಿದ" ಮೂರ್ತಿಯಾಗಿರಲಿಲ್ಲ. ವ್ಯಕ್ತಿಯ ಮಯ್=ಮನದಲ್ಲಿ ಅರಿವು ಮತ್ತು ಸಾಮಾಜಿಕ ಎಚ್ಚರವನ್ನು ನೀಡುವ ಒಳದನಿಯನ್ನು ದೇವರೆಂದು ತಿಳಿದಿದ್ದರು. ವ್ಯಕ್ತಿಯು ಜೀವನದಲ್ಲಿ ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳಲ್ಲಿ ದೇವರನ್ನು ಕಾಣುತ್ತಿದ್ದರು. ಆದುದರಿಂದಲೇ ಅಲ್ಲಮನು ತನ್ನ ದೇಹವನ್ನೇ ದೇವರು ನೆಲೆಸಿರುವ ದೇವಾಲಯವೆಂದು ಈ ವಚನದಲ್ಲಿ ಹೇಳಿದ್ದಾನೆ.

(ದೇಹದ+ಒಳಗೆ ; ದೇವ+ಆಲಯ+ಇದ್ದು; ದೇವ=ಜೀವನದಲ್ಲಿ ಬರುವ ಎಡರುತೊಡರುಗಳನ್ನು ನಿವಾರಿಸಿ, ತಮಗೆ ಒಳಿತನ್ನು ಮಾಡಿ ಕಾಪಾಡುವ ವ್ಯಕ್ತಿಯನ್ನು/ಶಕ್ತಿಯನ್ನು 'ದೇವ/ದೇವರು' ಎಂದು ಮಾನವ ಸಮುದಾಯ ನಂಬಿದೆ; ಆಲಯ=ನಿವಾಸ/ನೆಲೆಸಿರುವ ಜಾಗ ; ದೇವಾಲಯ=ದೇವರ ವಿಗ್ರಹ ನೆಲೆಗೊಂಡಿರುವ ಜಾಗ/ನೆಲೆ; ಮತ್ತೆ=ತಿರುಗಿ/ಇನ್ನೊಮ್ಮೆ/ಆಮೇಲೆ; ಬೇರೆ=ಇನ್ನೊಂದು/ಮತ್ತೊಂದು; ದೇವಾಲಯ+ಏಕೆ ;

ಎರಡು+ಅಕ್ಕೆ; ಅಕ್ಕೆ=ಆಗು/ಉಂಟಾಗು ; ಎರಡಕ್ಕೆ=ಸುಮ್ಮನೆ/ಕಾರಣವಿಲ್ಲದೆ ಎಂಬ ತಿರುಳಿನಲ್ಲಿ ಬಳಕೆಯಾಗುವ ಒಂದು ನುಡಿಗಟ್ಟು; ಹೇಳ್+ಅಲ್+ಇಲ್ಲ+ಅಯ್ಯ ; ಹೇಳಲಿಲ್ಲ+ಅಯ್ಯ ; ಅಯ್ಯ=ಗಂಡಸರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ಗುಹೇಶ್ವರ=ಶಿವ ; ಕಲ್ಲು+ಆದರೆ ; ನೀನು ಕಲ್ಲಾದರೆ=ಜೀವ ಮತ್ತು ಮನದ ಒಳಮಿಡಿತಗಳಿಲ್ಲದ ಜಡವಸ್ತುವಾದ ಕಲ್ಲಿನ ರೂಪವನ್ನು ನೀನು ತಳೆದರೆ/ಹೊಂದಿದರೆ ; ನಾನ್+ಏನ್+ಅಪ್ಪೆನು; ಅಪ್ಪೆನು=ಆಗುವೆನು ; ನಾನೇನಪ್ಪೆನು=ನಾನು ಏನಾಗುವೆನು/ನಿನ್ನನ್ನೇ ನಂಬಿರುವ ನಾನು ಹೇಗೆ ತಾನೆ ಒಳ್ಳೆಯ ನಡೆನುಡಿಗಳುಳ್ಳ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲಿ.)



೧೪. ನಾನೆಂಬಹಂಕಾರ ತಲೆದೋರಿದಲ್ಲಿ
ಅಟಮಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು
ಆ ಬಿರುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು
ಜ್ಞಾನಜ್ಯೋತಿ ಕೆಡಲೊಡನೆ
ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲರು
ತಾಮಸಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಕಾಣಾ ಗುಹೇಶ್ವರಾ.

ಎಲ್ಲ ರೀತಿಯಿಂದಲೂ ಇತರರಿಗಿಂತ ನಾನೇ ದೊಡ್ಡವನೆಂಬ /ನನ್ನಿಂದಲೇ ಎಲ್ಲವೂ ನಡೆಯುತ್ತಿದೆಯೆಂಬ/ನಾನಿಲ್ಲದೇ ಈ ಜಗತ್ತೇ ಇಲ್ಲವೆಂಬ ಅಹಂಕಾರದ ತುತ್ತತುದಿಯಲ್ಲಿ ಮೆರೆಯಲು ತೊಡಗುವ ವ್ಯಕ್ತಿಗಳು ಅರಿವನ್ನು ಕಳೆದುಕೊಂಡು ಹೇಗೆ ನೆಲಕಚ್ಚುತ್ತಾರೆ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

(ನಾನ್+ಎಂಬ+ಅಹಂಕಾರ; ನಾನ್=ನಾನು; ಎಂಬ=ಎನ್ನುವ; ಅಹಂಕಾರ=ನಾನೇ ದೊಡ್ಡವನು/ಒಳ್ಳೆಯವನು/ತಿಳಿದವನು/ಕಸುವುಳ್ಳವನು ಎಂಬ ಸೊಕ್ಕಿನ/ಗರ್ವದ/ಹಮ್ಮಿನ ನಡೆನುಡಿ; ತಲೆ+ತೋರಿದ+ಅಲ್ಲಿ; ತೋರು=ಕಂಡುಬರು/ಉಂಟಾಗು/ಗೋಚರಿಸು; ತಲೆ+ತೋರು=ತಲೆದೋರು=ಉಂಟಾಗುವುದು/ಕಂಡುಬರುವುದು/ಗೋಚರಿಸುವುದು ಎಂಬ ತಿರುಳಿನ ಒಂದು ನುಡಿಗಟ್ಟು, ಬೇರೆ ಬೇರೆ ತಿರುಳುಳ್ಳ ಎರಡು ಪದಗಳು ಜತೆಗೂಡಿ ಹೊಸಬಗೆಯ ತಿರುಳನ್ನು ಸೂಚಿಸುವ ಪದರೂಪಕ್ಕೆ ನುಡಿಗಟ್ಟು ಎಂದು ಹೆಸರು;

ಅಟಮಟ=ಸುಳ್ಳು/ದಿಟವಲ್ಲದ್ದು; ಕುಟಿಲ=ವಂಚನೆ/ಕಪಟ/ಕುತಂತ್ರ/ಮೋಸ; ಕುಹಕ+ಎಂಬ; ಕುಹಕ=ಮಾಯೆ/ಮಾಟ/ಕಣ್ಕಟ್ಟು/ಇಂದ್ರಜಾಲ; ಬಿರುಗಾಳಿ=ಬಿರುಸಾಗಿ/ಜೋರಾಗಿ ಬೀಸುವ ಗಾಳಿ; ಹುಟ್ಟಿ+ಇತ್ತು; ಹುಟ್ಟು=ಮೂಡು/ಜನಿಸು/ಉಂಟಾಗು ; ಹುಟ್ಟಿತ್ತು=ಮೂಡಿಬಂದಿತ್ತು;

ಅಟಮಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು=ನಾನೇ ಎಲ್ಲರಿಗಿಂತಲೂ ದೊಡ್ಡವನು / ನನ್ನಿಂದಲೇ ಎಲ್ಲವೂ ನಡೆಯುತ್ತಿದೆ ಎಂಬ ನಾನತ್ವದ ಒಳಮಿಡಿತವು ವ್ಯಕ್ತಿಯ ಮನದಲ್ಲಿ ಹುಟ್ಟಿದಾಗ, ಆತನ ಸಾಮಾಜಿಕ ನಡೆನುಡಿಯಲ್ಲಿ ದೊಡ್ಡ ಬದಲಾವಣೆ ಉಂಟಾಗುತ್ತದೆ. ಅಹಂಕಾರದಿಂದ ಮೆರೆಯುವುದಕ್ಕಾಗಿ ಮತ್ತು ಅದನ್ನೇ ಉಳಿಸಿಕೊಳ್ಳುವುದಕ್ಕಾಗಿ ಬಗೆಬಗೆಯ ಸುಳ್ಳು/ಬೂಟಾಟಿಕೆ/ತಟವಟ/ವಂಚನೆ/ಮೋಸ/ಕಣ್ಕಟ್ಟಿನ ಅಂದರೆ ಇಲ್ಲದ್ದನ್ನು ಇದೆಯೆಂದು ಇರುವುದನ್ನು ಇಲ್ಲವೆಂದು ನಂಬಿಸುವಂತೆ

ಮಾಡುವ ಮಾತುಗಳು / ಕ್ರೂರತನದ ನಡೆನುಡಿಗಳು ಅಹಂಕಾರಗೊಂಡ ವ್ಯಕ್ತಿಯಲ್ಲಿ ಕಂಡುಬರುತ್ತವೆ ಎಂಬ ರೂಪಕದ ತಿರುಳಿನಲ್ಲಿ ಈ ವಾಕ್ಯ ಬಳಕೆಯಾಗಿದೆ;

ಹುಟ್ಟಲ್+ಒಡನೆ; ಒಡನೆ=ಕೂಡಲೇ/ಆ ಗಳಿಗೆಯಲ್ಲೇ; ಹುಟ್ಟಲೊಡನೆ=ಮೂಡುತ್ತಿದ್ದಂತೆಯೇ/ಗೋಚರಿಸುತ್ತಿದ್ದಂತೆಯೇ; ಆ ಬಿರುಗಾಳಿ ಹುಟ್ಟಲೊಡನೆ=ಅಹಂಕಾರಿಯಾದ ವ್ಯಕ್ತಿಯ ದುರುಳತನದ ನಡೆನುಡಿಗಳಿಂದಾಗಿ; ಜ್ಞಾನ=ಅರಿವು/ತಿಳುವಳಿಕೆ/ಒಳಿತು ಕೆಡುಕುಗಳನ್ನು ವಿಂಗಡಿಸಿ ನೋಡುವ ವಿವೇಕ; ಜ್ಯೋತಿ=ಬೆಳಕು/ಕಾಂತಿ/ತೇಜಸ್ಸು/ಪ್ರಕಾಶ/ದೀವಿಗೆ; ಜ್ಞಾನಜ್ಯೋತಿ=ವ್ಯಕ್ತಿಯನ್ನು ಒಳಿತನ ಕಡೆಗೆ ಅಡಿಯಿಡುವಂತೆ/ನಡೆಯುವಂತೆ ಮಾಡುವ ಅರಿವು/ತಿಳಿವು/ವಿವೇಕದ ಒಳಮಿಡಿತ; ಕೆಟ್ಟು+ಇತ್ತು; ಕೆಟ್ಟಿತ್ತು=ನಂದಿ ಹೋಯಿತು/ಆರಿ ಹೋಯಿತು/ಇಲ್ಲವಾಯಿತು; ಕೆಡಲ್+ಒಡನೆ; ಕೆಡು=ಅಳಿ/ನಾಶವಾಗು/ಇಲ್ಲವಾಗು/ಹಾಳಾಗುವುದು; ಕೆಡಲೊಡನೆ=ಇಲ್ಲವಾಗುತ್ತಿದ್ದಂತೆಯೇ/ಹಾಳಾಗುತ್ತಿದ್ದಂತೆಯೇ/ನಾಶವಾದ ಗಳಿಗೆಯಲ್ಲೇ; ನಾ=ನಾನು; ಬಲ್ಲ್+ಎ; ಬಲ್ಲ=ತಿಳಿದ/ಅರಿತ; ಬಲ್ಲೆ=ತಿಳಿದಿದ್ದೇನೆ/ಅರಿತಿದ್ದೇನೆ;

ಬಲ್ಲಿದ+ಅರ್+ಎಂಬ; ಬಲ್ಲಿದ=ಕಸುವುಳ್ಳವನು/ಶಕ್ತನಾದವನು/ತಿಳಿದವನು/ಅರಿತವನು; ಅರುಹಿರಿಯರು+ಎಲ್ಲರು; ಬಲ್ಲಿದರು=ತಿಳಿದವರು/ಅರಿತವರು; ಅರುಹಿರಿಯರು=ವಿದ್ಯೆಯನ್ನು ಗಳಿಸಿದವರು ಮತ್ತು ವಯಸ್ಸಿನಲ್ಲಿ ದೊಡ್ಡವರು; ತಾಮಸಕ್ಕೆ+ಒಳಗೆ+ಆಗಿ; ತಾಮಸ=ತಿಳಿಗೇಡಿತನ/ಅರಿವನ್ನು ಕಳೆದುಕೊಳ್ಳುವಿಕೆ; ಒಳಗಾಗಿ=ಗುರಿಯಾಗಿ/ಸಿಲುಕಿ/ಈಡಾಗಿ/ವಶವಾಗಿ; ಸೀಮೆ+ತಪ್ಪು+ಇ; ಸೀಮೆ=ಎಲ್ಲೆ/ಮೇರೆ/ಗಡಿ; ತಪ್ಪು=ಬಿಡು/ಉಳಿ/ಕೆಡು; ಸೀಮೆದಪ್ಪು=ಎಲ್ಲೆ ಮೀರುವುದು/ಮಿತಿಯನ್ನು ದಾಟುವುದು/ದಾರಿ ತಪ್ಪುವುದು ಎಂಬ ತಿರುಳಿನ ನುಡಿಗಟ್ಟು; ಕೆಟ್ಟರು=ಹಾಳಾದರು/ನಾಶವಾದರು; ಸೀಮೆದಪ್ಪಿ ಕೆಟ್ಟರು=ಒಳ್ಳೆಯ ನಡೆನುಡಿಗಳನ್ನು ತೊರೆದು, ಕೆಟ್ಟ ನಡೆನುಡಿಗಳಿಗೆ ಒಳಗಾಗಿ ಹಾಳಾದರು; ಕಾಣ್+ಆ; ಕಾಣ್=ನೋಡು/ತಿಳಿ; ಕಾಣಾ=ಅರಿತು ನೋಡು/ತಿಳಿದು ನೋಡು; ಗೊಹೇಶ್ವರ>ಗುಹೇಶ್ವರ=ಶಿವ.)



೧೯. ನಾನು ಘನ ತಾನು ಘನವೆಂಬ

ಹಿರಿಯರುಂಟೆ ಜಗದೊಳಗೆ

ಹಿರಿದು ಕಿರಿದೆಂದಲ್ಲಿ ಏನಾಯಿತ್ತು

ಹಿರಿದು ಕಿರಿದೆಂಬ ಶಬ್ದವಡಗಿದರೆ

ಆತನೆ ಶರಣ ಗುಹೇಶ್ವರಾ.

ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ವ್ಯಕ್ತಿಗೆ ಹಿರಿಯತನವೆಂಬುದು ಅಯ್ದು ಕಾರಣಗಳಿಂದ ದೊರೆಯುತ್ತದೆ. ಇತರರಿಗಿಂತ ವಯಸ್ಸಿನಲ್ಲಿ ದೊಡ್ಡವನಾದ, ತಿಳುವಳಿಕೆಯಿಂದ ಕೂಡಿದ , ಜವಾಬ್ದಾರಿಯುತವಾದ ಗದ್ದುಗೆಯಲ್ಲಿರುವ, ಸಂಪತ್ತನ್ನು ಹೊಂದಿರುವ ಇಲ್ಲವೇ ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿರುವ ವ್ಯಕ್ತಿಯನ್ನು ಹಿರಿಯನೆಂದು ಜನರು ಒಪ್ಪಿಕೊಂಡು ಒಲವು ನಲಿವಿನಿಂದ ಕಾಣುತ್ತಾರೆ. ಆದ್ದರಿಂದ ಹಿರಿಯರು ಎನಿಸಿಕೊಂಡವರು ಯಾವುದೇ ಬಗೆಯ ಅಹಂಕಾರಕ್ಕೆ ಒಳಗಾಗದೆ, ಎಲ್ಲರೊಡನೆ ಒಂದಾಗಿ ಜತೆಗೂಡಿ, ಎಲ್ಲರನ್ನು ಸಮಾನವಾಗಿ ಕಾಣುತ್ತ, ಎಲ್ಲರ ಒಳಿತಿಗಾಗಿ ಬಾಳಬೇಕು ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.

(ಘನ=ಉತ್ತಮವಾದುದು/ದೊಡ್ಡದು/ಹೆಚ್ಚು; ಘನ+ಎಂಬ; ಎಂಬ=ಎನ್ನುವ/ ಎಂದು ಹೇಳಿಕೊಳ್ಳುವ; ಹಿರಿಯರು+ಉಂಟೆ; ಹಿರಿಯರು=ವಯಸ್ಸಿನಲ್ಲಿ/ತಿಳುವಳಿಕೆಯಲ್ಲಿ /ಗದ್ದುಗೆಯಲ್ಲಿ/ಸಂಪತ್ತಿನಲ್ಲಿ/ಒಳ್ಳೆಯ ನಡೆನುಡಿಯಲ್ಲಿ ದೊಡ್ಡವರು;

ಉಂಟೆ=ಇರುವರೇ/ಇದ್ದಾರೆಯೇ; ಹಿರಿಯರುಂಟೆ=ಹಿರಿಯರು ಇದ್ದಾರೆಯೇ; ಜಗದ+ಒಳಗೆ; ಜಗ=ಜಗತ್ತು/ಪ್ರಪಂಚ/ಇಳೆ; ಜಗದೊಳಗೆ=ಜಗತ್ತಿನಲ್ಲಿ;

ನಾನು ಘನ ತಾನು ಘನ="ನಾನೇ ಎಲ್ಲವನ್ನೂ ತಿಳಿದವನು/ನಾನೇ ಎಲ್ಲರಿಗಿಂತಲೂ ದೊಡ್ಡವನು/ನನ್ನಿಂದಲೇ ಈ ಜಗತ್ತಿನಲ್ಲಿ ಎಲ್ಲವೂ ನಡೆಯುತ್ತಿದೆ" ಎಂಬ ಅಹಂಕಾರದ ಒಳಮಿಡಿತಗಳಿಂದ ಕೂಡಿರುವ ವ್ಯಕ್ತಿ;

ನಾನು ಘನ ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ=ಜಗತ್ತಿನಲ್ಲಿ ಅಹಂಕಾರದ ನಡೆನುಡಿಗಳಿಂದ ಕೂಡಿರುವ ವ್ಯಕ್ತಿಯು ಎಂದೆಂದಿಗೂ ಹಿರಿಯನಾಗಲಾರ. ಏಕೆಂದರೆ ಇಂತಹ ವ್ಯಕ್ತಿಯು ಇತರರ ಒಳ್ಳೆಯ ನಡೆನುಡಿಗಳನ್ನು ಕಡೆಗಣಿಸುತ್ತಾನೆ. ತನ್ನನ್ನು ತಾನೇ ಹೊಗಳಿಕೊಂಡು ಮೆರೆಯುತ್ತ, ಇತರರ ಬಗ್ಗೆ ಅಸೂಯೆ, ಅಸಹನೆ ಮತ್ತು ಕ್ರೂರತನದಿಂದ ನಡೆದುಕೊಳ್ಳುತ್ತಾನೆ;

ಹಿರಿದು=ದೊಡ್ಡದು; ಕಿರಿದು+ಎಂದ+ಅಲ್ಲಿ; ಕಿರಿದು=ಚಿಕ್ಕದು; ಎಂದ=ಹೇಳುವ; ಎಂದಲ್ಲಿ=ಹೇಳುವ ನೆಲೆಯಲ್ಲಿ; ಏನ್+ಆಯಿತ್ತು; ಏನ್=ಯಾವುದು; ಆಯಿತ್ತು=ಆದುದು;

ಹಿರಿದು ಕಿರಿದೆಂದಲ್ಲಿ ಏನಾಯಿತ್ತು=ಹಿರಿದು ಕಿರಿದು ಎಂದು ತಾರತಮ್ಯ ಮಾಡುವ ನೆಲೆಯಲ್ಲಿ ಯಾವುದೇ ಬಗೆಯ ಒಳಿತಿನ ಕೆಲಸಗಳು ನಡೆಯುವುದಿಲ್ಲ. ಏಕೆಂದರೆ ಕುಟುಂಬದಲ್ಲಾಗಲಿ ಇಲ್ಲವೇ ಸಾಮಾಜಿಕ ನೆಲೆಯಲ್ಲಾಗಲಿ ವ್ಯಕ್ತಿಗಳ ನಡುವೆ "ನಾನು ದೊಡ್ಡವನು-ಅವನು ಚಿಕ್ಕವನು; ನಾನು ಮೇಲು-ಅವನು ಕೀಳು" ಎಂಬ ತಾರತಮ್ಯ ಉಂಟಾದಾಗ, ನಾನು ದೊಡ್ಡವನು ಅಂದುಕೊಂಡ ವ್ಯಕ್ತಿಯು ಉಳಿದವರನ್ನು ತನ್ನ ಅಡಿಯಾಳುಗಳನ್ನಾಗಿ ಮಾಡಿಕೊಂಡು ದಬ್ಬಾಳಿಕೆಯ ನಡೆನುಡಿಗಳಿಂದ ಕಿರುಕುಳವನ್ನು ಕೊಡತೊಡಗುತ್ತಾನೆ. ಆಗ ವ್ಯಕ್ತಿಗಳ ನಡುವಣ ಒಲವು ನಲಿವಿನ ನಂಟು ಮುರಿದುಬಿದ್ದು , ಎಲ್ಲರ ನೆಮ್ಮದಿಯ ಹಾಳಾಗುತ್ತದೆ. ಆದ್ದರಿಂದ ಹಿರಿದು ಕಿರಿದೆಂಬ ತಾರತಮ್ಯದ ನಡೆನುಡಿಯು ಜೀವನದಲ್ಲಿ ಯಾರಿಗೂ ಒಳಿತನ್ನು ಉಂಟುಮಾಡುವುದಿಲ್ಲ;

ಹಿರಿದು+ಕಿರಿದು+ಎಂಬ;ಶಬ್ದ+ಅಡಗಿದಡೆ;ಶಬ್ದ=ಮಾತು/ಪದ/ನುಡಿ; ಅಡಗು= ಮರೆಯಾಗು/ಕೊನೆಗೊಳ್ಳು/ಇಲ್ಲವಾಗು; ಅಡಗಿದಡೆ=ಅಡಗಿದರೆ/ಇಲ್ಲವಾದರೆ/ ಕೊನೆಗೊಂಡರೆ; ಆತನೆ=ಅಂತಹ ವ್ಯಕ್ತಿಯೇ;ಶರಣ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು,ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು/ಶಿವನನ್ನು ಪೂಜಿಸುವವನು/ಶಿವನಿಗೆ ಒಲಿದವನು;

ಗುಹೇಶ್ವರ=ಶಿವ/ಅಲ್ಲಮನ ಮೆಚ್ಚಿನ ದೇವರು/ಅಲ್ಲಮನ ವಚನಗಳಲ್ಲಿ ಬಳಕೆಯಾಗಿರುವ ಅಂಕಿತನಾಮ;

ಹಿರಿದು ಕಿರಿದೆಂಬ ಶಬ್ದವಡಗಿದಡೆ ಆತನೆ ಶರಣ=ನಾನೇ ದೊಡ್ಡವನು ಇತರರು ಕೀಳು ಎಂಬ ಅಹಂಕಾರದ ನಡೆನುಡಿಗಳನ್ನು ಬಿಟ್ಟು, ನಾನು ಯಾರಿಗಿಂತಲೂ ಮೇಲು ಅಲ್ಲ, ಕೀಳು ಅಲ್ಲ ಎಂಬ ಅರಿವನ್ನು ಪಡೆದುಕೊಂಡು, ಸಮಾನತೆಯಿಂದ ಎಲ್ಲರೊಡನೆ ಒಂದಾಗಿ ಬಾಳುವ ವ್ಯಕ್ತಿಯು ಶರಣನ ವ್ಯಕ್ತಿತ್ವವನ್ನು ಪಡೆಯುತ್ತಾನೆ.)



೨೦. ನಾ ದೇವನಲ್ಲದೆ ನೀ ದೇವನೇ
ನೀ ದೇವನಾದರೆ ಎನ್ನನೇಕೆ ಸಲಹೆ
ಆರೈದು ಒಂದು ಕುಡಿತೆ ಉದಕವನೆರೆವೆ
ಹಸಿದಾಗ ಒಂದು ತುತ್ತು ಓಗರವನಿಕ್ಕುವೆ
ನಾ ದೇವ ಕಾಣಾ ಗುಹೇಶ್ವರ.

"ದೇವರು ಎಂಬುವನು ಮಾನವನ ಮನದ ಕಲ್ಪನೆಯಿಂದ ಮೂಡಿರುವ ವ್ಯಕ್ತಿ/ಶಕ್ತಿಯೇ ಹೊರತು ಮತ್ತೇನಲ್ಲ" ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

(ನಾ=ನಾನು ; ದೇವನ್+ಅಲ್ಲದೆ ; ದೇವ/ದೇವರು=ಜೀವನದಲ್ಲಿ ಬರುವ ಎಡರು ತೊಡರುಗಳನ್ನು ನಿವಾರಿಸಿ ತಮಗೆ ಒಳಿತನ್ನು ಮಾಡಿ ಕಾಪಾಡುವ ವ್ಯಕ್ತಿ/ಶಕ್ತಿಯನ್ನು 'ದೇವ/ದೇವರು' ಎಂದು ಮಾನವ ಸಮುದಾಯ ನಂಬಿದೆ; ನೀ=ನೀನು; ದೇವನ್+ಆದರೆ; ಎನ್ನನ್+ಏಕೆ ; ಎನ್ನನ್=ನನ್ನನ್ನು; ಏಕೆ=ಯಾತಕ್ಕಾಗಿ/ಯಾವುದಕ್ಕಾಗಿ; ಸಲಹು=ಕಾಪಾಡು; ಎನ್ನನೇಕೆ ಸಲಹೆ=ನನ್ನನ್ನೇಕೆ ಕಾಪಾಡುವುದಿಲ್ಲ ;

ಆರೈದು=ಯೋಚಿಸಿ/ಚಿಂತಿಸಿ/ಕಾಳಜಿಯಿಂದ ; ಕುಡಿತೆ=ಬೊಗಸೆ/ಅಂಗಯ್ಗಳನ್ನು ಜೋಡಿಸಿದಾಗ ಉಂಟಾಗುವ ಜಾಗ; ಉದಕವನ್+ಎರೆವೆ; ಉದಕ=ನೀರು; ಎರೆ=ಸುರಿ/ಹಾಕು/ನೀಡು; ಎರೆವೆ=ನೀಡುತ್ತೇನೆ ; ಓಗರ+ಅನ್+ಇಕ್ಕುವೆ; ಓಗರ=ಅನ್ನ/ಅಟ್ಟ ಅಡುಗೆ/ತಿನಸು ಉಣಿಸು; ಅನ್=ಅನ್ನು ; ಇಕ್ಕುವೆ=ಉಣಬಡಿಸುವೆ; ಕಾಣಾ=ತಿಳಿದು ನೋಡು; ಗುಹೇಶ್ವರ=ಶಿವ).



೨೧. ನಿಮ್ಮಲ್ಲಿ ನೀವು ತಿಳಿದು ನೋಡಿರೇ ಅನ್ಯವಿಲ್ಲ ಕಾಣಿರಣ್ಣ
ಅರಿವು ನಿಮ್ಮಲ್ಲಿಯೇ ತದ್ಗತವಾಗಿಯದೆ
ಅನ್ಯಭಾವವ ನೆನೆಯದೆ
ತನ್ನೊಳಗೆ ತಾನೆಚ್ಚರಬಲ್ಲಡೆ
ತನ್ನಲ್ಲಿಯೆ ತನ್ಮಯ ಗುಹೇಶ್ವರ ಲಿಂಗವು.

**ಒಂದೆಡೆ ನಿಸರ್ಗದ ಸೆಳೆತ, ಮತ್ತೊಂದೆಡೆ ಸಾಮಾಜಿಕ ಸಂಪ್ರದಾಯ ಮತ್ತು ಕಟ್ಟುಪಾಡುಗಳ ನಡುವೆ ಸಿಲುಕಿರುವ ಮಾನವ ಜೀವಿಯು ತನ್ನ ಮಯ್ ಮನವನ್ನು ತಾನೇ ಹತೋಟಿಯಲ್ಲಿಟ್ಟುಕೊಂಡು, ತನ್ನ ಬದುಕನ್ನು ರೂಪಿಸಿಕೊಳ್ಳಬೇಕಾದ ಅಗತ್ಯವನ್ನು ಈ ವಚನದಲ್ಲಿ ಹೇಳಲಾಗಿದೆ.**

(ನಿಮ್ಮ+ಅಲ್ಲಿ; ತಿಳಿ=ಅರಿ/ಕಲಿ/ಆಲೋಚಿಸು; ನಿಮ್ಮಲ್ಲಿ ನೀವು ತಿಳಿದು ನೋಡಿರೇ=ಪ್ರತಿಯೊಬ್ಬ ವ್ಯಕ್ತಿಯು ತನ್ನ ಮಯ್ ಮನಗಳಲ್ಲಿ ತುಡಿಯುವಂತಹ ಒಳಮಿಡಿತಗಳನ್ನು ಮತ್ತು ತನ್ನ ಸುತ್ತಮುತ್ತಣ ಸಮಾಜದಲ್ಲಿನ ಆಗುಹೋಗುಗಳನ್ನು ಪರಸ್ಪರ ಒರೆಹಚ್ಚಿ ನೋಡಿದಾಗ, ಸಾಮಾಜಿಕ ವ್ಯಕ್ತಿಯ ಇತಿಮಿತಿಗಳು ಏನೆಂಬುದು ತಿಳಿದುಬಂದು, ತನ್ನನ್ನು ಒಳಗೊಂಡಂತೆ ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಒಳಿತು ಕೆಡುಕಿನ ನಡೆನುಡಿಗಳಿರುವುದು ಅರಿವಿಗೆ ಬರುತ್ತದೆ. ಈ ಬಗೆಯ ಒಳನೋಟದಿಂದ ಸದಾಕಾಲ ಜೀವನದ ಉದ್ದಕ್ಕೂ ನಮ್ಮನ್ನು ನಾವು ತಿದ್ದಿಕೊಂಡು ಬಾಳುತ್ತಿರಬೇಕು ಎಂಬ ಎಚ್ಚರ ಮತ್ತು ಅರಿವನ್ನು ಹೊಂದುವುದು ;

ಅನ್ಯ+ಇಲ್ಲ ; ಅನ್ಯ=ಬೇರೆ/ಇತರ ; ಕಾಣಿರಿ+ಅಣ್ಣಾ; ಕಾಣ್=ನೋಡು/ತಿಳಿ/ಅರಿ; ಅಣ್ಣಾ=ಗಂಡಸರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ಅರಿವು=ಯಾವುದು ಒಳ್ಳೆಯದು/ಕೆಟ್ಟದ್ದು-ಯಾವುದು ಸರಿ ಯಾವುದು ತಪ್ಪು ಎಂಬುದರ ಬಗೆಗಿನ ತಿಳುವಳಿಕೆ ; ನಿಮ್ಮ+ಅಲ್ಲಿಯೇ; ನಿಮ್ಮಲ್ಲಿಯೇ=ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ; ತದ್ಗತ+ಆಗಿ+ಅದೆ ; ತದ್ಗತ=ಅದರಲ್ಲಿಯೇ ಲೀನವಾಗಿರುವುದು/ಅಡಗಿರುವುದು/ ನೆಲೆಸಿರುವುದು; ನಿಮ್ಮಲ್ಲಿಯೇ ತದ್ಗತವಾಗಿಯದೆ=ಪ್ರತಿಯೊಬ್ಬ ವ್ಯಕ್ತಿಯ ಮಯ್ ಮನಗಳಲ್ಲಿ ನೆಲೆಸಿದೆ/ಅಡಗಿದೆ/ವ್ಯಾಪಿಸಿದೆ;

ಅನ್ಯಭಾವ=ಇನ್ನಿತರ ಸಂಗತಿ/ವಿಚಾರಗಳನ್ನು ; ನೆನೆ=ಆಲೋಚಿಸು/ಚಿಂತಿಸು/ಕಲ್ಪಿಸು; ಅನ್ಯಭಾವವ ನೆನೆಯದೆ=ಮತ್ತೊಂದನ್ನು ಅರಸದೆ/ಹುಡುಕದೆ ಇಲ್ಲವೇ ಹೊರಗಡೆ ಕಾಣಲು ತವಕಿಸದೆ ; ತನ್ನ+ಒಳಗೆ ; ತನ್ನೊಳಗೆ=ತನ್ನ ನಡೆನುಡಿಗಳಲ್ಲಿ/ಆಲೋಚನೆಯಲ್ಲಿ

; ತಾನ್+ಎಚ್ಚರ+ಬಲ್ಲಡೆ ; ತಾನ್=ವ್ಯಕ್ತಿಯು; ಎಚ್ಚರ=ಜಾಗರೂಕತೆ/ಎಲ್ಲವನ್ನೂ ಗಮನಿಸುವ ಕುಶಲತೆ; ಬಲ್ಲಡೆ=ಶಕ್ತನಾದರೆ/ಕಸುವನ್ನು ಹೊಂದಿದರೆ ; ತನ್ನೊಳಗೆ ತಾನೆಚ್ಚರಬಲ್ಲಡೆ=ತನ್ನ ಮಯ್ ಮನಗಳನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ನಡೆನುಡಿಗಳಿಂದ ಬಾಳಲು ಶಕ್ತನಾದರೆ ; ತನ್ನ+ಅಲ್ಲಿಯೆ ; ತನ್ನಲ್ಲಿಯೆ=ವ್ಯಕ್ತಿಯಲ್ಲಿಯೆ ; ತನ್ಮಯ=ಅದರಲ್ಲಿಯೇ ಮಗ್ನ/ಲೀನ/ಒಳಗೊಂಡಿರುವುದು ;

ತನ್ನಲ್ಲಿಯೆ ತನ್ಮಯ ಗುಹೇಶ್ವರ ಲಿಂಗವು=ತನ್ನನ್ನು ತಾನು ಅರಿತುಕೊಂಡು/ತಿದ್ದಿಕೊಂಡು ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿರುವಂತಹ ವ್ಯಕ್ತಿಯ ಮಯ್ ಮನಗಳಲ್ಲಿಯೇ ಗುಹೇಶ್ವರನು ನೆಲೆಸಿರುತ್ತಾನೆ. ದೇವರು ಮತ್ತು ವ್ಯಕ್ತಿಯ ಸಾಮಾಜಿಕ ಒಳ್ಳೆಯ ನಡೆನುಡಿಗಳು ಒಂದರೊಡನೊಂದು ಲೀನವಾಗಿರುತ್ತವೆ ಎಂಬುದು ಶಿವಶರಣಶರಣೆಯರ ನಿಲುವು.)



೨೨. ಬಿರುಗಾಳಿ ಬೀಸಿ ಮರ ಮುರಿವಂತಹ
ಸುಳುಹ ಸುಳಿಯದೆ
ತಂಗಾಳಿ ಪರಿಮಳದೊಡಗೂಡಿ
ಸುಳಿವಂತೆ ಸುಳಿಯಬೇಕು
ಸುಳಿದಡೆ ನೆಟ್ಟನೆ ಜಂಗಮವಾಗಿ ಸುಳಿಯಬೇಕು
ನಿಂದಡೆ ನೆಟ್ಟನೆ ಭಕ್ತನಾಗಿ ನಿಲ್ಲಬೇಕು
ಸುಳಿದು ಜಂಗಮವಾಗಲರಿಯದ
ನಿಂದು ಭಕ್ತನಾಗಲರಿಯದ
ಉಭಯಭ್ರಷ್ಟರನೇನೆಂಬೆ ಗುಹೇಶ್ವರಾ.

ಬಹಿರಂಗದಲ್ಲಿ ಶರಣರಂತೆ ಮತ್ತು ಜಂಗಮರಂತೆ ಉಡುಗೆ ತೊಡುಗೆಗಳನ್ನು ತೊಟ್ಟು, ಸಮಾಜದ ಕಣ್ಣಿನಲ್ಲಿ ಒಳ್ಳೆಯ ನಡೆನುಡಿಯುಳ್ಳವರಂತೆ ಕಾಣಿಸಿಕೊಳ್ಳುತ್ತ, ಅಂತರಂಗದ ಜೀವನದಲ್ಲಿ ನೀಚತನದಿಂದ ಬಾಳುತ್ತಿರುವ ವ್ಯಕ್ತಿಗಳನ್ನು ಕುರಿತು ಕಟುವಾಗಿ ಟೀಕಿಸುವುದರ ಜತೆಗೆ, ಗುರುಹಿರಿಯರಾದವರ ನಡೆನುಡಿಗಳು ಸಹಮಾನವರ ಮತ್ತು ಸಮಾಜದ ಬದುಕಿಗೆ ಒಳಿತನ್ನು ಮಾಡುವಂತಿರಬೇಕೆ ಹೊರತು ಕೇಡನ್ನು ಬಗೆಯುವಂತಿರಬಾರದು ಎಂಬ ಸಂಗತಿಯನ್ನು 'ಬಿರುಗಾಳಿ ಮತ್ತು ತಂಗಾಳಿ' ರೂಪಕಗಳ ಮೂಲಕ ಈ ವಚನದಲ್ಲಿ ಹೇಳಲಾಗಿದೆ.

(ಬಿರುಸು+ಗಾಳಿ; ಬಿರುಸು=ಜೋರು/ವೇಗವಾಗಿ ಚಲಿಸು; ಬಿರುಗಾಳಿ=ಬಿರುಸಾಗಿ ಬೀಸುವ ಗಾಳಿ/ಜೋರಾಗಿ ಬೀಸುವ ಗಾಳಿ/ಚಂಡ ಮಾರುತ; ಬೀಸು=ಸುಳಿ/ತೀಡು/ಚಾಚು/ಪಸರಿಸು; ಮುರಿ=ತುಂಡಾಗು/ಚೂರಾಗು/ಕಡಿ/ಕತ್ತರಿಸು; ಸುಳುಹು=ಜಾಡು/ರೀತಿ/ಬಗೆ; ಸುಳಿ=ಕಾಣಿಸಿಕೊಳ್ಳು/ಗೋಚರವಾಗು/ಬೀಸುವುದು; ಸುಳಿಯದೆ=ಬೀಸದೆ;

ಬಿರುಗಾಳಿ ಬೀಸಿ ಮರ ಮುರಿವಂತಹ ಸುಳುಹ ಸುಳಿಯದೆ=ಮರವನ್ನು ಬುಡಸಮೇತ ಕಿತ್ತು ಎಸೆಯುವ ಬಿರುಗಾಳಿಯಂತೆ ಕಾಣಿಸಿಕೊಳ್ಳದೆ;

ತಂಗಾಳಿ=ತಣ್ಣನೆಯ+ಗಾಳಿ; ತಣ್=ತಂಪು/ಶೀತದಿಂದ ಕೂಡಿದ/ತಣ್ಣಗಿರುವ; ಪರಿಮಳದ+ಒಡನೆ+ಕೂಡಿ; ಪರಿಮಳ=ಕಂಪು/ಒಳ್ಳೆಯ ವಾಸನೆ; ಒಡನೆ=ಜತೆಯಲ್ಲಿ; ಕೂಡು=ಸೇರು; ಒಡಗೂಡಿ=ಜತೆಸೇರಿಕೊಂಡು/ಒಂದಾಗಿ; ಸುಳಿವ+ಅಂತೆ; ಸುಳಿವ=ಕಂಡುಬರುವ/ಕಾಣಿಸಿಕೊಳ್ಳುವ; ಅಂತೆ=ಆ ರೀತಿಯಲ್ಲಿ/ಆ ಬಗೆಯಲ್ಲಿ; ಸುಳಿಯಬೇಕು=ಬೀಸಬೇಕು;

ತಂಗಾಳಿ ಪರಿಮಳದೊಡಗೂಡಿ ಸುಳಿವಂತೆ ಸುಳಿಯಬೇಕು=ನೂರಾರು ಬಗೆಯ ಮರಗಿಡಗಳಲ್ಲಿ ಅರಳಿರುವ ಹೂವುಗಳ ಕಂಪನ್ನು ತನ್ನಲ್ಲಿ ಒಳಗೊಂಡು ಸುಳಿಯುವ ತಂಗಾಳಿಯಂತೆ ಬೀಸಬೇಕು;

ಸುಳಿದಡೆ=ಕಾಣಿಸಿಕೊಂಡರೆ; ನೆಟ್ಟನೆ=ನೇರವಾಗಿ/ಚೆನ್ನಾಗಿ/ಸರಿಯಾಗಿ;

ಜಂಗಮ+ಆಗಿ; ಜಂಗಮ=ಒಳ್ಳೆಯ ನಡೆನುಡಿಗೆ ಪ್ರೇರಣೆಯಾಗುವಂತಹ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಜನಮನದಲ್ಲಿ ಮೂಡಿಸುತ್ತ ಎಲ್ಲಿಯೂ ಒಂದೆಡೆ ನಿಲ್ಲದೆ ಸದಾಕಾಲ ಸಂಚರಿಸುತ್ತಿರುವ ಶಿವಶರಣ; ಸುಳಿಯಬೇಕು=ಕಂಡುಬರಬೇಕು;

ಸುಳಿದಡೆ ನೆಟ್ಟನೆ ಜಂಗಮವಾಗಿ ಸುಳಿಯಬೇಕು=ಜಂಗಮನಾದವನು ಒಳ್ಳೆಯ ನಡೆನುಡಿಗಳಿಂದ ಜನಸಮುದಾಯಕ್ಕೆ ಒಳಿತನ್ನು ಮಾಡುತ್ತ ಬಾಳಬೇಕು;

ನಿಂದಡೆ=ನಿಂತುಕೊಂಡರೆ; ಭಕ್ತನ್+ಆಗಿ; ಭಕ್ತ=ಜನಸಮುದಾಯಕ್ಕೆ ಒಳಿತನ್ನು ಮಾಡುವ ನಡೆನುಡಿಗಳೇ ದೇವರೆಂದು ತಿಳಿದು ಬಾಳುತ್ತಿರುವವನು;

ನಿಂದಡೆ ನೆಟ್ಟನೆ ಭಕ್ತನಾಗಿ ನಿಲ್ಲಬೇಕು=ಶರಣನಾದವನು ಜೀವನದಲ್ಲಿ ಒಳ್ಳೆಯ ನಡೆನುಡಿಗಳನ್ನೇ ಅನುಸರಿಸುತ್ತ ಬಾಳಬೇಕು;

ಜಂಗಮ+ಆಗಲ್+ಅರಿಯದ; ಅರಿ=ತಿಳಿ/ಕಲಿ; ಅರಿಯದ=ತಿಳಿಯದ; ಭಕ್ತನ್+ಆಗಲ್+ ಅರಿಯದ; ಉಭಯ+ಭ್ರಷ್ಟರನ್+ಏನ್+ಎಂಬೆ; ಉಭಯ=ಎರಡು; ಭ್ರಷ್ಟ=ಒಳ್ಳೆಯ ನಡೆನುಡಿಯಿಲ್ಲದವನು;; ಉಭಯಭ್ರಷ್ಟರು=ಎರಡು ನೆಲೆಗಳಲ್ಲೂ ಹೀನವಾದ ನಡೆನುಡಿಯುಳ್ಳವರು. ಅಂದರೆ ಇತ್ತ ತಮ್ಮ ವ್ಯಕ್ತಿಗತ ಜೀವನದಲ್ಲಿ ಒಳ್ಳೆಯ ನಡೆನುಡಿಗಳನ್ನು ಹೊಂದಿರದೆ, ಅತ್ತ ಸಮಾಜಕ್ಕೆ ಕೇಡನ್ನು ಬಗೆಯುತ್ತಿರುವ ವ್ಯಕ್ತಿಗಳು; ಏನ್=ಯಾವುದು; ಎಂಬೆ=ಎನ್ನುವೆ/ಹೇಳುವೆ;

ಸುಳಿದು ಜಂಗವುವಾಗಲರಿಯುದ ನಿಂದು ಭಕ್ತನಾಗಲರಿಯುದ ಉಭಯಭ್ರಷ್ಟರನೇನೆಂಬೆ=ಬಹಿರಂಗದಲ್ಲಿ ಶರಣರಂತೆ ಮತ್ತು ಜಂಗಮರಂತೆ ಕಾಣಿಸಿಕೊಳ್ಳುತ್ತ, ಅಂತರಂಗದ ಜೀವನದಲ್ಲಿ ನೀಚತನದಿಂದ ಬಾಳುತ್ತಿರುವ ವ್ಯಕ್ತಿಗಳು/ ತಮ್ಮ ಮಯ್ ಮನಕ್ಕೆ ತಾವೇ ವಂಚನೆಯನ್ನು ಮಾಡಿಕೊಂಡು ಕೆಟ್ಟತನದಿಂದ ಕೂಡಿರುವ ವ್ಯಕ್ತಿಗಳು;

ಬಿರುಗಾಳಿಯು ಹುಚ್ಚೆದ್ದು ಬೀಸತೊಡಗಿದಾಗ ಹೇಗೆ ನಿಸರ್ಗದಲ್ಲಿನ ಮರಗಿಡಗಳೆಲ್ಲವೂ ಬುಡಸಮೇತ ಕಿತ್ತು ಬಿದ್ದು ಹಾಳಾಗುತ್ತವೆಯೋ, ಅಂತೆಯೇ ಗುರು ಹಿರಿಯರು ಎನಿಸಿಕೊಂಡವರು ಜಾತಿ, ಮತ ಮತ್ತು ದೇವರ ಹೆಸರಿನಲ್ಲಿ ಕೆಟ್ಟ ಉದ್ದೇಶದಿಂದ ಆಡುವ ನುಡಿಗಳು ಮತ್ತು ಮಾಡುವ ಕೆಲಸಗಳು ಜನರ ಮನದಲ್ಲಿ ಪರಸ್ಪರ ಅಪನಂಬಿಕೆ, ಅಸೂಯೆ ಮತ್ತು ಹಗೆತನವನ್ನುಂಟುಮಾಡಿ, ಇಡೀ ಸಮಾಜದ ಬದುಕನ್ನೇ ದುರಂತದತ್ತ ದೂಡುತ್ತವೆ.

ಆದ್ದರಿಂದ ಸಮಾಜದಲ್ಲಿ ಜವಾಬ್ದಾರಿಯುತವಾದ ಗದ್ದುಗೆಯಲ್ಲಿರುವ ವ್ಯಕ್ತಿಗಳು ಆಡುವ ನುಡಿಗಳು ಮತ್ತು ಮಾಡುವ ಕೆಲಸಗಳು ಪರಿಮಳದಿಂದ ಕೂಡಿದ ತಂಗಾಳಿಯಂತಿರಬೇಕು. ಅಂದರೆ ಜನರ ಮನದಲ್ಲಿ ಅರಿವು, ಒಲವು, ನಲಿವನ್ನು ಮೂಡಿಸಿ ಎಲ್ಲರೂ ಜತೆಗೂಡಿ ನೆಮ್ಮದಿಯಿಂದ ಬಾಳುವುದಕ್ಕೆ ದಾರಿ ತೋರಿಸುವಂತಿರಬೇಕು.)



೨೩. ಬೆಟ್ಟಕ್ಕೆ ಚಳಿಯಾದಡೆ ಏನ ಹೊದಿಸುವರಯ್ಯ
ಬಯಲು ಬತ್ತಲೆಯಿದ್ದರೆ ಏನನುಡಿಸುವರಯ್ಯ
ಭಕ್ತನು ಭವಿಯಾದಡೆ ಏನನುಪಮಿಸುವೆನಯ್ಯ ಗುಹೇಶ್ವರ.

ಒಳ್ಳೆಯ ನಡೆನುಡಿಗಳಿಂದ ತಮ್ಮ ಜೀವನವನ್ನು ರೂಪಿಸಿಕೊಂಡು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕಾದ ಹೊಣೆಯನ್ನು ಹೊತ್ತಿರುವ ವ್ಯಕ್ತಿಗಳೇ ಕೆಟ್ಟಹಾದಿಯನ್ನು ಹಿಡಿದು, ಸಮಾಜವನ್ನು ಹಾಳುಮಾಡತೊಡಗಿದಾಗ, ಅವರನ್ನು ತಡೆಯಲು ಇಲ್ಲವೇ ತಿದ್ದಿ ಸರಿಪಡಿಸಲು ಯಾರಿಂದಲೂ ಆಗುವುದಿಲ್ಲವೆಂಬ ಸಂಗತಿಯನ್ನು ಎರಡು ಶಬ್ದಚಿತ್ರಗಳ ಮೂಲಕ ಈ ವಚನದಲ್ಲಿ ಹೇಳಲಾಗಿದೆ.

(ಚಳಿ+ಆದಡೆ; ಚಳಿ=ತಂಡಿ/ತಂಪು/ಶೀತ; ಆದಡೆ=ಆದರೆ; ಏನ=ಏನನ್ನು/ಯಾವುದನ್ನು; ಹೊದಿಸುವರ್+ಅಯ್ಯ; ಹೊದಿಸು=ಮುಚ್ಚು/ಮೇಲೆ ಹಾಕು; ಬಯಲು=ಸಮತಟ್ಟಾಗಿರುವ ನೆಲ/ಪ್ರದೇಶ ; ಬತ್ತಲೆ+ಇದ್ದರೆ ; ಬತ್ತಲೆ=ಬರಿದಾಗಿರುವುದು/ತೆರೆದುಕೊಂಡಿರುವುದು; ಏನ್+ಅನ್+ಉಡಿಸುವರ್+ಅಯ್ಯ; ಅನ್=ಅನ್ನು; ಏನನ್=ಏನನ್ನು/ಯಾವುದನ್ನು ; ಉಡಿಸು=ಮಯ್/ವಸ್ತು/ಜಾಗವನ್ನು ಮರೆಮಾಡುವಂತೆ ಬಟ್ಟೆಯಿಂದ ಸುತ್ತುವುದು ;

"ಬೆಟ್ಟಕ್ಕೆ ಚಳಿಯಾದಡೆ ಏನ ಹೊದಿಸುವರಯ್ಯ ಮತ್ತು ಬಯಲು ಬತ್ತಲೆಯಿದ್ದರೆ ಏನನುಡಿಸುವರಯ್ಯ" ಎಂಬ ಈ ಎರಡು ರೂಪಕಗಳು "ಈ ಬಗೆಯ ಕೆಲಸಗಳನ್ನು ಮಾಡಲು ಆಗುವುದಿಲ್ಲ" ಎಂಬ ತಿರುಳನ್ನು ಸೂಚಿಸುತ್ತವೆ ; ಭಕ್ತ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು; ಭವಿ+ಆದಡೆ; ಭವಿ=ದುರಾಸೆ, ನೀಚತನ, ವಂಚನೆ ಮತ್ತು ಕ್ರೂರತನದ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವವನು ; ಏನ್+ಅನ್+ಉಪಮಿಸುವೆನ್+ಅಯ್ಯ ; ಉಪಮೆ=ಒಂದು ವಸ್ತು/ಜೀವಿ/ಸಂಗತಿಯನ್ನು ಮತ್ತೊಂದರ ಜತೆ ಹೋಲಿಸಿ ಬಣ್ಣಿಸುವುದು; ಏನನುಪಮಿಸುವೆನ್=ಏನೆಂದು ತಾನೆ ಹೇಳಲಿ; ಅಯ್ಯ=ಗಂಡಸರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ.)



೨೪. ಬೆವಸಾಯವ ಮಾಡಿ ಮನೆಯ ಬೀಯಕ್ಕೆ ಬತ್ತವಿಲ್ಲದಿದ್ದರೆ
ಆ ಬೆವಸಾಯದ ಘೋರವೇತಕಯ್ಯ
ಕ್ರಯವಿಕ್ರಯವ ಮಾಡಿ ಮನೆಯ ಸಂಚು ನಡೆಯದನ್ನಕ್ಕ
ಆ ಕ್ರಯವಿಕ್ರಯದ ಘೋರವೇತಕಯ್ಯ
ಒಡೆಯನನೋಲೈಸಿ ತನುವಿಂಗೆ ಅಷ್ಟಭೋಗವ ಪಡೆಯದಿದ್ದರೆ
ಆ ಓಲಗದ ಘೋರವೇತಕಯ್ಯ
ಭಕ್ತನಾಗಿ ಭವಂನಾಸ್ತಿಯಾಗದಿದ್ದರೆ ಆ ಉಪದೇಶವ ಕೊಟ್ಟ ಗುರು
ಕೊಂಡ ಶಿಷ್ಯ ಇವರಿಬ್ಬರ ಮನೆಯಲ್ಲಿ ಮಾರಿ ಹೊಗಲಿ
ಗುಹೇಶ್ವರಲಿಂಗವತ್ತಲೆ ಹೋಗಲಿ.

ಈ ವಚನದಲ್ಲಿ ಎರಡು ಸಂಗತಿಗಳನ್ನು ಹೇಳಲಾಗಿದೆ.

೧) ಯಾವುದೇ ವ್ಯಕ್ತಿಯು ತಾನು ಮಾಡಿದ ಕೆಲಸದಿಂದ ತನ್ನ ಜೀವನಕ್ಕೆ ಬೇಕಾದುದನ್ನು/ತಾನು ಬಯಸಿದ್ದನ್ನು ಪಡೆದುಕೊಳ್ಳಬೇಕು. ಇಲ್ಲದಿದ್ದರೆ ಆ ಕೆಲಸಕ್ಕಾಗಿ ಮಾಡಿದ ಮಯ್‍ಮನದ ದುಡಿಮೆ, ತೊಡಗಿಸಿದ ಹಣ ಮತ್ತು ಬಳಸಿದ ಸಮಯವೆಲ್ಲವೂ ಹಾಳಾಗುವುದಲ್ಲದೇ, ವ್ಯಕ್ತಿಗೆ ಹೆಚ್ಚಿನ ಆತಂಕ/ನಿರಾಶೆ/ಸಂಕಟವನ್ನು ನೀಡಿ ಬದುಕನ್ನು ಹಿಂಡುತ್ತವೆ. ಆದುದರಿಂದ ಯಾವುದೇ ಒಂದು ಕೆಲಸವನ್ನು ಕಯ್ಗೊಳ್ಳುವ ಮುನ್ನ, ಅದರ ಆಗುಹೋಗುಗಳ ಬಗ್ಗೆ ಮುನ್ನೆಚ್ಚರಿಕೆಯನ್ನು ಹೊಂದಿರಬೇಕೆಂಬುದನ್ನು ಮೂರು ಪ್ರಸಂಗಗಳ ಮೂಲಕ ಹೇಳಲಾಗಿದೆ.

ಗದ್ದೆಯನ್ನು ಉಳುಮೆ ಮಾಡಿ, ಹದಗೊಳಿಸಿ, ಬೀಜವನ್ನು ಬಿತ್ತಿ, ಒಟ್ಟಿಲನ್ನು ಹಾಕಿ, ಮೊಳಕೆಯೊಡೆದು ಬೆಳೆದ ಬತ್ತದ ಸಸಿಗಳನ್ನು/ಪಯಿರುಗಳನ್ನು ಕಿತ್ತು, ಮತ್ತೆ ನಾಟಿ ಮಾಡಿ, ಹಗಲಿರುಳೆನ್ನದೆ ಕಣ್ಣಲ್ಲಿ ಕಣ್ಣಿಟ್ಟು ಕಾಪಾಡಿ ಬೆಳೆದ ಬತ್ತದ ಬೆಳೆಯಿಂದ ಬೇಸಾಯಗಾರರ ಕುಟುಂಬದವರಿಗೆ ವರುಶಕ್ಕೆ ಬೇಕಾಗುವ ಪ್ರಮಾಣದ ಕೂಳು ದೊರೆಯದಿದ್ದರೆ, ಒಕ್ಕಲು ಮಕ್ಕಳು ಹಸಿವಿನ ಸಂಕಟದ ಜತೆಗೆ, ಸಾಲಸೋಲ ಮಾಡಿ ಬೇಸಾಯಕ್ಕೆಂದು ಸುರಿದಿದ್ದ ಹಣವನ್ನು ಕಳೆದುಕೊಂಡು ಬಡತನದ ಬೇಗೆಯಲ್ಲಿ ಬೇಯುತ್ತಾರೆ.

ತಮ್ಮಲ್ಲಿ ಇರುವ ಒಡವೆ ವಸ್ತುಗಳನ್ನು ಮಾರಾಟ ಮಾಡಿ ಬಂದ ಹಣದಿಂದ ತಮಗೆ ಬೇಕಾದುದನ್ನು ತೆಗೆದುಕೊಂಡು ಜೀವನದಲ್ಲಿ ನಲಿವು ನೆಮ್ಮದಿಯನ್ನು ಪಡೆಯದಿದ್ದರೆ, ಅಂತಹ ವಹಿವಾಟನಿಂದ ಮನೆ ಮಂದಿಯೆಲ್ಲಾ ಇನ್ನೂ ಹೆಚ್ಚಿನ ಆತಂಕ/ದುಗುಡ/ಸಂಕಟಗಳಿಗೆ ಒಳಗಾಗಿ ಪರಿತಪಿಸಬೇಕಾಗುತ್ತದೆ.

“ಒಡೆಯನನೋಲೈಸಿ ತನುವಿಂಗೆ ಅಷ್ಟಭೋಗವ ಪಡೆಯದಿದ್ದರೆ; ಆ ಓಲಗದ ಘೋರವೇತಕಯ್ಯ” ಎಂಬ ಈ ಮಾತುಗಳು ಈ ಕೆಳಕಂಡ ಎರಡು ಬಗೆಯ ತಿರುಳನ್ನು ನೀಡುತ್ತವೆ.

ಅ) ಸಿರಿಸಂಪದವುಳ್ಳ ಒಡೆಯನಿಗೆ ಎಲ್ಲಾ ರೀತಿಯಿಂದಲೂ ಒಳಿತಾಗುವಂತೆ ಊಳಿಗವನ್ನು ಮಾಡಿದ ಆಳು, ಅದಕ್ಕೆ ಬದಲಾಗಿ ಒಡೆಯನಿಂದ ತನ್ನ ಬದುಕಿನ ಒಲವು ನಲಿವಿಗೆ ಬೇಕಾದ ಒಡವೆ ವಸ್ತುಗಳನ್ನು ಪಡೆಯದಿದ್ದರೆ, ದುಡಿಮೆ ಮಾಡಿ ಬಸವಳಿದ ಆಳಿನ ಬಾಳು ಸಂಕಟಕ್ಕೆ ಗುರಿಯಾಗುತ್ತದೆ.

ಆ) ಗದ್ದುಗೆಯಲ್ಲಿ ಕುಳಿತಿರುವ ಅರಸನನ್ನು ಒಡ್ಡೋಲಗದಲ್ಲಿ ಇನ್ನಿಲ್ಲದ ರೀತಿಯಲ್ಲಿ ಹೊಗಳಿ ಕೊಂಡಾಡಿ, ಅವನಿಂದ ಬೆಲೆಬಾಳುವ ಒಡವೆವಸ್ತುಗಳನ್ನು ಉಡುಗೊರೆಯಾಗಿ ಪಡೆಯದಿದ್ದರೆ, ಒಡ್ಡೋಲಗದಿಂದ ಬರಿಗಯ್ಯಲ್ಲಿ ಹೊರಬರುವ ಸಂಕಟದಿಂದ ನರಳಬೇಕಾಗುತ್ತದೆ.

೨) ಬದುಕಿನಲ್ಲಿ ಒಳ್ಳೆಯ ನಡೆನುಡಿಗಳ ಹಾದಿಯಲ್ಲಿ ನಡೆಯಬೇಕೆಂಬ ಉದ್ದೇಶದಿಂದ ಗುರುವಿನ ಬಳಿಯಲ್ಲಿ ಮಾರ್ಗದರ್ಶನವನ್ನು ಪಡೆದ ಗುಡ್ಡನು ಅದರಂತೆ ನಡೆದುಕೊಳ್ಳದಿದ್ದರೆ, ಆಗ ಗುರು ಮತ್ತು ಗುಡ್ಡ– ಇವರಿಬ್ಬರ ವ್ಯಕ್ತಿತ್ವಕ್ಕೆ ಯಾವ ಬೆಲೆಯೂ ಇಲ್ಲವಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಲಾಗಿದೆ. ಕೆಟ್ಟ ನಡೆನುಡಿಗಳನ್ನು ಹೊಂದಿರುವ ಗುಡ್ಡ ಮತ್ತು ಅಂತಹವನಿಗೆ ವಿದ್ಯೆಯನ್ನು ಹೇಳಿಕೊಟ್ಟ ಗುರು– ಈ ಇಬ್ಬರ ಬಗೆಗೂ ಅಲ್ಲಮನು ತನ್ನ ಕೋಪದ ಒಳಮಿಡಿತವನ್ನು ಕಾರುತ್ತಾ “ಅವರಿಬ್ಬರ ಮನೆಗೆ ಮಾರಿ ನುಗ್ಗಲಿ” ಎಂಬ ಶಾಪದ ನುಡಿಯನ್ನು ಬಳಸಿದ್ದಾನೆ.

(ಬೆವಸಾಯ=ವ್ಯವಸಾಯ/ಬೇಸಾಯ/ಆರಂಬ; ಬೆವಸಾಯವ ಮಾಡಿ=ಹೊಲಗದ್ದೆತೋಟವನ್ನು ಉತ್ತು ಮಣ್ಣನ್ನು ಹದಗೊಳಿಸಿ, ಬೀಜವನ್ನು ಬಿತ್ತಿ/ಸಸಿಯನ್ನು ನೆಟ್ಟು ಬೆಳೆಯನ್ನು ತೆಗೆಯುವುದು ; ಬೀಯ=ಅಕ್ಕಿ/ಆಹಾರ/ಉಣಿಸು ತಿನಸು ; ಮನೆಯ ಬೀಯಕ್ಕೆ=ಮನೆಯ ಜನಗಳ ವರುಶದ ಕೂಳಿಗೆ/ಮನೆಮಂದಿಯು ಹೊಟ್ಟೆತುಂಬ ತಿಂದು ಉಂಡು ನೆಮ್ಮದಿಯಾಗಿರುವುದಕ್ಕೆ ; ಬತ್ತ+ಇಲ್ಲದೆ+ಇದ್ದರೆ ; ಬತ್ತ=ಒಂದು ಬಗೆಯ ದಿನಸಿ/ಕಾಳು/ಆಹಾರದ ವಸ್ತು; ಬತ್ತದ ಕಾಳಿನ ಸಿಪ್ಪೆಯನ್ನು ತೆಗೆದರೆ ಅಕ್ಕಿಯು ದೊರಕುತ್ತದೆ. ಈ ಅಕ್ಕಿಯನ್ನು ಬೇಯಿಸುವುದರಿಂದ ಅನ್ನವನ್ನು ತಯಾರಿಸಲಾಗುತ್ತದೆ; ಘೋರ+ಏತಕೆ+ಅಯ್ಯ ; ಘೋರ=ಆತಂಕ/ನಿರಾಶೆ/ನೋವು/ಬಡತನದ ಬೇಗೆ/ಹಸಿವಿನ ಸಂಕಟ/ಸಾಲದ ಹೊಡೆತ/ಸರೀಕರ ಮುಂದೆ ಆಗುವ

ಅಪಮಾನಗಳೆಲ್ಲವನ್ನೂ ಒಳಗೊಂಡ ನೆಲೆ ; ಏತಕೆ=ಯಾವುದಕ್ಕಾಗಿ ; ಏತಕೆ ಅಯ್ಯ= ಇಂತಹ ದುಡಿಮೆಯ ಅಗತ್ಯವಾದರೂ ಏನು;

ಕ್ರಯ=ನಮಗೆ ಬೇಕಾಗಿರುವುದನ್ನು ಬೆಲೆ ಕೊಟ್ಟು ಕೊಳ್ಳುವುದು ; ವಿಕ್ರಯ=ಮಾರಾಟ/ಬಿಕರಿ/ನಮ್ಮಲ್ಲಿರುವ ಒಡವೆ ವಸ್ತು ಆಸ್ತಿಪಾಸ್ತಿಯನ್ನು ಮಾರುವುದು ; ಕ್ರಯವಿಕ್ರಯ ಮಾಡಿ=ಕೊಳ್ಳುವ-ಕೊಡುವ ವ್ಯವಹಾರವನ್ನು ಮಾಡಿ; ಸಂಚು=ಉದ್ದೇಶಪಟ್ಟಿದ್ದ ಕೆಲಸ/ಆಗಬೇಕಾಗಿದ್ದ ಅನುಕೂಲ; ಮನೆಯ ಸಂಚು=ಮನೆಗೆ ಒಳಿತನ್ನು ಉಂಟುಮಾಡುವ ವ್ಯವಹಾರ/ಮನೆಯ ಜನರ ನೋವುಬವಣೆಗಳ ನಿವಾರಣೆ; ನಡೆಯದ+ಅನ್ನಕ್ಕ; ನಡೆಯದ=ಈಡೇರದ/ನೆರವೇರದ; ಅನ್ನಕ್ಕ=ವರೆಗೆ/ತನಕ ; ನಡೆಯದನ್ನಕ=ಆಗದಿದ್ದರೆ/ನೆರವೇರದಿದ್ದರೆ;

ಒಡೆಯನ್+ಅನ್+ಓಲೈಸಿ; ಒಡೆಯ=ಯಜಮಾನ/ಅರಸು/ದಣಿ ; ಓಲೈಸಿ=ಸೇವೆಯನ್ನು ಮಾಡಿ/ಉಪಚರಿಸಿ/ಹೊಗಳಿ ಕೊಂಡಾಡಿ ; ತನುವಿಂಗೆ=ತನುವಿಗೆ ; ತನು=ಮಯ್/ಶರೀರ/ದೇಹ; ಅಷ್ಟ=ಎಂಟು ; ಭೋಗ=ಒಲವು ನಲಿವನ್ನು ಹೊಂದಿ ಆನಂದಪಡುವುದು; ಅಷ್ಟಭೋಗ=ಮಯ್ ಮನಕ್ಕೆ ಮುದ ನೀಡುವ "ಮನೆ-ಹಾಸುಗೆ-ಬಟ್ಟೆ-ಒಡವೆ-ಹೆಣ್ಣು-ಹೂವು-ಚಂದನ-ತಾಂಬೂಲ" / "ಕೂಳು-ನೀರು-ತಾಂಬೂಲ-ಹೂವು-ಚಂದನ-ಬಟ್ಟೆ-ಹಾಸುಗೆ-ಅಲಂಕಾರ" ಎಂಬ ಎಂಟು ಬಗೆಯ ಒಡವೆವಸ್ತುಗಳು; ಪಡೆಯದೆ+ಇದ್ದರೆ; ಪಡೆ=ಹೊಂದು/ಸ್ವೀಕರಿಸು/ದೊರಕಿಸಿಕೊಳ್ಳು;

ಭಕ್ತ+ಆಗಿ ; ಭಕ್ತ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು/ಒಳ್ಳೆಯ ನಡೆನುಡಿಗಳೇ ದೇವರನ್ನು ಒಲಿಸಿಕೊಳ್ಳುವ ಆಚರಣೆಯೆಂದು ತಿಳಿದುಕೊಂಡು ಬಾಳುತ್ತಿರುವವನು; ಭವಂ+ನಾಸ್ತಿ+ಆಗದೆ+ಇದ್ದರೆ; 'ಭವ' ಎಂದರೆ ನಿಸರ್ಗದಲ್ಲಿನ ಜಡವಸ್ತು, ಜೀವಜಂತು, ಮಾನವಜೀವಿಗಳೆಲ್ಲವೂ ನೆಲೆಗೊಂಡಿರುವಂತಹ ಜಗತ್ತು ಮಾನವ ಸಮುದಾಯದ ಎಲ್ಲಾ ಬಗೆಯ ಚಟುವಟಿಕೆಗಳ ನೆಲೆ; ನಾಸ್ತಿ=ಇಲ್ಲವಾಗುವುದು/ಲಯವಾಗುವುದು/ಬಿಟ್ಟುಹೋಗುವುದು;

ಭವಂನಾಸ್ತಿ=ಕೆಟ್ಟ ನಡೆನುಡಿಗಳಿಗೆ ಕಾರಣವಾಗುವಂತಹ ಒಳಮಿಡಿತಗಳನ್ನು ಹತ್ತಿಕ್ಕಿಕೊಂಡು ಇಲ್ಲವೇ ಹೋಗಲಾಡಿಸಿಕೊಂಡು, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ವ್ಯಕ್ತಿತ್ವವನ್ನು ಪಡೆದುಕೊಳ್ಳುವುದು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಟ್ಟು;

ಆಗದಿದ್ದರೆ=ಆಗದೇ ಹೋದರೆ/ಉಂಟಾಗದಿದ್ದರೆ; ಆ=ಅಂತಹ; ಉಪದೇಶ=ಅರಿವನ್ನು ನೀಡುವುದು/ತಿಳುವಳಿಕೆಯನ್ನು ಹೇಳುವುದು ; ಕೊಟ್ಟ=ಹೇಳಿದ/ನೀಡಿದ ; ಗುರು=ವಿದ್ಯೆಯನ್ನು ಕಲಿಸುವ/ಅರಿವನ್ನು ಮೂಡಿಸುವ/ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸುವ ವ್ಯಕ್ತಿ ; ಕೊಂಡ=ಪಡೆದ/ಕೇಳಿ ತಿಳಿದ/ಸ್ವೀಕರಿಸಿದ ; ಶಿಷ್ಯಂಗೆ=ಗುಡ್ಡನಿಗೆ ; ಶಿಷ್ಯ=ವಿದ್ಯೆಯನ್ನು ಕಲಿಯುವ/ಅರಿವನ್ನು ಪಡೆಯುವ ಹಂಬಲವುಳ್ಳವನು/ಗುಡ್ಡ ; ಇವರು+ಇಬ್ಬರ;

ಇವರಿಬ್ಬರ=ಇಂತಹ ಗುರು ಮತ್ತು ಗುಡ್ಡ; ಮಾರಿ=ಜನಪದರ ದೇವತೆ ; ಹೊಗಲಿ=ಒಳಕ್ಕೆ ಬರಲಿ/ಪ್ರವೇಶಿಸಲಿ/ಒಳನುಗ್ಗಲಿ ;

ಇವರಿಬ್ಬರ ಮನೆಯಲ್ಲಿ ಮಾರಿ ಹೊಗಲಿ="ನಿನ್ ಮನೆಗೆ ಮಾರಿ ನುಗ್ಗ" ಎಂಬ ಶಾಪದ ನುಡಿಯು ಜನಪದರ ಮಾತುಕತೆಯಲ್ಲಿ ಬಳಕೆಯಲ್ಲಿದೆ. ಅಂದರೆ ಮಾರಿದೇವತೆಯ ಕ್ರೂರನೋಟಕ್ಕೆ ಗುರಿಯಾಗಿ ಗುರು-ಗುಡ್ಡನ ಮನೆಮಂದಿಗೆಲ್ಲಾ ಸಾವುನೋವು ಉಂಟಾಗಲಿ ಎಂಬ ತಿರುಳನ್ನು ಈ ಶಾಪದ ನುಡಿಗಳು ಹೊಂದಿವೆ ; ಗುಹೇಶ್ವರ+ ಅತ್ತಲೆ;

ಗುಹೇಶ್ವರ=ಶಿವ; ಅತ್ತಲೆ=ಆ ಕಡೆ/ದೂರ; ಹೋಗಲಿ=ಹೋಗುವಂತಾಗಲಿ; ಗುಹೇಶ್ವರಲಿಂಗವತ್ತಲೆ ಹೋಗಲಿ=ಕೆಟ್ಟ ನಡೆನುಡಿಗಳುಳ್ಳ ವ್ಯಕ್ತಿಗಳಿಂದ ಗುಹೇಶ್ವರನು ದೂರ ಹೋಗುವಂತಾಗಲಿ.)



೨೫. ಮಠವೇಕೋ ಪರ್ವತವೇಕೋ ಜನವೇಕೋ
ನಿರ್ಜನವೇಕೋ ಚಿತ್ತಸಮಾಧಾನವುಳ್ಳ ಶರಣಂಗೆ
ಮತ್ತೆ ಹೊರಗಣ ಚಿಂತೆ ಧ್ಯಾನ ಮೌನ ಜಪ ತಪವೇಕೋ
ತನ್ನ ತಾನರಿದ ಶರಣಂಗೆ ಗುಹೇಶ್ವರ.

ಮನದಲ್ಲಿ ಮೂಡುವ ಕೆಟ್ಟ ಬಯಕೆ/ಆಸೆ/ಕಾಮನೆಗಳನ್ನು ಹತ್ತಿಕ್ಕಿಕೊಂಡು, ಸಹಮಾನವರಿಗೆ ಮತ್ತು ಸಮಾಜಕ್ಕೆ ಸಮಚಿತ್ತದಿಂದ ಒಳಿತನ್ನು ಮಾಡುವ ವ್ಯಕ್ತಿಗೆ ದೇವರನ್ನು ಒಲಿಸಿಕೊಳ್ಳಲು ಮಾಡುವ ಆಚರಣೆಗಳ ಅಗತ್ಯವಿರುವುದಿಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.

(ಮಠ+ಏಕೋ; ಮಠ=ದೇವರು/ಜಾತಿ/ಮತದ ಹೆಸರುಗಳಲ್ಲಿ ಕಟ್ಟಿಕೊಂಡಿರುವ ಸಾಮಾಜಿಕ ಒಕ್ಕೂಟ; ಏಕೋ=ಯಾತಕ್ಕೆ ಬೇಕು/ಅಗತ್ಯವಾದರೂ ಏನು; ಪರ್ವತ+ಏಕೋ; ಪರ್ವತ=ದೊಡ್ಡದಾಗಿರುವ ಬೆಟ್ಟಗುಡ್ಡಕಾಡುಮೇಡುಗಳಿಂದ ಕೂಡಿರುವ ಜಾಗ ; ಪರ್ವತವೇಕೋ=ನಾಡಿನಲ್ಲಿ ದೊರೆಯುವ ಎಲ್ಲಾ ಬಗೆಯ ಒಲವು ನಲಿವಿನ ಬದುಕನ್ನು ತೊರೆದು, ಕಾಡಿಗೆ ಹೋಗಿ ಎಲೆವನೆಯನ್ನು ಕಟ್ಟಿಕೊಂಡು ದೇವರ ನೆನಪಿನಲ್ಲಿ ತೊಡಗುವ ಅಗತ್ಯವೇನು;

ಜನ+ಏಕೋ; ಜನ=ವ್ಯಕ್ತಿಗಳ ಗುಂಪು/ಜಂಗುಳಿ ; ಜನವೇಕೋ =ಹೆಚ್ಚು ಮಂದಿಯ ಜತೆಗೂಡಿ ದೇವರ ಹೆಸರಿನಲ್ಲಿ ಬಹುಬಗೆಯ ಆಚರಣೆಯಲ್ಲಿ ತೊಡಗುವ ಅಗತ್ಯವಾದರೂ ಏಕೆ; ನಿರ್ಜನ+ಏಕೋ; ನಿರ್ಜನ=ಜನ ವಸತಿಯಿಲ್ಲದಿರುವಿಕೆ/ಯಾವೊಬ್ಬ ವ್ಯಕ್ತಿಯೂ ಇಲ್ಲದಿರುವ ತಾಣ ; ನಿರ್ಜನವೇಕೋ=ಒಬ್ಬಂಟಿಯಾಗಿದ್ದುಕೊಂಡು ದೇವರ ನೆನಪಿನಲ್ಲಿ ತೊಡಗಿರುವ ಅಗತ್ಯವೇನು;

ಚಿತ್ತ+ಸಮಾಧಾನ+ಉಳ್ಳ ; ಚಿತ್ತ=ಮನಸ್ಸು ; ಸಮಾಧಾನ=ಯಾವುದೇ ಬಗೆಯ ಕಳವಳ/ತಳಮಳ/ಒತ್ತಡವಿಲ್ಲದಿರುವಿಕೆ; ಉಳ್ಳ=ಇರುವ/ಹೊಂದಿರುವ ; ಚಿತ್ತಸಮಾಧಾನವುಳ್ಳ=ಒಲವು ನಲಿವು ತಾಳ್ಮೆ ನೆಮ್ಮದಿಯಿಂದ ಕೂಡಿರುವ ಮನಸ್ಸು ; ಶರಣ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು/ ಶಿವನನ್ನು ಪೂಜಿಸುವವನು/ಶಿವನಿಗೆ ಒಲಿದವನು; ಶರಣಂಗೆ=ಶರಣನಿಗೆ ; ಮತ್ತೆ=ಒಂದರ ಜತೆಗೆ ಇನ್ನೊಂದು/ಬಳಿಕ/ನಂತರ/ಮರಳಿ ; ಹೊರಗಣ=ಬಹಿರಂಗದಲ್ಲಿ/ಇತರರ ಕಣ್ಣಿಗೆ ಕಾಣುವಂತಹ ಬಗೆಯಲ್ಲಿ ; ಚಿಂತೆ=ಆಲೋಚನೆ/ಕಳವಳ/ದುಗುಡ; ಧ್ಯಾನ=ದೇವರ

ಹೆಸರನ್ನು ಕುರಿತು ಮತ್ತೆ ಮತ್ತೆ ಉಚ್ಚರಿಸುತ್ತಿರುವುದು; ಮೌನ=ಮಾತನಾಡದೆ ಸುಮ್ಮನಿರುವುದು ;

ಜಪ=ತಾನು ಒಲಿದಿರುವ ದೇವರನ್ನು ಇಲ್ಲವೇ ಮೆಚ್ಚಿರುವ ಇನ್ನಿತರ ಸಂಗತಿಗಳನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಿರುವುದು; ತಪ=ಉಪವಾಸ ಮತ್ತು ಇನ್ನಿತರ ದಂಡನೆಗಳಿಗೆ ಮಯ್ಯನ್ನು ಒಳಗುಮಾಡಿ ದೇವರನ್ನು ನೆನಪಿಸಿಕೊಳ್ಳುವುದು ; ಹೊರಗಣ ಚಿಂತೆ ಧ್ಯಾನ ಮೌನ ಜಪ ತಪವೇಕೋ=ಈ ಬಗೆಯ ಆಚರಣೆಗಳ ಅಗತ್ಯವೇನು ; ತನ್ನ=ತನ್ನನ್ನು ; ತಾನ್+ಅರಿದ ; ತಾನ್=ತಾನು ; ಅರಿ=ತಿಳಿ ;

"ತನ್ನನ್ನು ತಾನು ಅರಿಯುವುದು" ಎಂದರೆ ಪ್ರತಿಯೊಬ್ಬ ಮಾನವನು ತಾನು ಹುಟ್ಟಿ ಬೆಳೆದು ಬಾಳುವ ಪರಿಸರದಲ್ಲಿರುವ ನಿಸರ್ಗದಲ್ಲಿನ ಏರಿಳಿತಗಳಿಗೆ ಮತ್ತು ಸಮಾಜದ ಕಟ್ಟುಪಾಡುಗಳಿಗೆ ಒಳಪಟ್ಟು ವ್ಯವಹರಿಸುತ್ತಿರುತ್ತಾನೆ. ಇದರಿಂದಾಗಿ ಮಾನವ ಜೀವಿಯ ಮಯ್‍ಮನ ಸದಾಕಾಲ ಒಳಿತು ಕೆಡುಕಿನ ಇಬ್ಬಗೆಯ ತೊಳಲಾಟದಲ್ಲಿ ಸಿಲುಕಿರುತ್ತದೆ ಎಂಬ ವಾಸ್ತವವನ್ನು ಅರಿತುಕೊಂಡು, ಕೆಡುಕಿನ ಒಳಮಿಡಿತಗಳನ್ನು ಹತ್ತಿಕ್ಕಿ, ಒಳ್ಳೆಯ ನಡೆನುಡಿಗಳಿಂದ ತನಗೆ ಒಳಿತನ್ನು ಬಯಸುವಂತೆಯೇ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ಎಚ್ಚರವನ್ನು ಹೊಂದಿರುವುದು ;

ಗುಹೇಶ್ವರ=ಶಿವ/ಅಲ್ಲಮನ ಮೆಚ್ಚಿನ ದೇವರು.)



೨೬. ಮಣಿಯನೆಣಿಸಿ ಕಾಲವ ಕಳೆಯಬೇಡ

ಕಣೆಯ ಪೂಜಿಸಿ ಕಾಲವ ಕಳೆಯಬೇಡ
ಕ್ಷಣವಾದಡೆಯೂ ಆಗಲಿ ನಿಜದ ನೆನಹೇ ಸಾಕು
ಕ್ಷಣಾರ್ಧವಾದಡೆಯೂ ಆಗಲಿ ನಿಜದ ನೆನಹೇ ಸಾಕು
ಬೆಂಕಿಯೊಳಗುಳ್ಳ ಗುಣ ಬಿಸಿನೀರಲುಂಟೇ ಗುಹೇಶ್ವರ.

ಜೀವನದಲ್ಲಿ ಒಳ್ಳೆಯ ನಡೆನುಡಿಗಳಿಂದ ಬಾಳುವುದು ದೊಡ್ಡದೇ ಹೊರತು, ದೇವರ ಬಗೆಗಿನ ಒಲವನ್ನು ತೋರಿಸಿಕೊಳ್ಳುವುದಕ್ಕಾಗಿ ಮಾಡುವ ಆಚರಣೆಗಳಿಂದ ಇಲ್ಲವೇ ಪೂಜೆಯಿಂದ ಯಾವುದೇ ಪ್ರಯೋಜನವಿಲ್ಲವೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

(ಮಣಿ+ಅನ್+ಎಣಿಸಿ; ಮಣಿ=ಗುಂಡನೆಯ ಆಕಾರವುಳ್ಳ ರುದ್ರಾಕ್ಶಿ ಮರದ ಕಾಯಿ/ಹವಳ/ಮುತ್ತು; ಅನ್=ಅನ್ನು; ಮಣಿಯನ್=ದುಂಡನೆಯ ರುದ್ರಾಕ್ಶಿ ಕಾಯಿ/ಹವಳ/ಮುತ್ತುಗಳನ್ನು ದಾರವೊಂದಕ್ಕೆ ಪೋಣಿಸಿ ಮಾಡಿರುವ ಸರವನ್ನು; ಎಣಿಸಿ=ಲೆಕ್ಕ ಹಾಕುತ್ತ ; ಕಾಲ=ಸಮಯ/ವೇಳೆ ; ಕಳೆ=ಹಾಳು ಮಾಡು;

ಮಣಿಯನೆಣಿಸಿ ಕಾಲವ ಕಳೆಯಬೇಡ=ಮಣಿಗಳನ್ನು ಪೋಣಿಸಿರುವ ಮಾಲೆಯನ್ನು ಜಪಸರವನ್ನಾಗಿ ಮಾಡಿಕೊಂಡು, ಅದರಲ್ಲಿನ ಒಂದೊಂದು ಮಣಿಯನ್ನು ಮುಂದೆ ಮುಂದೆ ಜರುಗಿಸುತ್ತ, ಒಂದೊಂದು ಮಣಿಗೂ ದೇವರ ಹೆಸರನ್ನು ಉಚ್ಚರಿಸುವ ಕೆಲಸದಲ್ಲಿ ತೊಡಗಿ ಕಾಲವನ್ನು ಹಾಳುಮಾಡಬೇಡ ;

ಕಣೆ=ಕಲ್ಲು/ಶಿಲೆ ; ಪೂಜಿಸಿ=ಪೂಜೆಯನ್ನು ಮಾಡಿ ; ಕಣೆಯ ಪೂಜಿಸಿ ಕಾಲವ ಕಳೆಯಬೇಡ=ಕಲ್ಲನ್ನು ಕಡೆದು ಮಾಡಿರುವ ದೇವರ ವಿಗ್ರಹವನ್ನು ಬಗೆಬಗೆಯ ಆಚರಣೆಗಳಿಂದ ಪೂಜಿಸುತ್ತ ಕಾಲವನ್ನು ಹಾಳುಮಾಡಬೇಡ ; ಕ್ಷಣ+ಆದಡೆಯೂ ; ಕ್ಷಣ=ತುಸು ಕಾಲ/ಸಮಯ/ಗಳಿಗೆ ; ಆದಡೆ=ಆದರೆ ; ಆದಡೆಯೂ=ಆದರೂ ; ನಿಜ=ದಿನನಿತ್ಯದ ಬದುಕಿನಲ್ಲಿ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ನಡೆನುಡಿ ;

ನೆನಹು=ನೆನಪು ; ನಿಜದ ನೆನಹು=ಒಳ್ಳೆಯ ನಡೆನುಡಿಗಳನ್ನು ಆಚರಣೆಗೆ ತರಬೇಕೆಂಬ ಎಚ್ಚರ ಮತ್ತು ಅದರಂತೆ ನಡೆಯುವುದು; ಕ್ಷಣ+ಅರ್ಧ+ಆದಡೆಯೂ ; ಕ್ಷಣಾರ್ಧ=ಅರೆಗಳಿಗೆ; ಬೆಂಕಿ+ಒಳಗೆ+ಉಳ್ಳ; ಬೆಂಕಿ=ಉರಿ/ಕಿಚ್ಚು/ಅಗ್ನಿ; ಉಳ್ಳ=ಇರುವ ; ಗುಣ=ಶಕ್ತಿ/ಬಲ/ಸತ್ವ; ಬಿಸಿನೀರಲ್+ಉಂಟೇ; ನೀರಲ್=ನೀರಿನಲ್ಲಿ;

ಉಂಟೇ=ಇದೆಯೇ ; ಬಿಸಿನೀರು=ಸುಡುವ ನೀರು/ಬೆಂಕಿಯಲ್ಲಿ ಕಾದು ಬೆಚ್ಚಗಿರುವ ನೀರು ;

ಬೆಂಕಿಯೊಳಗುಳ್ಳ ಗುಣ ಬಿಸಿನೀರಲುಂಟೇ ಎಂಬ ಸೊಲ್ಲು "ವ್ಯಕ್ತಿಯ ದಿನನಿತ್ಯದ ಸಾಮಾಜಿಕ ವ್ಯವಹಾರಗಳಲ್ಲಿ ಕಂಡುಬರುವ ಒಳ್ಳೆಯ ನಡೆನುಡಿಗಳಿಗೆ ಇರುವ ಬೆಲೆಯು, ವ್ಯಕ್ತಿಯು ಮಾಡುವ ತೋರಿಕೆಯ ಪೂಜೆಯ ಆಚರಣೆಗಳಿಗೆ ಇರುವುದಿಲ್ಲ" ಎಂಬ ತಿರುಳಿನಲ್ಲಿ ಬಳಕೆಯಾಗಿರುವ ರೂಪಕವಾಗಿದೆ ;

ಗುಹೇಶ್ವರ=ಅಲ್ಲಮನ ಮೆಚ್ಚಿನ ದೇವರು/ಶಿವ.)



೨೭. ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು
ದೇವರ ಮಾಡಿದಡೆ ಆನು ಬೆರಗಾದೆನಯ್ಯ
ನಿಚ್ಚಕ್ಕೆ ನಿಚ್ಚ ಅರ್ಚನೆ ಪೂಜನೆಯ ಮಾಡಿಸಿ
ಭೋಗವ ಮಾಡುವರ ಕಂಡು ನಾನು ಬೆರಗಾದೆನು
ಗುಹೇಶ್ವರ ನಿಮ್ಮ ಶರಣರು ಹಿಂದೆ ಲಿಂಗವನಿರಿಸಿ ಹೋದರು.

ದೇಗುಲವನ್ನು ಕಟ್ಟಿ ದೇವರ ಹೆಸರಿನಲ್ಲಿ ತಮಗೆ ಬೇಕಾದುದೆಲ್ಲವನ್ನೂ ಪಡೆದುಕೊಂಡು ಮೆರೆದು ನಲಿಯುವ ವ್ಯಕ್ತಿಗಳನ್ನು ಈ ವಚನದಲ್ಲಿ ಟೀಕಿಸಲಾಗಿದೆ.

(ಮರ್ತ್ಯಲೋಕ=ಮಾನವರು ಮತ್ತು ಇನ್ನುಳಿದ ಜೀವಜಂತುಗಳು ನೆಲೆಸಿರುವ ಜಾಗ/ಪ್ರಪಂಚ/ಜಗತ್ತು ; ದೇಗುಲದ+ಒಳಗೆ+ಒಂದು; ದೇವ+ಕುಲ=ದೇಗುಲ; ಕುಲ=ಮನೆ/ಮಂದಿರ/ನೆಲೆ; ದೇಗುಲ=ದೇವರ ವಿಗ್ರಹ ಇರುವ ಮಂದಿರ; ದೇವರ=ದೇವರನ್ನು ; ದೇವರು=ಜೀವನದಲ್ಲಿ ಬರುವ ಎಡರು ತೊಡರುಗಳನ್ನು ನೀವಾರಿಸಿ, ತಮಗೆ ಒಳಿತನ್ನು ಮಾಡಿ ಕಾಪಾಡುವ ವ್ಯಕ್ತಿಯನ್ನು/ಶಕ್ತಿಯನ್ನು ದೇವರು ಎಂದು ಮಾನವ ಸಮುದಾಯ ನಂಬಿದೆ; ಮಾಡಿದಡೆ=ಮಾಡಿದರೆ/ನೆಲೆಗೊಳಿಸಿದರೆ; ದೇವರ ಮಾಡಿದಡೆ=ದೇವರ ವಿಗ್ರಹವನ್ನು ನೆಲೆಗೊಳಿಸಿದರೆ; ಆನು=ನಾನು; ಬೆರಗು+ಆದೆನ್+ಅಯ್ಯ ; ಬೆರಗು=ಅಚ್ಚರಿ/ಸೋಜಿಗ; ಆದೆನು=ಪಟ್ಟೆನು/ಹೊಂದಿದೆನು ; ಅಯ್ಯ=ಗಂಡಸರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ನಿಚ್ಚ=ನಿತ್ಯವೂ/ಪ್ರತಿದಿನವೂ; ನಿಚ್ಚಕ್ಕೆ ನಿಚ್ಚ=ಎಡೆಬಿಡದೆ/ಒಂದೇ ಸಮನೆ/ನಿರಂತರವಾಗಿ ; ಅರ್ಚನೆ=ಪೂಜೆ/ಸೇವೆ ; ಪೂಜನೆ= ಮಂಗಳಾರತಿಯನ್ನು ಬೆಳಗುತ್ತ ಮಾಡುವ ಆಚರಣೆ ; ಭೋಗ=ಉಂಡು ತಿಂದು ಕುಡಿದು ಆನಂದದಿಂದ ಓಲಾಡುವುದು ; ಮಾಡುವರ=ಮಾಡುವವರನ್ನು; ಕಂಡು=ನೋಡಿ ; ಭೋಗವ ಮಾಡುವವರು=ದೇವರ ಪೂಜೆಯ ನೆಪದಲ್ಲಿ ತಮ್ಮ ಮಯ್ ಮನಗಳ ಬಯಕೆ/ಆಸೆ/ಕಾಮನೆಗಳನ್ನು ಈಡೇರಿಸಿಕೊಂಡು ನಲಿಯುವವರು; ಲಿಂಗವನ್+ಇರಿಸಿ ; ಲಿಂಗ=ಶಿವನ ಸಂಕೇತದ ವಿಗ್ರಹ; ಇರಿಸಿ=ಇಟ್ಟು; ಶರಣ=ಶಿವನನ್ನು ಒಲಿದವನು/ಶಿವನನ್ನು ಮೆಚ್ಚಿದವನು;

ಶರಣರು ಹಿಂದೆ ಲಿಂಗವನಿರಿಸಿ ಹೋದರು=ಶಿವಶರಣ ಶರಣೆಯರಿಗೆ ವಿಗ್ರಹರೂಪದ ಶಿವಪೂಜೆಯಲ್ಲಿ ಯಾವುದೇ ನಂಬಿಕೆಯಾಗಲಿ ಇಲ್ಲವೇ ಆಸಕ್ತಿಯಾಗಲಿ ಇರಲಿಲ್ಲ. ಶಿವನು ಅವರ ಮಯ್-ಮನಗಳಲ್ಲಿಯೇ ನೆಲೆಗೊಂಡವನಾಗಿದ್ದ. ಆದುದರಿಂದಲೇ ವಿಗ್ರಹದ ರೂಪದ ಲಿಂಗದಿಂದ ಶಿವಶರಣಶರಣೆಯರು ದೂರಸರಿದರು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ಸೊಲ್ಲು.)



೨೮. ಮಾಡಿದ ಓಗರ ಮಾಡಿದಂತೆ ಇದ್ದಿತ್ತು
ನೀಡಿದ ಕೈಗಳೆಡೆಯಾಡುತ್ತಿದ್ದವು
ಲಿಂಗಕ್ಕರ್ಪಿತವ ಮಾಡಿದೆನೆಂಬರು
ಒಂದರಲೊಂದು ಸವೆಯದು ನೋಡಾ
ಲಿಂಗವಾರೋಗಣೆಯ ಮಾಡಿದನೆಂಬರು
ತಾವುಂಡು ನಿಮ್ಮ ದೂರುವರು ಗುಹೇಶ್ವರ.

**ದೇವರ ವಿಗ್ರಹದ ಮುಂದೆ ತಿನಸು ಉಣಿಸುಗಳನ್ನಿಟ್ಟು ಮಾಡುವ ಆಚರಣೆಯಲ್ಲಿನ ಬೂಟಾಟಿಕೆಯನ್ನು ಕುರಿತು ಈ ವಚನದಲ್ಲಿ ಹೇಳಲಾಗಿದೆ.**

(ಮಾಡಿದ=ಅಣಿಗೊಳಿಸಿದ/ತಯಾರಿಸಿದ; ಓಗರ=ಅನ್ನ/ಅಟ್ಟ ಅಡುಗೆ/ತಿನಸು ಉಣಿಸು; ಮಾಡಿದ+ಅಂತೆ ; ಇದ್ದು+ಇತ್ತು ; ನೀಡಿದ=ಮುಂದೆ ಒಡ್ಡಿದ/ಚಾಚಿದ ; ಕೈಗಳ್+ಎಡೆ+ಆಡುತ್ತ+ಇದ್ದವು; ಎಡೆ=ನಡುವೆ/ಹತ್ತಿರ; ಎಡೆಯಾಡು=ಅತ್ತಿತ್ತ ಅಲೆದಾಡು/ಚಲಿಸು/ಸಂಚರಿಸು; ಇದ್ದವು=ಇರುವುವು; ಕೈಗಳ್ ಎಡೆಯಾಡುತ್ತಿದ್ದವು=ತಿಂಡಿ ತಿನಸುಗಳುಳ್ಳ ತಟ್ಟೆಬಟ್ಟಲು ಮತ್ತು ಲಿಂಗದ ಬಾಯ ನಡುವೆ ಪೂಜಿಸುವವರ ಕಯ್ಗಳು ಲಿಂಗಕ್ಕೆ ತಿನಿಸುವಂತೆ ಅತ್ತಿತ್ತ ಹೋಗಿಬರುತ್ತಿದ್ದವು ;

ಲಿಂಗಕ್ಕೆ+ಅರ್ಪಿತವ ; ಲಿಂಗಕ್ಕೆ=ಶಿವನಿಗೆ ; ಅರ್ಪಿತ=ನೀಡುವುದು/ಕೊಡುವುದು/ಒಪ್ಪಿಸುವುದು ; ಮಾಡಿದೆನ್+ಎಂಬರು ; ಎಂಬರು=ಎನ್ನುವರು ; ಒಂದರಲ್+ಒಂದು; ಸವೆ=ಕಡಿಮೆಯಾಗು/ಕರಗುವುದು/ಮುಗಿಯುವುದು/ತೀರುವುದು ; ಒಂದರಲೊಂದು ಸವೆಯದು=ಇತ್ತ ತಿಂಡಿ ತಿನಸಿನಲ್ಲಿ ತುಸುವಾದರೂ ಕಡಿಮೆಯಾಗಲಿಲ್ಲ; ಅತ್ತ ಲಿಂಗರೂಪಿಯಾದ ಶಿವನು ತನಗೆ ನೀಡಿದ ವಸ್ತುಗಳಲ್ಲಿ ಒಂದನ್ನಾದರೂ ರುಚಿ ನೋಡಲಿಲ್ಲ. ನೋಡಾ=ತಿಳಿದು/ಅರಿತು ನೋಡು;

ಲಿಂಗವು+ಆರೋಗಣೆಯ; ಲಿಂಗ=ಶಿವ/ಶಿವನ ಸಂಕೇತವಾದ ವಿಗ್ರಹ; ಆರೋಗಣೆ=ಊಟ/ಆಹಾರವನ್ನು ತೆಗೆದುಕೊಳ್ಳುವುದು; ಮಾಡಿದನ್+ಎಂಬರು ; ಎಂಬರು=ಎನ್ನುತ್ತಾರೆ/ಹೇಳುತ್ತಾರೆ/ಮಾತನಾಡಿಕೊಳ್ಳುತ್ತಾರೆ: ತಾವ್+ಉಂಡು; ತಾವುಂಡು=ದೇವರಿಗೆ ತಿನ್ನಿಸುತ್ತೇವೆ ಎಂದು ಅಣಿಗೊಳಿಸಿದ್ದೆಲ್ಲವನ್ನೂ ತಾವು ಕಬಳಿಸಿ; ನಿಮ್ಮ ದೂರುವರು=ನಿಮ್ಮ ಮೇಲೆ ಅದರ ಹೊಣೆಯನ್ನು ಹೊರಿಸುವರು/ದೇವರು ಉಂಡನೆಂದು ಹೇಳುವರು.)



೨೯. ಮಿಂದು ದೇವರ ಪೂಜಿಸಿಹೆನೆಂಬ ಸಂದೇಹಿ
ಮಾನವ ನೀ ಕೇಳಾ
ಮೀಯದೆ ಮೀನು ಮೀಯದೆ ಮೊಸಳೆ
ತಾ ಮಿಂದು ತನ್ನ ಮನ ಮೀಯದನ್ನಕ್ಕರ ಈ
ಬೆಡಗಿನ ಮಾತ ಮೆಚ್ಚುವನೆ ನಮ್ಮ ಗುಹೇಶ್ವರ ಲಿಂಗವು.

ಮನದೊಳಗಿನ ಕೊಳೆಯನ್ನು ತೊಳೆದುಕೊಳ್ಳದೆ, ಮಯ್ ಮೇಲಣ ಕೊಳೆಯನ್ನು ಮಾತ್ರ ತೊಳೆದು ಮಡಿಯುಟ್ಟು ಮಾಡುವ ಪೂಜೆಯನ್ನು ದೇವರು ಮೆಚ್ಚುವುದಿಲ್ಲವೆಂದು ಈ ವಚನದಲ್ಲಿ ಹೇಳಲಾಗಿದೆ.

ಮನದೊಳಗಿನ ಕೊಳೆಯನ್ನು ತೊಳೆಯುವುದು ಎಂದರೆ ಮನದೊಳಗೆ ಮೂಡುವ ಕೆಡುಕಿನ ಒಳಮಿಡಿತಗಳನ್ನು ಹೋಗಲಾಡಿಸಿಕೊಂಡು, ಒಳ್ಳೆಯ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವುದು.

(ಮಿಂದು=ಸ್ನಾನ ಮಾಡಿ/ಜಳಕ ಮಾಡಿ/ಮಯ್ ತೊಳೆದು ; ಮೀ=ಸ್ನಾನ ಮಾಡು/ಜಳಕ ಮಾಡು/ಮಯ್ ತೊಳೆ ; ಪೂಜಿಸಿ+ಇಹೆನ್+ಎಂಬ ; ಪೂಜಿಸಿ=ಪೂಜೆಯನ್ನು ಮಾಡಿ; ಇಹೆನ್=ಇದ್ದೇನೆ ; ಎಂಬ=ಎನ್ನುವ ; ಸಂದೇಹಿ ಮಾನವ=ಒಳಿತು/ಕೆಡುಕು ಹಾಗೂ ಸರಿ/ತಪ್ಪುಗಳ ನಡುವೆ ತೊಳಲಾಡುವ ಮನಸ್ಸುಳ್ಳ ವ್ಯಕ್ತಿ; ನೀ=ನೀನು ; ಕೇಳ್+ಆ; ಕೇಳಾ=ಕೇಳಿಸಿಕೊ/ತಿಳಿದುಕೊ/ಅರಿತುಕೊ ;

ಮೀಯದೆ=ನೀರಿನಲ್ಲಿ ಮುಳುಗಿ ಮಡಿಯಾಗುವುದಿಲ್ಲವೇ ; ತಾ=ತಾನು ; ತನ್ನ=ಸ್ನಾನ ಮಾಡಿದ ವ್ಯಕ್ತಿಯ; ಮನ=ಮನಸ್ಸು ; ಮೀಯದ+ಅನ್ನಕ್ಕರ ; ಮೀಯದ=ಸ್ನಾನ ಮಾಡದ/ಕೊಳೆಯನ್ನು ತೊಳೆದುಕೊಳ್ಳದ ; ಅನ್ನಕ್ಕರ=ಅಲ್ಲಿಯತನಕ/ಅಲ್ಲಿಯವರೆಗೆ ; ಬೆಡಗು=ತಳುಕು/ಒಯ್ಯಾರ/ಚಮತ್ಕಾರ; ಬೆಡಗಿನ ಮಾತು=ಕೇಳುವವರ ಮನಸೆಳೆಯುವಂತಹ ಆದರೆ ಆಚರಣೆಯಲ್ಲಿ ಇಲ್ಲದ ತೋರಿಕೆಯ ಮಾತುಗಳು ; ಮೆಚ್ಚು=ಒಪ್ಪು/ಬಯಸು/ಒಲಿಯುವುದು ; ಮೆಚ್ಚುವನೆ=ಒಪ್ಪುತ್ತಾನೆಯೇ; ಗುಹೇಶ್ವರ ಲಿಂಗ=ಶಿವ/ಈಶ್ವರ/ದೇವರು.)



೩೦. ಮುಸುರೆಯ ಮಡಕೆಯ ನೊಣ ಮುತ್ತಿಕೊಂಡಿಪ್ಪಂತೆ
ಕಸವುಳ್ಳ ಹೊಲದಲ್ಲಿ ಪಶುಗಳು ನೆರೆದಿಪ್ಪಂತೆ
ಅನ್ನ ಉದಕ ಹೊನ್ನು ವಸ್ತ್ರವುಳ್ಳ ದೊರೆಯ ಬಾಗಿಲಲ್ಲಿ
ಬಹುಭಾಷೆಯ ಹಿರಿಯರುಗಳು ನೆರೆದುಕೊಂಡಿಪ್ಪರು
ಗುಹೇಶ್ವರಾ ನಿಮ್ಮ ಶರಣರು ಆಶಾಪಾಶವಿರಹಿತರು.

ಸಿರಿವಂತಿಕೆ ಮತ್ತು ಆಡಳಿತದ ದೊಡ್ಡ ಗದ್ದುಗೆಯಲ್ಲಿರುವವರನ್ನು ಹಾಡಿಹೊಗಳುತ್ತಾ, ತಮ್ಮತನವನ್ನು ಕಳೆದುಕೊಂಡು ಬಾಳುತ್ತಿರುವ ವ್ಯಕ್ತಿಗಳ ನಡೆನುಡಿಗಳನ್ನು ಈ ವಚನದಲ್ಲಿ ಹೇಳಲಾಗಿದೆ.

"ತಮ್ಮತನ/ತನ್ನತನ" ಎಂದರೆ ವ್ಯಕ್ತಿಯು ತಾನಿರುವ/ತಾನು ದುಡಿಯುತ್ತಿರುವ ನೆಲೆಯಲ್ಲಿನ ಒಡೆಯರ/ಉಳ್ಳವರ ನಡೆನುಡಿಯಲ್ಲಿ ತಪ್ಪುಗಳು ಕಂಡುಬಂದಾಗ, ಅವನ್ನು ತಿದ್ದಿಕೊಳ್ಳುವಂತೆ ತಿಳಿಯ ಹೇಳುವ ಎದೆಗಾರಿಕೆ ; ತನ್ನ ಮಾತುಗಳಿಗೆ ಮನ್ನಣೆ ದೊರೆಯದಿದ್ದಾಗ, ಒಡೆಯರ/ಉಳ್ಳವರ ಎಡೆಯಿಂದ ದೂರ ಸರಿಯುವ ದಿಟ್ಟತನ. ಸುಳ್ಳು ನುಡಿ ಇಲ್ಲವೇ ಚಾಡಿ ಮಾತುಗಳಿಂದ ಒಡೆಯರನ್ನು/ಉಳ್ಳವರನ್ನು ಒಲಿಸಿಕೊಂಡು, ತಮಗೆ ಬೇಕಾದುದೆಲ್ಲವನ್ನೂ ಪಡೆದುಕೊಳ್ಳಬೇಕೆಂಬ ಕಪಟತನವಿಲ್ಲದಿರುವುದು; ಅತಿ ವಿನಯವನ್ನು ತೋರಿಸುತ್ತ ಮಯ್ ಮನಗಳನ್ನು ಕುಗ್ಗಿಸಿಕೊಳ್ಳದಿರುವುದು.

(ಮುಸುರೆ=ಅಕ್ಕಿಯನ್ನು ಬೇಯಿಸಿ ಅನ್ನವನ್ನು ಮಾಡಿದ ಇಲ್ಲವೇ ಮುದ್ದೆ ಮಾಡಲೆಂದು ರಾಗಿ ಹಿಟ್ಟನ್ನು ಬೇಯಿಸಿ, ಓನಿಸಿದ ಮಡಕೆಯ ಒಳಗಡೆ ಒರೆದುಕೊಂಡಿರುವ ಅನ್ನದ/ಹಿಟ್ಟಿನ ಕರಿ/ಅಡುಗೆ ಮಾಡಿದ ಮಡಕೆಗೆ ಅಂಟಿಕೊಂಡಿರುವ ಆಹಾರದ ಕಣಗಳು; ಮಡಕೆ=ನೀರನ್ನು ತುಂಬಿಡಲು ಇಲ್ಲವೇ ಅಡುಗೆಯನ್ನು ಮಾಡಲು ಬಳಸುವ ಮಣ್ಣಿನಿಂದ ಮಾಡಿರುವ ಪಾತ್ರೆ; ಮುಸುರೆಯ ಮಡಕೆಯ=ಮುಸುರೆಯಿಂದ ಕೂಡಿದ ಮಡಕೆಯನ್ನು; ನೊಣ=ಮನೆಗಳಲ್ಲಿ/ಕಸಕಡ್ಡಿಗಳಿರುವ ಎಡೆಯಲ್ಲಿ/ಕೊಳಕಿನ ವಸ್ತುಗಳಿರುವ ಜಾಗದಲ್ಲಿ ಹಾರಾಡುವ ಕೀಟ/ಕ್ರಿಮಿ; ಮುತ್ತಿಕೊಂಡು+ಇಪ್ಪ+ಅಂತೆ;

ಮುತ್ತು=ಮೇಲೆ ಬೀಳು/ಸುತ್ತುವರಿ/ಆವರಿಸು/ಕವಿದುಕೊಳ್ಳು; ಇಪ್ಪ=ಇರುವ; ಅಂತೆ=ಹಾಗೆ; ಇಪ್ಪಂತೆ=ಇರುವ ರೀತಿಯಲ್ಲಿ; ಕಸ+ಉಳ್ಳ; ಕಸ=ಹೊಲಗದ್ದೆತೋಟಗಳಲ್ಲಿ ಬೆಳೆಯ ನಡುವೆ ತಾನಾಗಿ ಬೆಳೆದು ನಿಂತಿರುವ ಸಸಿ/ಗಿಡಗಳು/ಕಳೆಗಿಡಗಳು; ಉಳ್ಳ=ಇರುವ; ಹೊಲ+ಅಲ್ಲಿ; ಹೊಲ=ಜಮೀನು/ಬೆಳೆಗಳನ್ನು ಬೆಳೆಯುವ ಪ್ರದೇಶ; ಕಸವುಳ್ಳ ಹೊಲದಲ್ಲಿ=ಬೆಳೆಗಿಂತ ಕಳೆಯೇ ಹೆಚ್ಚಾಗಿ ಬೆಳೆದು ನಿಂತಿರುವ ಹೊಲದಲ್ಲಿ ; ಪಶು=ಹಸು/

ಗೋವು/ದನ; ನೆರೆದು+ಇಪ್ಪ+ಅಂತೆ; ನೆರೆ=ಗುಂಪುಗೂಡು/ಒಟ್ಟಾಗಿ ಸೇರು/ಜತೆಗೂಡು; ನೆರೆದು=ಜತೆಗೂಡಿ/ಗುಂಪಾಗಿ/ಒಟ್ಟಾಗಿ;

ಅನ್ನ=ಆಹಾರ/ಉಣಿಸು/ತಿನಸು; ಉದಕ=ಅನ್ನ/ಹಿಟ್ಟು ಮುಂತಾದುವನ್ನು ಉಣ್ಣುವಾಗ, ಅದರೊಡನೆ ಬೆರೆಸಿಕೊಳ್ಳುವ ಸಾರು/ಎಸರು/ಹುಳಿ/ಸಾಂಬಾರು; ಹೊನ್ನು=ಚಿನ್ನ/ಬಂಗಾರ/ಸಂಪತ್ತು; ವಸ್ತ್ರ+ಉಳ್ಳ; ವಸ್ತ್ರ=ಬಟ್ಟೆ/ಅರಿವೆ; ದೊರೆ=ರಾಜ/ಅರಸ/ಒಡೆಯ; ಬಾಗಿಲು+ಅಲ್ಲಿ; ದೊರೆಯ ಬಾಗಿಲಲ್ಲಿ=ಸಿರಿವಂತರ/ಗದ್ದುಗೆಯನ್ನೇರಿದವರ ಮನೆಯ ಮುಂದೆ/ಸಮೀಪದಲ್ಲಿ/ಬಳಿಯಲ್ಲಿ/ಹತ್ತಿರದಲ್ಲಿ/ಕಾಲ ಬುಡದಲ್ಲಿ ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ;

ಬಹು=ಅನೇಕ/ಹಲವು/ಬಗೆಬಗೆಯ; ಹಿರಿಯರು=ವಯಸ್ಸಿನಲ್ಲಿ ಮತ್ತು ಅರಿವಿನಲ್ಲಿ ದೊಡ್ಡವರು; ಬಹುಭಾಷೆಯ ಹಿರಿಯರು=ಎರಡು ಇಲ್ಲವೇ ಎರಡಕ್ಕಿಂತ ಹೆಚ್ಚಿನ ನುಡಿಗಳ ಕಲಿಕೆ ಮತ್ತು ಬಳಕೆಯಲ್ಲಿ ಚೆನ್ನಾಗಿ ಪರಿಣತರಾದವರು/ಕವಿಗಳು/ವಿದ್ವಾಂಸರು/ಕಲಾವಿದರು/ಮಾತಿನ ಚತುರರು/ಗಮಕಿಗಳು/ಹಾಸ್ಯಪಟುಗಳು; ನೆರೆದು+ಕೊಂಡು+ಇಪ್ಪರು; ಇಪ್ಪರು=ಇರುವರು;

ಶರಣ=ಶಿವನ ಬಗ್ಗೆ ಒಲವುಳ್ಳವನು/ಒಳ್ಳೆಯ ನಡೆನುಡಿಗಳಲ್ಲೇ ಶಿವನನ್ನು ಕಾಣುವಂತಹವನು; ಆಶಾ+ಪಾಶ+ವಿರಹಿತರು; ಆಶಾ=ಆಸೆ/ಬಯಕೆ/ಹಂಬಲ; ಪಾಶ=ಹಗ್ಗ/ಬಲೆ/ಜಾಲ/ಕೊರಳಿಗೆ ಹಾಕಿ ಎಳೆಯುವ ನೇಣಿನ ಕುಣಿಕೆ; ವಿರಹಿತ=ಇಲ್ಲದಿರುವವನು/ಬಿಟ್ಟವನು/ತೊರೆದವನು; ಆಶಾಪಾಶವಿರಹಿತರು=ಹೆಚ್ಚಿನ ಬಯಕೆಗೆ/ಕೆಟ್ಟ ಆಸೆಗಳಿಗೆ ಒಳಗಾಗದವರು/ಬಲಿಯಾಗದವರು/ಈಡಾಗದವರು.)



೩೧. ಶಬ್ದಸಂಭ್ರಮದಲ್ಲಿ
ಹಿಂದುಗಾಣರು ಮುಂದುಗಾಣರು
ತಮ್ಮ ತಾವರಿಯರು
ಇದು ಕಾರಣ ಮೂರು ಲೋಕವೆಲ್ಲವು
ಬರುಸೂರೆವೋಯಿತ್ತು ಗುಹೇಶ್ವರ.

**ದೊಡ್ಡ ದೊಡ್ಡ ಮಾತುಗಳನ್ನಾಡುತ್ತ, ಮಾತಿನ ಮೋಡಿಯಿಂದಲೇ ಎಲ್ಲರನ್ನೂ ತಮ್ಮತ್ತ ಸೆಳೆಯುತ್ತ, ಎಲ್ಲವನ್ನೂ ಗೆದ್ದೆವೆಂದು ಮೆರೆಯುವ ವ್ಯಕ್ತಿಗಳನ್ನು ಈ ವಚನದಲ್ಲಿ ಟೀಕಿಸಲಾಗಿದೆ.**

(ಶಬ್ದ=ಮಾತು/ಪದ/ನುಡಿ; ಸಂಭ್ರಮ=ಆಡಂಬರ/ಬೊಬ್ಬೆ/ಸಡಗರ; ಶಬ್ದಸಂಭ್ರಮದಲ್ಲಿ=ಕೇಳುಗರ ಮನಸೆಳೆಯುವಂತಹ ಮಾತುಗಳನ್ನಾಡುವುದರಲ್ಲಿ ತೊಡಗಿ; ಹಿಂದು+ಕಾಣರು ; ಹಿಂದು=ಈ ಮೊದಲು ನಡೆದಿರುವುದನ್ನು ; ಕಾಣರು=ತಿಳಿಯರು; ಮುಂದು+ಕಾಣರು; ಮುಂದು=ಮುಂದಿನ ದಿನಗಳಲ್ಲಿ ಏನಾಗುವುದೆಂಬುದನ್ನು; ತಾವ್+ಅರಿಯರು ; ತಾವ್=ತಾವು/ಅವರು/ಮಾತಿನ ಮಲ್ಲರು ; ಅರಿ=ತಿಳಿ/ಗ್ರಹಿಸು; ಅರಿಯರು=ತಿಳಿಯಲಾರರು/ಗ್ರಹಿಸಿಕೊಳ್ಳಲಾರರು; ತಮ್ಮ ತಾವರಿಯರು=ತಮ್ಮ ನಡೆನುಡಿಯಲ್ಲಿನ ಇತಿಮಿತಿಗಳನ್ನು ತಿಳಿಯಲಾರರು ;

"ತಮ್ಮನ್ನು ತಾವು ಅರಿಯುವುದು" ಎಂದರೆ ಪ್ರತಿಯೊಬ್ಬ ಮಾನವನು ತಾನು ಹುಟ್ಟಿ ಬೆಳೆದು ಬಾಳುವ ಪರಿಸರದಲ್ಲಿರುವ ನಿಸರ್ಗದಲ್ಲಿನ ಏರಿಳಿತಗಳಿಗೆ ಮತ್ತು ಸಮಾಜದ ಕಟ್ಟುಪಾಡುಗಳಿಗೆ ಒಳಪಟ್ಟು ವ್ಯವಹರಿಸುತ್ತಿರುತ್ತಾನೆ. ಆದುದರಿಂದಲೇ ಮಾನವ ಜೀವಿಯ ಮಯ್-ಮನಗಳು ಸದಾಕಾಲ ಒಳಿತು ಕೆಡುಕಿನ ಇಬ್ಬಗೆಯ ತೊಳಲಾಟದಲ್ಲಿ ಸಿಲುಕಿರುತ್ತವೆ ಎಂಬ ವಾಸ್ತವವನ್ನು ತಿಳಿದುಕೊಳ್ಳುವುದು ;

ಇದು ಕಾರಣ=ಎಲ್ಲ ವ್ಯಕ್ತಿಗಳಲ್ಲಿಯೂ ಒಳಿತು-ಕೆಡುಕಿನ ಒಳಮಿಡಿತಗಳು ಇರುತ್ತವೆ ಎಂಬ ವಾಸ್ತವವನ್ನು ತಿಳಿಯದೆ ಇರುವುದರಿಂದ ; ಲೋಕ+ಎಲ್ಲವು ; ಮೂರು ಲೋಕ=ದೇವಲೋಕ/ಭೂಲೋಕ/ಪಾತಾಳಲೋಕವೆಂಬ ಮೂರು ಲೋಕಗಳು ಇವೆಯೆಂಬ ನಂಬಿಕೆಯು ಪರಂಪರಾಗತವಾಗಿ ಜನಮನದಲ್ಲಿ ನೆಲೆಸಿದೆ; ಬರು+ಸೂರೆ+ಹೋಯಿತ್ತು ; ಬರು=ಬರಿದು/ಕೇವಲ/ಏನೊಂದು ಪ್ರಯೋಜನವಿಲ್ಲದೆ; ಸೂರೆ=ಲೂಟಿ/ಕೊಳ್ಳೆ; ಬರುಸೂರೆ ಹೋಯಿತ್ತು=ಟೊಳ್ಳುತನದ ಬದುಕಿನಲ್ಲೇ/ ಬೂಟಾಟಕೆಯ ನಡೆ ನುಡಿಗಳಲ್ಲೇ ಕಳೆದುಹೋಗುತ್ತಿದೆ/ಸಂಪೂರ್ಣವಾಗಿ ಹಾಳಾಗುತ್ತಿದೆ.)



೩೨. ಸುತ್ತಿ ಸುತ್ತಿ ಬಂದಡಿಲ್ಲ ಲಕ್ಷಗಂಗೆಯ ಮಿಂದಡಿಲ್ಲ
ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ
ನಿತ್ಯ ನೇಮದಿಂದ ತನುವ ಮುಟ್ಟಿಕೊಂಡಡಿಲ್ಲ
ನಿಚ್ಚಕ್ಕೆ ನಿಚ್ಚ ನೆನೆವ ಮನವ ಅಂದಂದಿಗೆ ಅತ್ತಲಿತ್ತ
ಹರಿವ ಮನವ ಚಿತ್ತದಲ್ಲಿ ನಿಲಿಸಬಲ್ಲಡೆ
ಬಚ್ಚಬರಿಯ ಬೆಳಗು ಗುಹೇಶ್ವರ ಲಿಂಗವು.

ಒಳ್ಳೆಯ ಮತ್ತು ಕೆಟ್ಟ ಬಯಕೆಗಳತ್ತ ಎಡೆಬಿಡದೆ ತುಡಿಯುವ ಮಯ್ ಮನಗಳ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳಿತಿನ ನಡೆನುಡಿಗಳತ್ತ ಮನವನ್ನು ಹರಿಸಿ ಬಾಳುವುದು, ಇನ್ನುಳಿದ ಎಲ್ಲಾ ಬಗೆಯ ಆಚರಣೆಗಳಿಗಿಂತ ದೊಡ್ಡದು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

(ಬಂದಡೆ+ಇಲ್ಲ; ಬಂದಡೆ=ಬಂದರೆ ; ಸುತ್ತಿ ಸುತ್ತಿ ಬಂದಡಿಲ್ಲ=ದೇವರ ವಿಗ್ರಹಗಳ ಸುತ್ತ/ದೇವತೆಗಳು ನೆಲೆಸಿದ್ದಾರೆಂದು ಜನಸಮುದಾಯ ಪರಂಪರೆಯಿಂದಲೂ ನಂಬಿಕೊಂಡು ಬಂದಿರುವ ಮರಗಿಡಗಳ ಸುತ್ತ ಮೂರು ಸಲ ಇಲ್ಲವೇ ಅನೇಕ ಸಲ ಸುತ್ತುವುದರಿಂದ/ಬಳಸುವುದರಿಂದ/ಪ್ರದಕ್ಶಿಣೆಯನ್ನು ಹಾಕುವುದರಿಂದ ಯಾವ ಪ್ರಯೋಜನವು ದೊರೆಯದು/ಏನನ್ನೂ ಪಡೆಯಲಾಗದು ;

ಲಕ್ಷ+ಗಂಗೆ ; ಲಕ್ಷ=ನೂರು ಸಾವಿರ/ಲೆಕ್ಕಕ್ಕೆ ಸಿಗದ ಸಂಕೆ/ಹಲವು ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ ; ಗಂಗೆ=ದೇಗುಲಗಳ ಬಳಿ ಹರಿಯುವ ತೊರೆಗಳ/ ಇರುವ ಕೆರೆಕಟ್ಟೆಬಾವಿಗಳ ನೀರು ; ಮಿಂದಡೆ+ಇಲ್ಲ ; ಮೀ=ಸ್ನಾನ ಮಾಡು/ಜಳಕ ಮಾಡು/ಮಯ್ ತೊಳೆ ; ಮಿಂದಡೆ=ಸ್ನಾನ ಮಾಡಿದರೆ/ಮಯ್ ತೊಳೆದರೆ; ಲಕ್ಷಗಂಗೆಯ ಮಿಂದಡಿಲ್ಲ=ದೇಗುಲ ಇಲ್ಲವೇ ಪವಿತ್ರವಾದುದೆಂದು ಹೆಸರು ಪಡೆದಿರುವ ನೆಲೆಗಳಲ್ಲಿರುವ ಕೆರೆ/ಕೊಳ/ತೊರೆಗಳಲ್ಲಿ ಮಿಂದೇಳುವುದರಿಂದ ಯಾವ ಪ್ರಯೋಜನವೂ ದೊರೆಯದು;

ತುಟ್ಟತುದಿ=ಬಹಳ ಎತ್ತರದ ನೆಲೆ/ಮೇಲಿನ ಕೊನೆ ; ಮೇರು=ಒಂದು ಪರ್ವತದ ಹೆಸರು; ಗಿರಿ=ಬೆಟ್ಟ/ಪರ್ವತ; ಮೆಟ್ಟಿ=ತುಳಿದು/ಮೇಲಿನ ತುದಿಗೆ ಹತ್ತಿಹೋಗಿ ನಿಂತುಕೊಂಡು; ಕೂಗಿದಡೆ+ಇಲ್ಲ; ಕೂಗು=ಎತ್ತರದ ದನಿಯಲ್ಲಿ ಪದಗಳನ್ನು ಉಚ್ಚರಿಸುವುದು/ದೇವರ ನಾಮಸ್ಮರಣೆಯನ್ನು ದೊಡ್ಡ ದನಿಯಲ್ಲಿ ಮಾಡುವುದು ; ಕೂಗಿದಡಿಲ್ಲ=ಎತ್ತರದ ದನಿಯಲ್ಲಿ ಗಟ್ಟಿಯಾಗಿ ದೇವರ ಹೆಸರನ್ನು ಉಚ್ಚರಿಸುತ್ತಾ ಮೊರೆಯಿಡುವುದರಿಂದ ಯಾವ ಪ್ರಯೋಜನವೂ ದೊರೆಯದು ; ನಿತ್ಯ=ಸದಾಕಾಲ/ ಯಾವಾಗಲೂ; ನೇಮ+ಇಂದ; ನೇಮ=ದೇವರನ್ನು ಒಲಿಸಿಕೊಳ್ಳಲು/ದೇವರ

ಅನುಗ್ರಹವನ್ನು ಪಡೆಯಲೆಂದು ಮಾಡುವ ಬಹುಬಗೆಯ ಆಚರಣೆಗಳು ; ತನು=ಮಯ್/ದೇಹ/ಶರೀರ ; ಮುಟ್ಟಿ+ಕೊಂಡಡೆ+ಇಲ್ಲ ; ಮುಟ್ಟು= ಸೋಕುವುದು/ತಾಕುವುದು ; ಕೊಂಡಡೆ=ಕೊಂಡರೆ; ತನುವ ಮುಟ್ಟಿಕೊಂಡಡಿಲ್ಲ=ದೇವರ ವಿಗ್ರಹದ ಮುಂದೆ ದಿಂಡುರುಳುವುದು/ದೇವರ ವಿಗ್ರಹದ ಸುತ್ತ ಉರುಳುಸೇವೆಯನ್ನು ಮಾಡುವುದು/ಉಪವಾಸ ಮುಂತಾದ ಆಚರಣೆಗಳ ಮೂಲಕ ಮಯ್ಯನ್ನು ದಂಡಿಸುವುದರಿಂದ ಯಾವ ಪ್ರಯೋಜನವೂ ದೊರೆಯದು ;

ನಿಚ್ಚ=ನಿತ್ಯವೂ/ಪ್ರತಿದಿನವೂ ; ನಿಚ್ಚಕ್ಕೆ ನಿಚ್ಚ=ಎಡೆಬಿಡದೆ/ಒಂದೇ ಸಮನೆ/ನಿರಂತರವಾಗಿ; ನೆನೆವ=ನೆನಪಿಸಿಕೊಳ್ಳುವ; ಮನ=ಮನಸ್ಸನ್ನು ; ಅಂದು+ಅಂದಿಗೆ ; ಅಂದು=ಆ ದಿನ/ಆ ಸಮಯ; ಅಂದಿಗೆ= ಆ ದಿನಕ್ಕೆ/ಆ ಸಮಯಕ್ಕೆ ; ಅತ್ತ+ಅಲ್+ಇತ್ತ ; ಅತ್ತಲ್=ಆ ಕಡೆ ; ಇತ್ತ=ಈ ಕಡೆ ; ಹರಿ=ಚಲಿಸು ; ಅಂದಂದಿಗೆ ಅತ್ತಲಿತ್ತ ಹರಿವ ಮನವ=ಜೀವನದ ಪ್ರತಿಗಳಿಗೆಯಲ್ಲೂ ಬಹುಬಗೆಯ ಚಂಚಲತೆಯಿಂದ ಆಸೆ/ಆದರ್ಶಗಳ ನಡುವೆ, ಒಳಿತು/ಕೆಡುಕಿನ ನಡುವೆ ಇಬ್ಬಗೆಯ ಸೆಳೆತದಲ್ಲಿ ಸಿಲುಕಿ ತೊಳಲಾಡುವ ಮನಸ್ಸನ್ನು ;

ಚಿತ್ತ=ಮನಸ್ಸು/ಗುರಿ/ಉದ್ದೇಶ; ನಿಲಿಸ+ಬಲ್ಲಡೆ; ನಿಲಿಸ=ನಿಲ್ಲಿಸಲು; ಬಲ್ಲಡೆ=ತಿಳಿದಿದ್ದರೆ; ಚಿತ್ತದಲ್ಲಿ ನಿಲಿಸಬಲ್ಲಡೆ=ಒಳಿತಿನ ನಡೆನುಡಿಗಳತ್ತ ನೆಲೆಗೊಳಿಸುವ ಕಸುವು ದೊರೆತರೆ; ಬಚ್ಚಬರಿ=ಪರಿಪೂರ್ಣವಾದ/ಕೇವಲ; ಬಚ್ಚಬರಿ ಬೆಳಗು=ಸಂಪೂರ್ಣವಾದ ಬೆಳಕು/ಪರಿಪೂರ್ಣವಾದ ಅರಿವು ದೊರೆಯುವುದು ಎಂಬ ರೂಪಕದ ತಿರುಳನಲ್ಲಿ ಬಳಕೆಯಾಗಿದೆ; ಗುಹೇಶ್ವರ ಲಿಂಗ=ಶಿವ/ದೇವರು)



೩೩. ಹಗಲನಿರುಳ ಮಾಡಿ
ಇರುಳ ಹಗಲ ಮಾಡಿ
ಆಚಾರವ ಅನಾಚಾರವ ಮಾಡಿ
ಅನಾಚಾರವ ಆಚಾರವ ಮಾಡಿ
ಭಕ್ತನ ಭವಿಯ ಮಾಡಿ
ಭವಿಯ ಭಕ್ತನ ಮಾಡಿ
ನುಡಿವನ ಮಾತ ಕೇಳಲಾಗದು ಗುಹೇಶ್ವರ.

ಮಾತಿನಲ್ಲೇ ಮಂಟಪವನ್ನು ಕಟ್ಟಿ ಜನರನ್ನು ಮರುಳುಮಾಡಿ ಸಮಾಜದ ಬದುಕನ್ನು ಹಾಳುಮಾಡುವ ಸೋಗಲಾಡಿಗಳನ್ನು/ನಯವಂಚಕರನ್ನು ಕುರಿತು ಈ ವಚನದಲ್ಲಿ ಕಟುವಾಗಿ ವಿಡಂಬಿಸಿಲಾಗಿದೆ.

(ಹಗಲ್+ಅನ್+ಇರುಳ್+ಅ ; ಹಗಲು=ನಿಸರ್ಗದಲ್ಲಿ ಬೆಳಕು ಹರಡಿರುವ ಸಮಯ ; ಅನ್=ಅನ್ನು ; ಇರುಳ್+ಅ ; ಇರುಳು=ರಾತ್ರಿ/ಕತ್ತಲು/ನಿಸರ್ಗದಲ್ಲಿ ಕತ್ತಲು ಕವಿದಿರುವ ಸಮಯ ; ಇರುಳ=ರಾತ್ರಿಯನ್ನಾಗಿ ; ಹಗಲ್+ಅ ; ಹಗಲ=ಬೆಳಕು ಹರಡಿರುವ ಸಮಯವನ್ನಾಗಿ ;

"ಹಗಲನಿರುಳ ಮಾಡಿ ಇರುಳ ಹಗಲ ಮಾಡಿ" ಎಂಬ ಪದಕಂತೆಗಳು "ಮಾತಿನ ಮೋಡಿಯಿಂದಲೇ ಕೇಳುವವರ ಮನವನ್ನು ತಮ್ಮತ್ತ ಸೆಳೆದುಕೊಂಡು, ತಾವಾಡುವ ಮಾತುಗಳನ್ನು ನಂಬುವಂತೆ ಮಾಡಿ, ನಿಜವನ್ನು ಸುಳ್ಳನ್ನಾಗಿಸಿ / ಸುಳ್ಳನ್ನು ನಿಜವನ್ನಾಗಿಸಿ ಜನರನ್ನು ವಂಚಿಸುವುದು" ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿವೆ; ಆಚಾರ=ತನಗೆ ಮತ್ತು ಇತರರಿಗೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳು ; ಆಚಾರ+ಅ=ಆಚಾರವ=ಆಚಾರವನ್ನು; ಅನಾಚಾರ=ತನಗೆ ಮತ್ತು ಇತರರಿಗೆ ಕೆಡುಕನ್ನು ಉಂಟುಮಾಡುವಂತಹ ನಡೆನುಡಿಗಳು; ಅನಾಚಾರ+ಅ= ಅನಾಚಾರವ= ಅನಾಚಾರವನ್ನು ;

"ಆಚಾರವ ಅನಾಚಾರವ ಮಾಡಿ ಅನಾಚಾರವ ಆಚಾರವ ಮಾಡಿ" ಎಂಬ ಪದಕಂತೆಗಳು "ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುತ್ತಿರುವುದನ್ನೇ ಕೆಡುಕಿನ ನಡೆನುಡಿಗಳೆಂದು ಪ್ರಚಾರ ಮಾಡುತ್ತ, ಜನತೆಗೆ ಕೇಡನ್ನು ಬಗೆಯುತ್ತಿರುವ ಕೆಲಸಗಳನ್ನೇ ಒಳಿತೆಂದು ಹಾಡಿಹೊಗಳುತ್ತ, ತಪ್ಪು ಮಾಹಿತಿಗಳನ್ನು ಹರಡುವುದರ ಮೂಲಕ ಜನಸಮುದಾಯದ ನೆಮ್ಮದಿಯ ಬದುಕನ್ನು ಕಲಕುವುದು/ಹಾಳುಮಾಡುವುದು" ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿವೆ;

ಭಕ್ತ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು ; ಭವಿ=ದುರಾಶೆ/ನೀಚತನ/ವಂಚನೆ/ಕ್ರೂರತನದ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವವನು ;

"ಭಕ್ತನ ಭವಿಯ ಮಾಡಿ ಭವಿಯ ಭಕ್ತನ ಮಾಡಿ" ಎಂಬ ಪದಕಂತೆಗಳು "ಸಮಾಜಕ್ಕೆ ಒಳಿತನ್ನು ಮಾಡುವವನನ್ನೇ ಕೆಡುಕನೆಂದು ಹೇಳುತ್ತ , ಕೆಡುಕನನ್ನೇ ಸಮಾಜವನ್ನು ಕಾಪಾಡುವವನು ಎಂದು ಕೊಂಡಾಡುವುದು" ಎಂಬ ತಿರುಳಿನಲ್ಲಿ ಬಳಕೆಯಾಗಿದೆ ; ನುಡಿ=ಮಾತು ; ನುಡಿವನ=ಮಾತನಾಡುವವನ ; ಮಾತು+ಅ ; ಮಾತ=ಮಾತುಗಳನ್ನು/ ನುಡಿಗಳನ್ನು; ಕೇಳಲ್+ಆಗದು ; ಕೇಳಲ್=ಕೇಳುವುದಕ್ಕೆ ; ಆಗದು=ಆಗುವುದಿಲ್ಲ ; ಗುಹೇಶ್ವರ=ಅಲ್ಲಮನ ಮೆಚ್ಚಿನ ದೇವರು/ಶಿವ.)



೩೪. ಹಸಿವಿನ ಪ್ರೇಮಕ್ಕೆ ಬೋನವ ಹಿಡಿವರು
ತೃಷೆಯ ಪ್ರೇಮಕ್ಕೆ ಮಜ್ಜನಕ್ಕೆರೆವರು
ದೇವರಿಲ್ಲ ಭಕ್ತರಿಲ್ಲ ನಾನೂ ಇಲ್ಲ ನೀನೂ ಇಲ್ಲ
ಗುಹೇಶ್ವರ ಪೂಜಿಸುವರೂ ಇಲ್ಲ ಪೂಜೆಗೊಂಬವರೂ ಇಲ್ಲ.

**ಶಿವಶರಣಶರಣೆಯರ ಪಾಲಿಗೆ ದೇವರ ವಿಗ್ರಹದ ಮುಂದೆ ಮಾಡುವ ಎಲ್ಲಾ ಬಗೆಯ ಆಚರಣೆಗಳು ಕೇವಲ ತೋರಿಕೆಯ ಇಲ್ಲವೇ ಬೂಟಾಟಿಕೆಯ ಆಚರಣೆಗಳಾಗಿ ಕಂಡುಬರುತ್ತವೆ. ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳನ್ನು ರೂಪಿಸಿಕೊಳ್ಳಲು ನೆರವಾಗುವ ಮನದೊಳಗಿನ ಶಿವನನ್ನು ಮಾತ್ರ ಶಿವಶರಣಶರಣೆಯರು ಒಪ್ಪಿದ್ದರು ಮತ್ತು ನಂಬಿದ್ದರು. ವಿಗ್ರಹದ ರೂಪಿನಲ್ಲಿರುವ ಇಲ್ಲವೇ ಗುಡಿಗೋಪುರಗಳಲ್ಲಿ ಪೂಜೆಗೊಳ್ಳುವ ದೇವರ ಇರುವಿಕೆಯನ್ನು ಅವರು ತಳ್ಳಿಹಾಕಿದ್ದರು. ದೇವರ ಹೆಸರಿನಲ್ಲಿ ನಡೆಯುವ ಆಚರಣೆಗಳನ್ನು ಈ ವಚನದಲ್ಲಿ ತಿರುಳಿಲ್ಲದ ಕೆಲಸಗಳೆಂದು ಅಲ್ಲಗಳೆಯಲಾಗಿದೆ.**

(ಹಸಿವು=ಉಂಡು ತಿಂದು ಕುಡಿದು ಹೊಟ್ಟೆಯನ್ನು ತುಂಬಿಸಿ ಕೊಳ್ಳಬೇಕೆಂಬ ಬಯಕೆ/ಆಸೆ ; ಪ್ರೇಮ=ಒಲವು/ಅಕ್ಕರೆ/ಅನುರಾಗ ; ಹಸಿವಿನ ಪ್ರೇಮಕ್ಕೆ=ತಮ್ಮ ಹೊಟ್ಟೆಯ ಹಸಿವನ್ನು ಹಿಂಗಿಸಿಕೊಳ್ಳಲೆಂದು ; ಬೋನ=ಓಗರ/ಅನ್ನ/ಆಹಾರ/ತಿನಿಸು ಉಣಿಸುಗಳು; ಬೋನವ ಹಿಡಿವರು=ಬಗೆಬಗೆಯ ತಿನಸು ಉಣಿಸುಗಳನ್ನು ದೇವರ ಮುಂದೆ ಎಡೆಯಾಗಿ ಇಡುವರು;

ತೃಷೆ=ಬಾಯಾರಿಕೆ/ಕಾಮನೆ/ಆಸೆ/ಬಯಕೆ ; ತೃಷೆಯ ಪ್ರೇಮಕ್ಕೆ=ತಮ್ಮ ಕಾಮನೆಗಳನ್ನು ಪೂರಯಿಸಿಕೊಳ್ಳಬೇಕೆಂಬ ಉದ್ದೇಶದಿಂದ ; ಮಜ್ಜನಕ್ಕೆ+ಎರೆವರು ; ಮಜ್ಜನ=ಸ್ನಾನ/ಜಳಕ/ಮಯ್ ತೊಳೆಯುವಿಕೆ; ಎರೆ=ಸುರಿ/ಹೊಯ್ಯು ; ಮಜ್ಜನಕ್ಕೆರೆವರು=ದೇವರ ವಿಗ್ರಹದ ಮೇಲೆ ನೀರು/ಹಾಲು/ಜೇನು ಮುಂತಾದುವನ್ನು ಸುರಿದು, ವಿಗ್ರಹವನ್ನು ತೊಳೆಯುವರು ; ದೇವರ್+ಇಲ್ಲ;

ದೇವರು=ಜೀವನದಲ್ಲಿ ಬರುವ ಎಡರು ತೊಡರುಗಳನ್ನು ನಿವಾರಿಸಿ, ತಮಗೆ ಒಲಿತನ್ನು ಮಾಡಿ ಕಾಪಾಡುವ ವ್ಯಕ್ತಿಯನ್ನು/ಶಕ್ತಿಯನ್ನು ದೇವರು ಎಂದು ಮಾನವ ಸಮುದಾಯ ನಂಬಿದೆ. ಭಕ್ತರ್+ಇಲ್ಲ; ಭಕ್ತ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು; ಗುಹೇಶ್ವರ=ಶಿವ; ಪೂಜೆ+ಕೊಂಬವರೂ; ಕೊಂಬವರು=ಪಡೆಯುವವರು/ಕೊಳ್ಳುವವರು.)



೩೫. ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು
ಹಸಿವು ಹೋಹುದೇ
ಅಂಗದ ಮೇಲೆ ಲಿಂಗಸ್ವಾಯತವಾದರೇನು
ಭಕ್ತನಾಗಬಲ್ಲನೆ
ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ
ಆ ಕಲ್ಲು ಲಿಂಗವೆ
ಆ ಮೆಳೆ ಭಕ್ತನೆ
ಇಟ್ಟಾತ ಗುರುವೆ
ಇಂತಪ್ಪವರ ಕಂಡಡೆ ನಾಚುವೆನಯ್ಯ ಗುಹೇಶ್ವರ.

ಜೀವನದಲ್ಲಿ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳನ್ನು ಹೊಂದದೆ, ಮಯ್ ಮೇಲೆ ಲಿಂಗವನ್ನು ತೊಟ್ಟು ದೇವರಲ್ಲಿ ಒಲವುಳ್ಳವನಂತೆ ಕಾಣಿಸಿಕೊಳ್ಳುವ ವ್ಯಕ್ತಿಯ ತೋರಿಕೆಯ ಗುಣವನ್ನು ಈ ವಚನದಲ್ಲಿ ಕಟುವಾಗಿ ಟೀಕಿಸಲಾಗಿದೆ.

(ಕಟ್ಟು+ಓಗರದ; ಕಟ್ಟು=ಕೂಡಿಸು/ಸೇರಿಸು; ಓಗರ=ಅನ್ನ/ಅಟ್ಟ ಅಡುಗೆ/ತಿಂಡಿತಿನಸು ; ಮೊಟ್ಟೆ=ಬುತ್ತಿ/ಗಂಟು/ಪೊಟ್ಟಣ; ಕಟ್ಟೋಗರದ ಮೊಟ್ಟೆ=ಪಯಣದ ಸಮಯದಲ್ಲಿ ದಾರಿಯ ನಡುವೆ ತಂಗಿದಾಗ ಉಣಲೆಂದು ಕಟ್ಟಿಕೊಂಡು ತಂದಿರುವ ಉಣಿಸು ತಿನಸಿನ ವಸ್ತುಗಳುಳ್ಳ ಪೊಟ್ಟಣ; ಕಟ್ಟಿದರೆ+ಏನು; ಕಟ್ಟಿದರೆ=ಕಟ್ಟಿಕೊಂಡರೆ/ಬಿಗಿದುಕೊಂಡರೆ ; ಏನು=ಯಾವ ಪ್ರಯೋಜನ ; ಹಸಿವು=ಉಂಡು ತಿಂದು ಕುಡಿದು ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕೆಂಬ ಬಯಕೆ/ಆಸೆ ; ಹೋಹುದೆ= ಹೋಗುವುದೆ/ನೀಗುವುದೆ/ ತುಂಬುವುದೆ; ಅಂಗ=ಮಯ್/ಶರೀರ/ದೇಹ; ಲಿಂಗ+ಸ್ವಾಯತ+ಆದರೆ+ ಏನು; ಲಿಂಗ=ಕಲ್ಲನ್ನು ಕೆತ್ತಿ ರೂಪಿಸಿರುವ ಶಿವನ ಸಂಕೇತದ ವಿಗ್ರಹ ;

ಸ್ವಾಯತ=ಕಟ್ಟಿಕೊಂಡಿರುವುದು/ಹಾಕಿಕೊಂಡಿರುವುದು; ಅಂಗದ ಮೇಲೆ ಲಿಂಗಸ್ವಾಯತ=ಶಿವನಲ್ಲಿ ಒಲವುಳ್ಳವನು ಗುರುವಿನ ಮೂಲಕ ಶಿವಲಿಂಗವನ್ನು ಪಡೆದು, ತನ್ನ ಮಯ್ ಮೇಲೆ ತೊಟ್ಟುಕೊಳ್ಳುವುದು/ಕೊರಳಲ್ಲಿ ಹಾಕಿಕೊಳ್ಳುವುದು; ಭಕ್ತನ್+ಆಗ+ಬಲ್ಲನೆ ; ಆಗ=ಆಗಲು; ಆಗಬಲ್ಲನೆ=ಆಗುತ್ತಾನೆಯೇ ;

ಭಕ್ತನಾಗಬಲ್ಲನೆ=ಶಿವಶರಣಶರಣೆಯರ ನಿಲುವಿನಲ್ಲಿ ಯಾವುದೇ ವ್ಯಕ್ತಿಯು ತನ್ನ ಮಯ್ ಮೇಲೆ ಶಿವಲಿಂಗವನ್ನು ಕಟ್ಟಿಕೊಂಡ ಮಾತ್ರಕ್ಕೆ ಶರಣನಾಗುವುದಿಲ್ಲ.

ಶರಣನಾಗಬೇಕಾದರೆ ತನಗೆ ಒಳಿತನ್ನು ಮಾಡಿಕೊಳ್ಳುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳನ್ನು ಹೊಂದಿರಬೇಕು ;

ಇಟ್ಟ=ಇಟ್ಟಿರುವ; ಇಟ್ಟ ಕಲ್ಲು=ಶಿವನಲ್ಲಿ ಒಲವು ಉಳ್ಳವನು ಮಯ್ ಮೇಲೆ ತೊಟ್ಟಿರುವ ಶಿವಲಿಂಗ; ಮೆಳೆ=ಹಾದಿಯ ಬದಿಯ ಬೇಲಿಯಲ್ಲಿ ಬೆಳೆದಿರುವ ಗಿಡಗಂಟೆಗಳ ಪೊದೆ; ಸಿಕ್ಕಿದಡೆ=ಸಿಕ್ಕಿಕೊಂಡರೆ/ನೇತು ಬಿದ್ದರೆ; ಇಟ್ಟ+ಆತ ; ಆತ=ಅವನು; ಇಟ್ಟಾತ=ಇಟ್ಟವನು/ಶಿವಲಿಂಗವನ್ನು ತೊಡಿಸಿದ ವ್ಯಕ್ತಿ ; ಇಂತು+ಅಪ್ಪ+ಅವರ ;

ಇಂತು=ಈ ರೀತಿ ; ಅಪ್ಪ=ಆಗಿರುವ ; ಇಂತಪ್ಪವರ=ಇಂತಹ ವ್ಯಕ್ತಿಗಳನ್ನು/ ಒಳ್ಳೆಯ ನಡೆನುಡಿಗಳಿಲ್ಲದ ಗುರು ಮತ್ತು ಶರಣರನ್ನು ; ಕಂಡಡೆ=ನೋಡಿದರೆ ; ನಾಚುವೆನ್+ಅಯ್ಯ ; ನಾಚು=ಲಜ್ಜೆ/ತಲೆಬಾಗುವುದು ; ನಾಚುವೆನಯ್ಯ=ಶಿವಶರಣರಂತೆ ನಟಿಸುತ್ತಾ, ಕೆಟ್ಟ ನಡೆನುಡಿಗಳಿಂದ ಬಾಳುತ್ತಿರುವ ವ್ಯಕ್ತಿಗಳನ್ನು ಕಂಡು, ನೋವು ಮತ್ತು ಅಪಮಾನದಿಂದ ತಲೆಬಗ್ಗಿಸುತ್ತೇನೆ ; ಗುಹೇಶ್ವರ=ಶಿವ/ದೇವರು.)



೩೬. ಹೊನ್ನು ಮಾಯೆಯೆಂಬರು
ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು
ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು
ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ
ಮಾಯೆ ಕಾಣಾ ಗುಹೇಶ್ವರ.

ಈ ವಚನದಲ್ಲಿ ಅಲ್ಲಮನು ಹೆಣ್ಣು ಸಮುದಾಯದ ಪರವಾಗಿ ದನಿಯೆತ್ತಿದ್ದಾನೆ. ಸಮಾಜದಲ್ಲಿ ನಡೆಯುವ ಎಲ್ಲಾ ಬಗೆಯ ದುರಂತಗಳಿಗೆ 'ಹೆಣ್ಣು-ಹೊನ್ನು-ಮಣ್ಣು' ಕಾರಣವೆಂಬ ನಾಣ್ಣುಡಿ ಕನ್ನಡ ನುಡಿ ಸಮುದಾಯದಲ್ಲಿ ಬಳಕೆಯಲ್ಲಿದೆ. ಹೊನ್ನು ಮತ್ತು ಮಣ್ಣು ಎಂಬುವು ಜಡವಸ್ತುಗಳು; ಆದರೆ ಹೆಣ್ಣು ಎಂಬುವಳು ಮಯ್‌ಮನವನ್ನು ಹೊಂದಿರುವ ಮಾನವ ಜೀವಿ. ಈ ನುಡಿಗಟ್ಟಿನಲ್ಲಿ ಹೆಣ್ಣನ್ನು ಜಡವಸ್ತುಗಳ ಸಾಲಿನಲ್ಲಿ ಇಟ್ಟು ಗುರುತಿಸಲಾಗಿದೆ.

ಇದಕ್ಕೆ ಕಾರಣವೇನೆಂದರೆ ಸಮಾಜದಲ್ಲಿ ಗಂಡಸರ ಮತ್ತು ಹೆಂಗಸರ ಜನಸಂಕೆಯ ಪ್ರಮಾಣ ತುಸು ಹೆಚ್ಚುಕಡಿಮೆ ಸಮನಾಗಿದ್ದರೂ, ಜನಸಮುದಾಯಗಳ ಬದುಕು ಮತ್ತು ಕುಟುಂಬಗಳ ಆಗುಹೋಗುಗಳು "ಇದೇ ಬಗೆಯಲ್ಲಿ ಇರಬೇಕು" ಎಂಬ ಕಟ್ಟುಪಾಡುಗಳನ್ನು ಹಾಕಿರುವ ಮತ್ತು ಜನರನ್ನು ಹತೋಟಿಯಲ್ಲಿಟ್ಟಿರುವ ಧರ‍್ಮ-ರಾಜಕಾರಣ-ತತ್ವಜ್ಞಾನ-ಕಾನೂನು-ವಿದ್ಯೆ-ವ್ಯಾಪಾರ ಮತ್ತು ಇನ್ನಿತರ ಸಾಮಾಜಿಕ ಒಕ್ಕೂಟಗಳೆಲ್ಲವೂ ಬಹುಪಾಲು ಗಂಡಸರಿಂದಲೇ ರಚನೆಗೊಂಡಿವೆ ಮತ್ತು ಗಂಡಸರಿಂದಲೇ ತುಂಬಿವೆ. ಈ ಹಿನ್ನೆಲೆಯಲ್ಲಿ ಮಾನವಜೀವಿಗಳ ಗುಂಪಿನಿಂದ ಹೆಣ್ಣನ್ನು ಹೊರಗಿಟ್ಟಿರುವ "ಹೆಣ್ಣು-ಮಣ್ಣು-ಹೊನ್ನು" ಎಂಬ ಈ ನುಡಿಗಟ್ಟು ಗಂಡಸರಿಂದಲೇ ರಚನೆಗೊಂಡಿದೆ.

ನಮ್ಮ ಸಂಸ್ಕೃತಿಯ ನೆಲೆಯಲ್ಲಿ ಹೊನ್ನನ್ನು ಲಕ್ಷ್ಮಿ ಎಂಬ ದೇವತೆಯನ್ನಾಗಿ ಮತ್ತು ಮಣ್ಣನ್ನು ಭೂದೇವಿಯನ್ನಾಗಿ ಕಲ್ಪಿಸಿಕೊಳ್ಳಲಾಗಿದೆ. "ರಾಮಾಯಣ ನಡೆದದ್ದೇ ಸೀತೆಯೆಂಬ ಹೆಣ್ಣಿನಿಂದಾಗಿ; ಮಹಾಭಾರತ ನಡೆದದ್ದೇ ರಾಜ್ಯಲಕ್ಷ್ಮಿಯೆಂಬ ಹೊನ್ನು-ಮಣ್ಣಿನಿಂದಾಗಿ" ಎಂಬ ನುಡಿಗಳು ನಮ್ಮ ಸಾಮಾಜಿಕ ವ್ಯವಹಾರದ ಮಾತುಕತೆಗಳಲ್ಲಿ ಆಗಾಗ ಕೇಳಿಬರುತ್ತಿರುತ್ತವೆ. ಅಲ್ಲೆಲ್ಲೂ ಗಂಡಸರ ಪ್ರಸ್ತಾಪವೇ ಇಲ್ಲ.

ಅಲ್ಲಿ ನಡೆದ ಪ್ರಸಂಗಗಳಲ್ಲಿ ಗಂಡಸರು ತಪ್ಪುಗಳನ್ನು ಎಸಗಲು ಹೆಣ್ಣಿನ ರೂಪದಲ್ಲಿರುವ "ಹೆಣ್ಣು-ಹೊನ್ನು-ಮಣ್ಣುಗಳೇ ಕಾರಣ" ಎಂಬ ಆರೋಪವಿದೆ. ಜನಸಮುದಾಯದ ಮನದಾಳದಲ್ಲಿ ನಾಟಕೊಂಡಿರುವ ಈ ಬಗೆಯ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸುತ್ತಾ, ಜೀವನದಲ್ಲಿ ನಡೆಯುವ ಆಗುಹೋಗುಗಳಿಗೆ ವ್ಯಕ್ತಿಯು ಗಂಡಸಾಗಿರಲಿ ಇಲ್ಲವೇ ಹೆಂಗಸಾಗಿರಲಿ ಅವರ ಮಯ್-ಮನದಲ್ಲಿ ತುಡಿಯುವ ಆಸೆಗಳೇ ಕಾರಣವೆಂಬ ವಾಸ್ತವವನ್ನು ಅಲ್ಲಮನು ಹೇಳುವುದರ ಜತೆಗೆ, ಗಂಡು ತಾನು ಮಾಡುವ ಕೆಟ್ಟ ಕೆಲಸಗಳಿಗೆ ಹೆಣ್ಣು, ಮಣ್ಣು, ಹೊನ್ನುಗಳ ಮೇಲೆ ಹೊರಿಸುತ್ತಿದ್ದ ಆರೋಪವನ್ನು ಅಲ್ಲಗಳೆದಿದ್ದಾನೆ.

(ಹೊನ್ನು=ಚಿನ್ನ/ಸಂಪತ್ತು/ಸಿರಿಸಂಪದ; ಮಾಯೆ+ಎಂಬರು; ಮಾಯೆ=ಒಲವು ನಲಿವನ್ನು ಉಂಟುಮಾಡುವ /ಮಯ್‌ಮನಗಳಲ್ಲಿ ಬಯಕೆಗಳನ್ನು ಕೆರಳಿಸಿ ಅದರತ್ತ ಸೆಳೆಯುವ ವಸ್ತು/ಜೀವಿ/ವ್ಯಕ್ತಿಗಳು; ಎಂಬರು=ಎನ್ನುವರು; ಮಾಯೆ+ಅಲ್ಲ; ಮನದ=ಮನಸ್ಸಿನ; ಮನ=ಮನಸ್ಸು ; ಮುಂದಣ=ಮುಂದೆ ಇರುವ; ಆಶೆ=ಬಯಕೆ/ ಪಡೆಯಬೇಕೆಂಬ ತುಡಿತ ; ಮನದ ಮುಂದಣ ಆಶೆ=ಯಾವುದೇ ವಸ್ತು/ಜೀವಿ/ ವ್ಯಕ್ತಿಗಳನ್ನು ಕಂಡಾಗ ಅವನ್ನು ಪಡೆದು ಮಯ್‌ಮನಗಳ ಒಳಮಿಡಿತಗಳ ಬಯಕೆಯನ್ನು ಈಡೇರಿಸಿಕೊಳ್ಳಬೇಕೆಂಬ ತವಕ/ ತಲ್ಲಣ/ಸೆಳೆತ/ತುಡಿತ ; ಕಾಣ್+ಆ; ಕಾಣು=ನೋಡು/ ಅರಿ/ತಿಳಿ; ಕಾಣಾ=ತಿಳಿದಿರುವೆಯಾ/ಕಂಡಿರುವೆಯಾ/ತಿಳಿದುನೋಡಿದಾಗ ಕಂಡುಬರುವ ವಾಸ್ತವ; ಗುಹೇಶ್ವರ=ಶಿವ /ಅಲ್ಲಮನ ಮೆಚ್ಚಿನ ದೇವರು/ಅಲ್ಲಮನ ವಚನಗಳಲ್ಲಿ ಕಂಡುಬರುವ ಅಂಕಿತನಾಮ).



## ಅಲ್ಲಮನ ವಚನದಿಂದ ಆಯ್ದ ಸಾಲುಗಳ ಓದು

ಸೂಚನೆ : ಪ್ರತಿಯೊಂದು ಸಾಲಿನ ಕೊನೆಯಲ್ಲಿ ಹಾಕಿರುವ ಎರಡು ಅಂಕಿಗಳಲ್ಲಿ ಮೊದಲನೆಯದು ವಚನದ ಅಂಕಿಯನ್ನು ಮತ್ತು ಎರಡನೆಯದು ವಚನ ಸಂಪುಟ -ಒಂದರಲ್ಲಿನ ಪುಟದ ಅಂಕಿಯನ್ನು ತಿಳಿಸುತ್ತದೆ.

1. ಅರಿವು ಅರಿವು ಎನುತಿಪ್ಪಿರಿ
ಅರಿವು ಸಾಮಾನ್ಯವೆ
ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ
ನಿಂದ ಹೆಜ್ಜೆಯನರಿಯಬಾರದು. (475–175)

ಅರಿ=ತಿಳಿ/ಕಲಿ; ಅರಿವು=ತಿಳುವಳಿಕೆ/ವಿವೇಕ/ಯಾವುದು ಸರಿ–ಯಾವುದು ತಪ್ಪು/ಯಾವುದು ನಿಸರ್ಗ ಸಹಜವಾದುದು–ಯಾವುದು ಮಾನವ ನಿರ್ಮಿತ ಎಂಬ ತಿಳುವಳಿಕೆ; ಎನುತ್ತ+ಇಪ್ಪಿರಿ; ಎನ್ನುತ್ತ=ಎಂದು ಹೇಳುತ್ತ; ಇಪ್ಪಿರಿ=ಇರುವಿರಿ/ಇದ್ದೀರಿ; ಸಾಮಾನ್ಯ=ಎಲ್ಲಾ ಕಡೆ/ಎಲ್ಲಾ ಕಾಲದಲ್ಲಿ ಇರುವಂತಹುದು; ಸಾಮಾನ್ಯವೇ=ಸಾಮಾನ್ಯವಾದುದಲ್ಲ ಅಂದರೆ ಹೆಚ್ಚಿನದಾಗಿ ಏನನ್ನೋ ಒಳಗೊಂಡಿರುವುದು;

ಅರಿವು ಅರಿವು ಎನುತಿಪ್ಪಿರಿ ಅರಿವು ಸಾಮಾನ್ಯವೆ=ಅರಿವನ್ನು ಪಡೆಯುವುದಾಗಲಿ ಇಲ್ಲವೇ ಅರಿವು ಯಾವುದು ಎಂಬುದನ್ನು ಸರಿಯಾಗಿ ತಿಳಿಯುವುದಾಗಲಿ ಸಾಮಾನ್ಯವಾದ ಕೆಲಸವಲ್ಲ.

**ಉದಾಹರಣೆ: ಜಗತ್ತಿನಲ್ಲಿರುವ ಮಾನವ ಸಮುದಾಯವನ್ನು ವಿಂಗಡಿಸಿರುವ ಬೇರೆ ಬೇರೆ ಹೆಸರಿನ ಮತಗಳು ಮತ್ತು ನೂರೆಂಟು ಬಗೆಯ ಜಾತಿಗಳು ನಿಸರ್ಗ ಸಹಜವಲ್ಲ. ಇವು ಮಾನವರು ಕಟ್ಟಿಕೊಂಡಿರುವ ಸಾಮಾಜಿಕ ಒಕ್ಕೂಟಗಳು ಎಂಬ ವಾಸ್ತವವನ್ನು ಅರಿಯಬೇಕಾದರೆ ಜನ ಸಮುದಾಯಗಳ ಸಾಮಾಜಿಕ ಚರಿತ್ರೆಯನ್ನು ತಿಳಿಯಬೇಕಾಗುತ್ತದೆ. ಜಾತಿ, ಮತ, ದೇವರುಗಳು ಜನ ಸಮುದಾಯಗಳನ್ನು ಒಂದುಗೂಡಿಸುವುದರ ಬದಲು ಪರಸ್ಪರ ಅನುಮಾನ, ಅಪನಂಬಿಕೆ, ಅಸೂಯೆ ಮತ್ತು ಹಗೆತನದ ನಡೆನುಡಿಗಳಿಗೆ ಪ್ರೇರಣೆಯಾಗಿವೆ ಎಂಬ ವಾಸ್ತವವನ್ನು ಮನದಟ್ಟು ಮಾಡಿಕೊಳ್ಳಬೇಕಾದರೆ, ನಿಸರ್ಗ ಮತ್ತು ಮಾನವ ಕೇಂದ್ರಿತ ನೆಲೆಯಲ್ಲಿ ವ್ಯಕ್ತಿಯು ತನ್ನ ಮತ್ತು ಇತರರ ಬದುಕನ್ನು ನೋಡಬೇಕು.**

ಹಿಂದಣ=ಹಿಂಬದಿಯಲ್ಲಿರುವ/ಹಿಂದುಗಡೆಯಲ್ಲಿರುವ; ಹೆಜ್ಜೆ=ನಡೆದಾಗ ಪಾದವನ್ನು ಊರಿದ/ಇಟ್ಟ ಜಾಗದ ಗುರುತು; ನೋಡು=ಕಾಣು/ತಿಳಿ/ಅರಿ; ಕಂಡ+ಅಲ್ಲದೆ;

ನೋಡಿ ಕಂಡಲ್ಲದೆ=ಚೆನ್ನಾಗಿ ನೋಡಿ ಸರಿಯಾಗಿ ತಿಳಿದುಕೊಳ್ಳದ ಹೊರತು; ನಿಂದ=ಈಗ ನಿಂತಿರುವ; ಹೆಜ್ಜೆ+ಅನ್+ಅರಿಯುಬಾರದು; ಅನ್=ಅನ್ನು; ಅರಿಯಬಾರದು=ತಿಳಿದುಕೊಳ್ಳಲಾಗುವುದಿಲ್ಲ/ಅರಿತುಕೊಳ್ಳಲು ಆಗುವುದಿಲ್ಲ;

**ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯನರಿಯಬಾರದು=ಈ ನುಡಿಗಳು ಒಂದು ರೂಪಕವಾಗಿ ಬಳಕೆಯಾಗಿವೆ. ಈಗ ನಾವು ಬಾಳುತ್ತಿರುವ ಸಮಾಜದಲ್ಲಿ ಯಾವುದು ಸರಿ–ಯಾವುದು ತಪ್ಪು; ಯಾವ ಬಗೆಯ ನಡೆನುಡಿಗಳು ಜನರಿಗೆ ಒಳಿತನ್ನು**

ಉಂಟುಮಾಡುತ್ತವೆ ಇಲ್ಲವೇ ಕೇಡನ್ನು ಬಗೆಯುತ್ತವೆ ಎಂಬುದನ್ನು ವ್ಯಕ್ತಿಯು ಮೊದಲು ತಿಳಿದುಕೊಳ್ಳಬೇಕು. ಈ ಬಗೆಯ ಅರಿವನ್ನು ಪಡೆದಾಗ ಮಾತ್ರ ಒಟ್ಟು ಜನಸಮುದಾಯದ ನೆಮ್ಮದಿಯ ಬದುಕಿಗೆ ಹಾನಿಯನ್ನುಂಟುಮಾಡುವ ಸಂಪ್ರದಾಯಗಳನ್ನು ಮತ್ತು ಆಚರಣೆಗಳನ್ನು ತ್ಯಜಿಸಿ, ಒಳ್ಳೆಯ ನಡೆನುಡಿಗಳನ್ನು ಅಳವಡಿಸಿಕೊಂಡು ಬಾಳಬೇಕು ಎಂಬುದು ಮನದಟ್ಟಾಗುತ್ತದೆ.



2. ಅರಿವ ಬಲ್ಲೆನೆಂದು
ಬಿರುನುಡಿಯ ನುಡಿವರೆ. (829–211)

ಅರಿವ=ಅರಿವನ್ನು/ತಿಳುವಳಿಕೆಯನ್ನು; ಬಲ್ಲೆನ್+ಎಂದು; ಬಲ್ಲ=ತಿಳಿದ/ಅರಿತ; ಬಲ್ಲೆನ್=ತಿಳಿದಿದ್ದೇನೆ/ಅರಿತಿದ್ದೇನೆ/ಕರಗತ ಮಾಡಿಕೊಂಡಿದ್ದೇನೆ; ಎಂದು=ಅಂದುಕೊಂಡು;

ಬಿರು=ಒರಟು/ಮೊನಚು/ಜೋರು/ಕಟು; ನುಡಿ=ಮಾತು/ಸೊಲ್ಲು; ಬಿರುನುಡಿ= ಕೇಳಿದವರ ಮನವನ್ನು ನೋಯಿಸುವಂತಹ ಮಾತು/ಇತರರ ನಡೆನುಡಿಗಳನ್ನು ಅಲ್ಲಗಳೆದು ಹಂಗಿಸುವಂತಹ ಒರಟು ಮಾತು; ನುಡಿವರೆ=ಮಾತನಾಡುವುದು ಸರಿಯೇ. ಅಂದರೆ ಆ ರೀತಿ ಮಾತನಾಡುವುದು ಸರಿಯಲ್ಲ;

ವ್ಯಕ್ತಿಯು ತಾನೊಬ್ಬನೇ ಎಲ್ಲವನ್ನೂ ತಿಳಿದವನು ಎಂಬ ಅಹಂಕಾರದಿಂದ ಮೆರೆಯುತ್ತ ಇತರರನ್ನು ಕಡೆಗಣಿಸುವಂತಹ ಸೊಕ್ಕಿನ ನುಡಿಗಳನ್ನಾಡುವುದು ಸರಿಯಲ್ಲ.



3 ಆವ ವೇಷವಾದಡೇನು
ತಾಮಸಧಾರಿಗಳು
ಕಾಮ ಕ್ರೋಧ ಲೋಭ ಬಿಡದ
ನಾನಾ ವಿಧದ ಡಂಭಕರು. (510/178)

ಆವ=ಯಾವ/ಯಾವುದೇ ಬಗೆಯ; ವೇಷ+ಆದಡೆ+ಏನು; ವೇಷ=ಉಡುಗೆ ತೊಡುಗೆ/ಸೋಗು/ತೋರಿಕೆಯ ರೂಪ; ಆದಡೆ=ಆದರೆ; ಏನು=ಯಾವುದು;

ತಾಮಸ=ಕತ್ತಲೆ/ಜಡತೆ/ನೀಚತನ/ಕೆಟ್ಟತನ; ಧಾರಿ=ಹೊಂದಿರುವವನು; ತಾಮಸಧಾರಿ=ಕೆಟ್ಟ ನಡೆನುಡಿಗಳಿಂದ ಕೂಡಿದವನು;

ಕಾಮ=ಗಂಡು ಹೆಣ್ಣಿನ ನಡುವಣ ದೇಹದ ನಂಟಿನ ಬಯಕೆ/ಇಚ್ಛೆ; ಕ್ರೋಧ=ಕೋಪ/ಸಿಟ್ಟು/ಆಕ್ರೋಶ; ಲೋಭ=ಜಿಪುಣತನ/ಅತಿಯಾಸೆ/ದುರಾಸೆ; ಬಿಡು=ತೊರೆ/ತ್ಯಜಿಸು; ಬಿಡದ=ತೊರೆಯದ/ತ್ಯಜಿಸದ; ನಾನಾ=ಅನೇಕ/ಹಲವು; ವಿಧ=ರೀತಿ/ಬಗೆ; ಡಂಭಕ=ಮೋಸಗಾರ/ವಂಚಕ;

'ಆವ ವೇಷವಾದಡೇನು=ಯಾವ ಬಗೆಯ ಉಡುಗೆ ತೊಡುಗೆಯನ್ನು ತೊಟ್ಟಿದ್ದರೆ ಏನು ತಾನೆ ಪ್ರಯೋಜನ' –ಈ ನುಡಿಗಳು ಒಂದು ರೂಪಕವಾಗಿ ಬಳಕೆಯಾಗಿವೆ. 'ಉಡುಗೆ ತೊಡುಗೆ' ಎಂಬುದು ವ್ಯಕ್ತಿಯು ತಳೆದಿರುವ ಸಾಮಾಜಿಕ ಪಾತ್ರಕ್ಕೆ ಸಂಕೇತವಾಗಿದೆ. 'ಸಾಮಾಜಿಕ ಪಾತ್ರ' ಎಂದರೆ ವ್ಯಕ್ತಿಯು ಹೊಂದಿರುವ ಹುದ್ದೆ, ಹೊಣೆಗಾರಿಕೆ ಮತ್ತು ಮಾಡಬೇಕಾದ ಕೆಲಸ.

ಜನಸಮುದಾಯಕ್ಕೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುತ್ತೇವೆ ಎಂದು ಹೇಳಿಕೊಂಡು ರಾಜಕೀಯ ರಂಗದಲ್ಲಿ ಮುಂದಾಳುಗಳ ಸೋಗಿನಲ್ಲಿ ಬರುತ್ತಾರೆ; ಸತ್ಯ ಮತ್ತು ನೀತಿಯನ್ನು ಜನರಿಗೆ ತಿಳಿಯ ಹೇಳಿ ಸಮಾಜವನ್ನು ಸರಿಯಾದ ದಾರಿಯಲ್ಲಿ ಕರೆದೊಯ್ಯುತ್ತೇವೆ ಎಂದು ಕಾವಿಯನ್ನು ತೊಟ್ಟು ಗುರುಗಳಾಗಿ ಇಲ್ಲವೇ ದೇವಮಾನವರ ರೂಪಿನಲ್ಲಿ ಕಾಣಿಸಿಕೊಳ್ಳುತ್ತಾರೆ. ಆದರೆ ಇವರಲ್ಲಿ ಬಹುತೇಕ ಮಂದಿ ಎಲ್ಲಾ ಬಗೆಯ ಕೆಟ್ಟ ಗುಣಗಳನ್ನು ಹೊಂದಿದವರಾಗಿದ್ದು, ಜನರನ್ನು ವಂಚಿಸುವ ಕಲೆಯಲ್ಲಿ ಪರಿಣತರಾಗಿರುತ್ತಾರೆ.

ಜನಸಮುದಾಯದ ಹಿತವನ್ನು ಕಾಪಾಡುವ ಮತ್ತು ಸಮಾಜವನ್ನು ಮುನ್ನಡೆಸುವ ಜವಾಬ್ದಾರಿಯನ್ನು ಹೊತ್ತಿರುವ ವ್ಯಕ್ತಿಗಳು, ಅವರು ಯಾರೇ ಆಗಿರಲಿ ಕೆಟ್ಟ ನಡೆನುಡಿಗಳಿಂದ ಕೂಡಿದ್ದರೆ, ಅಂತಹ ವ್ಯಕ್ತಿಗಳಿಂದ ಸಹ ಮಾನವರಿಗಾಗಲಿ ಮತ್ತು ಸಮಾಜಕ್ಕಾಗಲಿ ಯಾವೊಂದು ಪ್ರಯೋಜನವೂ ಇಲ್ಲ ಎಂಬುದನ್ನು ಈ ನುಡಿಗಳು ಸೂಚಿಸುತ್ತವೆ.



**4. ಇಲ್ಲದ ಶಂಕೆಯನು ಉಂಟೆಂದು ಭಾವಿಸಿದಡೆ**
**ಅದು ಕಣ್ಣ ಮುಂದೆ ರೂಪಾಗಿ ಕಾಡುತ್ತಿಪ್ಪುದು. (936–224)**

ಇಲ್ಲದ=ವಾಸ್ತವದಲ್ಲಿ ಕಂಡು ಬರದ; ಶಂಕೆ=ಅಪಾಯ/ವಿಪತ್ತು/ಹಾನಿ/ಕೇಡಾಗಬಹುದೆಂದು ಮನದಲ್ಲಿ ಹೆದರಿಕೆಯಿಂದ ತಲ್ಲಣಿಸುವುದು; ಉಂಟು+ಎಂದು; ಉಂಟು=ಇದೆ/ಇರುವುದು; ಭಾವಿಸು=ತಿಳಿ/ಆಲೋಚಿಸು; ಭಾವಿಸಿದಡೆ=ತಿಳಿದುಕೊಂಡರೆ/ಕಲ್ಪಿಸಿಕೊಂಡರೆ;

ರೂಪ+ಆಗಿ; ರೂಪ=ಆಕಾರ; ಕಾಡುತ್ತ+ಇಪ್ಪುದು; ಕಾಡು=ಪೀಡಿಸು/ಹಿಂಸಿಸು; ಇಪ್ಪುದು=ಇರುವುದು; ರೂಪಾಗಿ ಕಾಡುತ್ತಿಪ್ಪುದು=ಮನದಲ್ಲಿ ಉಂಟಾದ ಹೆದರಿಕೆಯೇ ಒಂದು ರೂಪನ್ನು ಪಡೆದು, ನಿಜವಾಗಿ ಎದುರಿಗೆ ಬಂದಂತೆ ಆಗುತ್ತದೆ;

ಜೀವನದಲ್ಲಿ ತೊಡಕು ಉಂಟಾದಾಗ ಮುಂದೇನಾಗುವುದೋ ಎಂಬ ಹೆದರಿಕೆಯಿಂದ ವ್ಯಕ್ತಿಯು ತನ್ನ ಮನದಲ್ಲಿ ನಾನಾ ಬಗೆಯ ಕಲ್ಪನೆಗಳನ್ನು ಮಾಡಿಕೊಳ್ಳತೊಡಗಿದರೆ, ಅದು ನಿಜವಾಯಿತೇನೋ ಎಂಬಂತೆ ಕೆಟ್ಟದ್ದೇ ಕಣ್ಣ ಮುಂದೆ ಸುಳಿದಂತಾಗುತ್ತದೆ.

ಉದಾಹರಣೆ: ಕತ್ತಲೆಯಿಂದ ತುಂಬಿರುವ ದಾರಿಯಲ್ಲಿ ವ್ಯಕ್ತಿಯು ಒಬ್ಬಂಟಿಯಾಗಿ ನಡೆದುಕೊಂಡು ಹೋಗುತ್ತಿರುವಾಗ ವಾಸ್ತವದಲ್ಲಿ ಇಲ್ಲದ ದೆವ್ವವನ್ನು ನೆನೆಸಿಕೊಂಡು ಅಂಜತೊಡಗಿದರೆ, ದಾರಿಯ ಇಕ್ಕೆಲದಲ್ಲಿರುವ ಬೇಲಿಯಲ್ಲಿನ ಮರಗಿಡಗಳ ಕೊಂಬೆರೆಂಬೆಗಳೇ ದೆವ್ವದ ಆಕಾರದಲ್ಲಿ ಗೋಚರಿಸಿ ಕಾಡತೊಡಗುತ್ತವೆ;

ಜೀವನದಲ್ಲಿ ತೊಡಕು ಉಂಟಾದಾಗ ಗಟ್ಟಿ ಮನಸ್ಸಿನಿಂದ ಮತ್ತು ಒಳ್ಳೆಯದಾಗುತ್ತದೆ ಎಂಬ ನಂಬಿಕೆಯಿಂದ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಿಸಬೇಕೇ ಹೊರತು, ಇಲ್ಲಸಲ್ಲದ ಹೆದರಿಕೆಯಿಂದ ತತ್ತರಿಸಬಾರದು.



5. ಎಲೆ ಮನವೆ
ನಿನ್ನ ನಿಜವನರಿಯಬಲ್ಲಡೆ
ಅದೇ ಬ್ರಹ್ಮಜ್ಞಾನ
ಅದೇ ಕೇವಲ ಮುಕ್ತಿ. (986/229)

ಎಲೆ=ಏನನ್ನಾದರೂ ಕುರಿತು ಇಲ್ಲವೇ ಯಾರನ್ನಾದರೂ ಉದ್ದೇಶಿಸಿ ಮಾತನಾಡುವಾಗ ಬಳಸುವ ಪದ; ಮನ=ಮನಸ್ಸು/ಚಿತ್ತ;

ನಿಜ+ಅನ್+ಅರಿಯ+ಬಲ್ಲಡೆ; ನಿಜ=ದಿಟ/ಸತ್ಯ/ವಾಸ್ತವ; ಅರಿ=ತಿಳಿ/ಕಲಿ; ಅರಿಯಬಲ್ಲಡೆ=ತಿಳಿದುಕೊಳ್ಳುವೆಯಾದರೆ/ಅರಿತುಕೊಳ್ಳುವಂತಾದರೆ;

ಅದೇ=ಅಂತಹ ತಿಳುವಳಿಕೆಯೇ; ಬ್ರಹ್ಮ=ಇಹಲೋಕದಲ್ಲಿನ ಸಕಲ ಜೀವಿಗಳ ಹುಟ್ಟಿಗೆ ಕಾರಣನಾದ ಪರಮಾತ್ಮ/ದೇವರು; ಜ್ಞಾನ=ಅರಿವು/ತಿಳುವಳಿಕೆ;

'ಬ್ರಹ್ಮಜ್ಞಾನ' ಎಂದರೆ ದೇವರ ಅವತಾರದ ಹಿನ್ನೆಲೆ, ದೇವರು ಮಾಡುವ ಪವಾಡ ಮತ್ತು ದೇವರ ಮಹಿಮೆಯನ್ನು ಬಣ್ಣಿಸುವ ಸಂಗತಿಗಳನ್ನು ಮನನ ಮಾಡಿಕೊಂಡು, ಜಗತ್ತಿನ ಎಲ್ಲ ಆಗುಹೋಗುಗಳಿಗೆ ದೇವರೇ ಕಾರಣನೆಂಬ ಅರಿವನ್ನು ಪಡೆಯುವುದು;

ಕೇವಲ=ಅಪ್ಪಟ/ಪರಿಪೂರ್ಣ; ಮುಕ್ತಿ=ಹುಟ್ಟು ಸಾವಿನ ತಿರುಗುಣಿಯಿಂದ ಜೀವ ಇಲ್ಲವೇ ಆತ್ಮ ಬಿಡುಗಡೆಯನ್ನು ಹೊಂದುವುದು. ಮುಕ್ತಿಯನ್ನು ಪಡೆದ ಜೀವಿಯು ಮತ್ತೆ ಯಾವುದೇ ಹುಟ್ಟನ್ನು ಪಡೆದು ಈ ಲೋಕಕ್ಕೆ ಬರುವುದಿಲ್ಲವೆಂಬ ನಂಬಿಕೆಯು ಜನಮನದಲ್ಲಿದೆ.

**ಶಿವಶರಣಶರಣೆಯರು ದೇವರ ಅವತಾರ, ಪವಾಡ ಮತ್ತು ಮಹಿಮೆಯನ್ನು ಬಣ್ಣಿಸುವ ಸಂಗತಿಗಳನ್ನು ನಿರಾಕರಿಸಿದ್ದರು. ಪುನರ್ ಜನ್ಮ, ಕರ್ಮ ಸಿದ್ಧಾಂತ ಮತ್ತು ವಿಧಿ ಬರಹದಿಂದ ಇಹಲೋಕದಲ್ಲಿ ಜೀವಿಗಳ ಬದುಕು ನಡೆಯುತ್ತಿದೆಯೆಂಬ ತತ್ವವನ್ನು ಅಲ್ಲಗಳೆದು, ಪ್ರತಿಯೊಬ್ಬ ವ್ಯಕ್ತಿಗೂ 'ನಿನ್ನ ನಿಜವನರಿಯಬಲ್ಲಡೆ' ಎಂದು ಕರೆಯನ್ನು ನೀಡಿದ್ದಾರೆ;**

**ವ್ಯಕ್ತಿಯು ತನ್ನ ನಿಜವನ್ನು ಅರಿಯುವುದೆಂದರೆ "ತನ್ನನ್ನು ಒಳಗೊಂಡಂತೆ ಎಲ್ಲ ಮಾನವರ ಬದುಕಿನ ಆಗುಹೋಗುಗಳಿಗೆ ನಿಸರ್ಗದಲ್ಲಿ ನಡೆಯುವ ಸಂಗತಿಗಳು ಮತ್ತು ವ್ಯಕ್ತಿಗಳ ಒಳಿತು ಕೆಡುಕಿನ ನಡೆನುಡಿಗಳೇ ಕಾರಣವೆಂಬ ವಾಸ್ತವವನ್ನು ಅರಿತುಕೊಳ್ಳುವುದು". ಈ ಬಗೆಯ ಅರಿವನ್ನು ವ್ಯಕ್ತಿಯು ಪಡೆದಾಗ, ತನ್ನ ಉಳಿವು ಅಳಿವಿಗೆ ಕಾರಣವಾಗಿರುವ ನಿಸರ್ಗವನ್ನು ಜೋಪಾನವಾಗಿ ಕಾಪಾಡಿಕೊಳ್ಳುವ ಮತ್ತು ತನ್ನ ಒಳಿತಿನ ಜತೆಜತೆಗೆ ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಾಳುವ ಎಚ್ಚರವನ್ನು ವ್ಯಕ್ತಿಯು**

ಹೊಂದುತ್ತಾನೆ. ಇಂತಹ ಎಚ್ಚರದಿಂದ ಬಾಳಲು ತೊಡಗಿದಾಗ ಮಾನವರು ಹಸಿವು, ಬಡತನ ಮತ್ತು ಸಂಕಟಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ.

ಅಲ್ಲಮನು ವ್ಯಕ್ತಿಯ ಒಳ್ಳೆಯ ನಡೆನುಡಿಗಳನ್ನು 'ಬ್ರಹ್ಮಜ್ಞಾನ' ಎಂದು ಮತ್ತು ತಪ್ಪು ತಿಳುವಳಿಕೆಯಿಂದ ಮಾನಸಿಕವಾಗಿ ಬಿಡುಗಡೆಯನ್ನು ಪಡೆಯುವುದನ್ನು 'ಮುಕ್ತಿ' ಎಂದು ಕರೆದಿದ್ದಾನೆ.



6. ಎಲ್ಲವನೂ ಸಾಧಿಸ ಹೋದಡೆ

ಏನೂ ಇಲ್ಲದಂತಾಯಿತ್ತು. (456–173)

ಎಲ್ಲ=ಸಕಲ/ಸಮಗ್ರ; ಎಲ್ಲವನೂ=ಯಾವುದೊಂದನ್ನು ಬಿಡದಂತೆ ಸಕಲವನ್ನು; ಸಾಧಿಸು=ಪಡೆ/ಹೊಂದು/ದೊರಕಿಸಿಕೊಳ್ಳುವುದು/ವಶಪಡಿಸಿಕೊಳ್ಳುವುದು; ಹೋದಡೆ=ಹೋದರೆ; ಸಾಧಿಸ ಹೋದಡೆ=ಪಡೆದುಕೊಳ್ಳಲು ಪ್ರಯತ್ನಿಸಿದರೆ/ತನ್ನದನ್ನಾಗಿಸಿಕೊಳ್ಳಲು ಮುನ್ನುಗ್ಗಿದ್ದರೆ/ಹಂಬಲಿಸಿದರೆ; ಏನು=ಯಾವುದು; ಇಲ್ಲದ+ಅಂತೆ+ಆಯಿತ್ತು; ಅಂತೆ=ಹಾಗೆ/ಆ ಬಗೆ/ಆ ರೀತಿ;

ಏನೂ ಇಲ್ಲದಂತಾಯಿತು=ಒಂದಾದರೂ ದೊರಕದಂತಾಯಿತು/ಯಾವುದು ಸಿಗಲಿಲ್ಲ;

ವ್ಯಕ್ತಿಯು ಯಾವುದೇ ಒಂದು ಕೆಲಸವನ್ನು ಕಯ್ಗೊಂಡಾಗ, ಮೊದಲು ಅದನ್ನು ಅಚ್ಚುಕಟ್ಟಾಗಿ ಮಾಡಿ ಮುಗಿಸಿದ ನಂತರ ಮತ್ತೊಂದನ್ನು ಕಯ್ಗೊಳ್ಳಬೇಕು. ಒಂದೇ ಬಾರಿಗೆ ದೊಡ್ಡ ಸಂಪತ್ತನ್ನು ಇಲ್ಲವೇ ಹೆಸರನ್ನು ಪಡೆದುಕೊಳ್ಳಬೇಕೆಂಬ ಹಂಬಲದಿಂದ ಅನೇಕ ಕೆಲಸಗಳಲ್ಲಿ ತೊಡಗಿದರೆ, ಯಾವೊಂದು ಕೆಲಸವನ್ನು ಗಮನವಿಟ್ಟು ಮಾಡಲಾಗದೆ ಮತ್ತು ಕಯ್ಗೊಂಡಿದ್ದನ್ನು ಪರಿಪೂರ್ಣವಾಗಿ ಮಾಡಿ ಗುರಿ ಮುಟ್ಟಲಾಗದೆ, ತನ್ನ ದುಡಿಮೆಯ ಶ್ರಮ, ಕಾಲ ಮತ್ತು ತನ್ನಲ್ಲಿದ್ದ ಸಂಪತ್ತನ್ನೂ ಕಳೆದುಕೊಳ್ಳುತ್ತಾನೆ ಎಂಬ ಎಚ್ಚರಿಕೆಯನ್ನು ಈ ನುಡಿಗಳು ಸೂಚಿಸುತ್ತಿವೆ.



7. ಏನೆಂದರಿಯರು
ಎಂತೆಂದರಿಯರು
ಅರಿವನರಿದೆವೆಂಬರು.(345–165)

ಏನ್+ಎಂದು+ಅರಿಯರು; ಏನು=ಯಾವುದೇ ಒಂದು ವಸ್ತು, ಜೀವಿ, ಸಂಗತಿಯ ಬಗೆಗಿನ ವಾಸ್ತವ ಯಾವುದು ಎಂಬುದನ್ನು; ಅರಿಯರು=ತಿಳಿಯರು; ಎಂತು+ಎಂದು+ಅರಿಯರು; ಎಂತು=ಯಾವ ರೀತಿ/ಬಗೆ/ಕ್ರಮ;

ಅರಿವು+ಅನ್+ಅರಿದೆವು+ಎಂಬರು; ಅರಿವನ್=ತಿಳುವಳಿಕೆಯನ್ನು/ ವಿವೇಕವನ್ನು; ಅರಿದೆವು=ತಿಳಿದುಕೊಂಡಿದ್ದೇವೆ; ಎಂಬರು=ಎಂದು ಹೇಳುತ್ತಾರೆ; ಅರಿವನರಿದೆವೆಂಬರು=ನಮಗೆ ಎಲ್ಲವೂ ಚೆನ್ನಾಗಿ ತಿಳಿದಿದೆ ಎನ್ನುತ್ತಾರೆ;

ಅರಿವನ್ನು ಪಡೆಯಬೇಕಾದರೆ ಯಾವುದೇ ಒಂದು ಸಂಗತಿಯನ್ನು ಕಾರ್ಯ ಕಾರಣಗಳ ನೆಲೆಯಲ್ಲಿ ಒರೆಹಚ್ಚಿ ನೋಡಬೇಕು. ಮಾನವರ ಬದುಕಿನಲ್ಲಿ ನಡೆಯುವಂತಹ ಎಲ್ಲಾ ಸಂಗತಿಗಳಿಗೂ ನಿಸರ್ಗದಲ್ಲಿ ನಡೆಯುವ ಕ್ರಿಯೆಗಳು ಮತ್ತು ಮಾನವರ ನಡೆನುಡಿಗಳಿಂದ ಉಂಟಾಗುವ ಪರಿಣಾಮಗಳು ಕಾರಣವಾಗಿರುತ್ತವೆ.

ಆದ್ದರಿಂದ ಯಾವುದೇ ಒಂದು ಸಂಗತಿಯ ವಾಸ್ತವವನ್ನು ಅರಿತುಕೊಳ್ಳುವಾಗ 'ಅದು ಏನು' – 'ಅದು ಯಾವ ರೀತಿ ಉಂಟಾಯಿತು?' ಎಂಬುದನ್ನು ಪರಿಶೀಲನೆ ಮಾಡಬೇಕು. ಇಲ್ಲದಿದ್ದರೆ ಅದು ಹಿಂದಿನಿಂದಲೂ ಆಚರಣೆಯಲ್ಲಿ ಬಂದಿರುವ ಸಂಪ್ರದಾಯದ ಕುರುಡು ನಂಬಿಕೆಯಾಗುತ್ತದೆಯೇ ಹೊರತು ಅರಿವು ಎನಿಸಿಕೊಳ್ಳುವುದಿಲ್ಲ.



8. ಏನೆಂದರಿಯರು
ಎಂತೆಂದರಿಯರು
ಬರುಮಾತಿನ ಬೊಮ್ಮವನಾಡುತ್ತಿಪ್ಪರು.(485–176)

ಏನ್+ಎಂದು+ಅರಿಯರು; ಅರಿಯರು=ತಿಳಿಯರು; ಎಂತು+ಎಂದು +ಅರಿಯರು; ಎಂತು=ಯಾವ ರೀತಿ/ಬಗೆ/ಕ್ರಮ;

ಏನೆಂದರಿಯರು ಎಂತೆಂದರಿಯರು= ಅರಿವನ್ನು ಪಡೆಯಬೇಕಾದರೆ ಯಾವುದೇ ಒಂದು ಸಂಗತಿಯನ್ನು ಕಾರ್ಯ ಕಾರಣಗಳ ನೆಲೆಯಲ್ಲಿ ಒರೆಹಚ್ಚಿ ನೋಡಬೇಕು. ಮಾನವರ ಬದುಕಿನಲ್ಲಿ ನಡೆಯುವಂತಹ ಎಲ್ಲಾ ಸಂಗತಿಗಳಿಗೂ ನಿಸರ್ಗದಲ್ಲಿ ನಡೆಯುವ ಕ್ರಿಯೆಗಳು ಮತ್ತು ಮಾನವರ ನಡೆನುಡಿಗಳಿಂದ ಉಂಟಾಗುವ ಪರಿಣಾಮಗಳು ಕಾರಣವಾಗಿರುತ್ತವೆ.

ಆದ್ದರಿಂದ ಯಾವುದೇ ಒಂದು ಸಂಗತಿಯನ್ನು ಕುರಿತು ಚಿಂತಿಸುವಾಗ/ ಮಾತನಾಡುವಾಗ 'ಅದು ಏನು' – 'ಅದು ಯಾವ ರೀತಿ ಉಂಟಾಯಿತು?' – ಎಂಬುದನ್ನು ಪರಿಶೀಲನೆ ಮಾಡದಿದ್ದರೆ, ಆಗ ಅದರ ಬಗ್ಗೆ ಸರಿಯಾದ ಮತ್ತು ಸಮಗ್ರವಾದ ತಿಳುವಳಿಕೆಯು ದೊರೆಯುವುದಿಲ್ಲ.

ಬರು=ಬರಿದು/ಏನೂ ಇಲ್ಲದಿರುವುದು/ಪೊಳ್ಳು; ಮಾತು=ನುಡಿ/ಸೊಲ್ಲು ; ಬರುಮಾತು=ಪೊಳ್ಳು ಮಾತು/ಜೀವನದ ವ್ಯವಹಾರದಲ್ಲಿ ಆಚರಿಸಿ ತೋರಿಸದ ಮಾತು/ ಏನೊಂದು ಬಗೆಯ ಕೆಲಸವನ್ನು ಮಾಡದೆ, ಕೇವಲ ಮಾತಿನಲ್ಲೇ ತೊಡಗಿರುವುದು;

ಬೊಮ್ಮ+ಅನ್+ಆಡುತ್ತ+ಇಪ್ಪರು; ಬ್ರಹ್ಮ>ಬೊಮ್ಮ; ಬೊಮ್ಮ=ಜೀವಿಗಳ ಹುಟ್ಟಿಗೆ ಕಾರಣನಾದ ದೇವ/ಬ್ರಹ್ಮ ; ಅನ್=ಅನ್ನು; ಆಡುತ್ತ=ನುಡಿಯುತ್ತ/ಹೇಳುತ್ತ; ಇಪ್ಪರು=ಇರುವರು/ಇದ್ದಾರೆ;

ಬರುಮಾತಿನ ಬೊಮ್ಮ=ಜಗತ್ತಿನಲ್ಲಿ ಎಲ್ಲಾ ಜೀವರಾಶಿಗಳ ಹುಟ್ಟು, ಬೆಳವಣಿಗೆ ಮತ್ತು ಸಾವಿಗೆ ಕಾರಣನಾದವನು ಬ್ರಹ್ಮನೆಂಬ ದೇವ. ಆದ್ದರಿಂದ ಮಾನವರ ನಡೆನುಡಿಗಳೆಲ್ಲವೂ ಬ್ರಹ್ಮದೇವನ ಆಣತಿಯಂತೆ ನಡೆಯುತ್ತವೆ. ಮಾನವ ಸಮುದಾಯದ ನೋವು ನಲಿವಿಗೆ ಮತ್ತು ಏಳು ಬೀಳುಗಳಿಗೆ ಹಣೆ ಬರಹ ಮತ್ತು ಹಿಂದಿನ ಜನ್ಮದ ಪಾಪ ಪುಣ್ಯಗಳೇ ಕಾರಣವೆಂಬ ನಂಬಿಕೆಯನ್ನು ಜನಮನದಲ್ಲಿ ಬಿತ್ತುವ ನುಡಿಗಳು;

ಇಂತಹ ನುಡಿಗಳಿಂದ ಜನರ ಬದುಕಿಗೆ ಏನೊಂದು ಬಗೆಯಲ್ಲೂ ಒಳಿತಾಗುವುದಿಲ್ಲ. ಏಕೆಂದರೆ ಮಾನವ ಸಮುದಾಯದ ಹಸಿವು, ಬಡತನ ಮತ್ತು ಸಂಕಟದ ಜೀವನಕ್ಕೆ ನಿಸರ್ಗ ಹಾಗೂ ಮಾನವರ ನಡೆನುಡಿಗಳು ಹೇಗೆ ಕಾರಣವಾಗುತ್ತವೆ ಮತ್ತು ಅವನ್ನು ಪರಿಹರಿಸುವ ಹಾದಿ ಯಾವುದು ಎಂಬುದನ್ನು ತಿಳಿಯದಂತೆ ತಡೆಗಟ್ಟುತ್ತವೆ. ಮಾನವರು ತಮ್ಮ ಜೀವನದ ದುರಂತಕ್ಕೆ ಬ್ರಹ್ಮ ಇಲ್ಲವೇ ದೇವರು ಕಾರಣನೆಂಬ ನಂಬಿಕೆಗೆ ಒಳಗಾಗಿ, ತಮ್ಮ ಪಾಲಿನ ಹೊಣೆಗಾರಿಕೆಯನ್ನೇ ಮರೆಯುತ್ತಾರೆ.



## 9. ಒತ್ತಿ ಹಣ್ಣ ಮಾಡಿದಡೆ
## ಅದೆತ್ತಣ ರುಚಿಯಪ್ಪುದೋ. (646–188)

ಒತ್ತು=ಅದುಮು/ಹಿಸುಕು/ಅಮುಕು; ಹಣ್ಣು=ರಸದಿಂದ ಕೂಡಿ ಚೆನ್ನಾಗಿ ಮಾಗಿರುವ ಬೆಳೆ; ಮಾಡಿದಡೆ=ಮಾಡಿದರೆ;

**ಒತ್ತಿ ಹಣ್ಣ ಮಾಡಿದಡೆ=ಕಾಯಿಯಾಗಿರುವುದನ್ನು ಕಿತ್ತು ತಂದು, ವ್ಯಕ್ತಿಯು ತನ್ನ ಎರಡು ಅಂಗಯ್ ನಡುವೆ ಅದನ್ನು ಇಟ್ಟುಕೊಂಡು ಬಲವಾಗಿ ಅಮುಕುವುದರಿಂದ ಹುಳಿಯಾಗಿರುವ ಕಾಯಿ, ಸಿಹಿ ರಸದಿಂದ ತುಂಬಿದ ಹಣ್ಣಾಗುವುದಿಲ್ಲ. ಏಕೆಂದರೆ ಮರಗಿಡಬಳ್ಳಿಯ ಬೇರುಗಳಿಂದ ಸಾರವನ್ನು ಹೀರಿಕೊಂಡು ಕಾಯಿ ದೊಡ್ಡದಾಗುತ್ತ, ಕಾಲಕ್ರಮೇಣ ಹಣ್ಣಾದಾಗ ಮಾತ್ರ ಅದರಲ್ಲಿ ರಸ ತುಂಬುತ್ತದೆ. ಈ ರೀತಿ ಒಂದು ಕಾಯಿ ಹಣ್ಣಾಗಲು ಕಾಲ ಮತ್ತು ನಿಸರ್ಗ ಸಹಜವಾದ ಕ್ರಿಯೆಗಳು ಅಗತ್ಯ;**

ಅದು+ಎತ್ತಣ; ಅದು=ಆ ರೀತಿ ಹಿಸುಕಿದ ಕಾಯಿ; ಎತ್ತಣ=ಯಾವ ಬಗೆಯಿಂದ/ಯಾವ ರೀತಿಯಿಂದ; ರುಚಿ+ಅಪ್ಪುದೋ; ರುಚಿ= ಮಾನವರು ತಿನ್ನುವ, ಕುಡಿಯುವ ಮತ್ತು ಉಣ್ಣುವ ವಸ್ತುಗಳಲ್ಲಿ ಉಪ್ಪು, ಹುಳಿ, ಕಾರ, ಸಿಹಿ, ಕಹಿ, ಒಗರು ಎಂಬ ಆರು ಬಗೆಯ ರಸಗಳನ್ನು ರುಚಿಯೆಂದು ಕರೆಯುತ್ತಾರೆ; ಅಪ್ಪುದೋ=ಆಗುವುದೋ/ಆಗುತ್ತದೆಯೇ;

ಅದೆತ್ತಣ ರುಚಿಯಪ್ಪುದೋ=ಹೇಗೆ ತಾನೆ ರುಚಿಯಾದ ಹಣ್ಣಾಗುತ್ತದೆ; ಈ ಪ್ರಸಂಗವು ಒಂದು ರೂಪಕವಾಗಿ ಬಳಕೆಯಾಗಿದೆ.

**ಯಾವುದೇ ಒಂದು ಕೆಲಸವನ್ನು ಸರಿಯಾಗಿ ಮಾಡಬೇಕಾದರೆ, ಅದನ್ನು ಹಂತ ಹಂತವಾಗಿ ಮಾಡಬೇಕು. ಅದನ್ನು ಬಿಟ್ಟು, ಕಯ್ಗೊಂಡ ಕೂಡಲೇ ಮಾಡಿ ಮುಗಿಸಿ ಫಲವನ್ನು ಪಡೆಯಬೇಕೆಂದು ಆತುರಪಟ್ಟರೆ ಕೆಲಸವು ಹದಗೆಡುತ್ತದೆಯಲ್ಲದೆ, ಅದರಿಂದ ಯಾವ ಪ್ರಯೋಜನವೂ ದೊರೆಯುವುದಿಲ್ಲ.**



10. ಕಾಯದ ಸಂಗದ
ಜೀವ ಉಳ್ಳನ್ನಕ್ಕರ
ಎಂದೂ ಭವ ಹಿಂಗದು ಗುಹೇಶ್ವರ. (323/163)

ಕಾಯ=ಮಯ್/ದೇಹ/ಶರೀರ; ಸಂಗ=ಕೂಡುವಿಕೆ/ಹೊಂದಿಕೆ/ಸೇರಿಕೆ; ಜೀವ=ಪ್ರಾಣ/ಉಸಿರು; ಉಳ್=ಇರುವುದು; ಅನ್ನಕ್ಕರ=ವರೆಗೆ/ತನಕ;

ಕಾಯದ ಸಂಗದ ಜೀವ ಉಳ್ಳನ್ನಕ್ಕರ=ದೇಹದೊಡನೆ ಉಸಿರು ಬೆರೆತು ವ್ಯಕ್ತಿಯು ಜೀವಂತನಾಗಿರುವ ತನಕ;

ಎಂದೂ=ಯಾವಾಗಲೂ/ಸದಾಕಾಲ/ಯಾವ ಸಮಯದಲ್ಲಿಯೂ; ಭವ=ಈ ಲೋಕದಲ್ಲಿ ವ್ಯಕ್ತಿಯ ಜೀವನದಲ್ಲಿ ಉಂಟಾಗುವ ನೋವು ನಲಿವು ಮತ್ತು ಒಳಿತು ಕೆಡುಕು;

ಹಿಂಗು=ಬಿಟ್ಟುಹೋಗು/ಹೊರಟುಹೋಗು/ಇಲ್ಲವಾಗು; ಹಿಂಗದು= ಇಲ್ಲವಾಗುವುದಿಲ್ಲ; ಗುಹೇಶ್ವರ=ಶಿವ/ಈಶ್ವರ/ಅಲ್ಲಮನ ವಚನಗಳಲ್ಲಿ ಕಂಡುಬರುವ ಅಂಕಿತನಾಮ;

**ವ್ಯಕ್ತಿಯು ಜೀವಂತವಾಗಿರುವ ತನಕ ಅವನ ಮಯ್ ಮನದಲ್ಲಿ ಎಲ್ಲ ಬಗೆಯ ಒಳಿತು ಕೆಡುಕಿನ ಒಳಮಿಡಿತಗಳು ತುಡಿಯುತ್ತಿರುತ್ತವೆ ಮತ್ತು ಅವನ ಬದುಕಿನಲ್ಲಿ ಒಂದಲ್ಲ ಒಂದು ಬಗೆಯ ನೋವು ನಲಿವುಗಳು ಇದ್ದೇ ಇರುತ್ತವೆ. ಆದ್ದರಿಂದ ಸಾವು ಬರುವ ತನಕ ವ್ಯಕ್ತಿಯು ತನ್ನ ಮನದಲ್ಲಿ ಮೂಡುವ ಒಳಮಿಡಿತಗಳಲ್ಲಿ ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಜೀವನದ ಉಂಟಾಗುವ ಎಡರು ತೊಡರುಗಳನ್ನು ಸಮಚಿತ್ತದಿಂದ ಎದುರಿಸಿ ಬಾಳಬೇಕೆಂಬುದನ್ನು ಅರಿತುಕೊಳ್ಳಬೇಕು;**



11. **ಕಾಯವುಳ್ಳನ್ನಕ್ಕ ಶರಣರ**
**ಸಂಗದಿಂದ ಅರಿಯಬೇಕು**
**ಜೀವವುಳ್ಳನ್ನಕ್ಕ ಅರಿವಿನ**
**ಮುಖದಿಂದ ಅರಿಯಬೇಕು. (1096/239)**

ಕಾಯ+ಉಳ್+ಅನ್ನಕ್ಕ; ಕಾಯ=ದೇಹ/ಶರೀರ/ಮಯ್; ಉಳ್=ಇರು; ಅನ್ನಕ್ಕ=ವರೆಗೆ/ತನಕ; ಉಳ್ಳನ್ನಕ್ಕ=ಇರುವ ತನಕ;

ಶರಣ=ಜೀವನದಲ್ಲಿ ಒಳ್ಳೆಯ ನಡೆನುಡಿಗಳೇ ಶಿವನೆಂದು ನಂಬಿ ನಡೆಯುವ ವ್ಯಕ್ತಿ; ಸಂಗ+ಇಂದ; ಸಂಗ=ಸಹವಾಸ/ಒಡನಾಟ/ಗೆಳೆತನ; ಅರಿ=ತಿಳಿ/ಕಲಿ; ಅರಿಯಬೇಕು=ತಿಳಿದುಕೊಳ್ಳಬೇಕು;

ಜೀವ+ಉಳ್+ಅನ್ನಕ್ಕ; ಜೀವ=ಪ್ರಾಣ/ಉಸಿರು; ಜೀವವುಳ್ಳನ್ನಕ್ಕ= ಜೀವಂತವಾಗಿರುವ ತನಕ/ಸಾವು ಬರುವ ತನಕ; ಅರಿವು=ಜೀವನದಲ್ಲಿ ಯಾವುದು ಸರಿ-ಯಾವುದು ತಪ್ಪು; ಯಾವುದು ನಿಜ-ಯಾವುದು ಸುಳ್ಳು; ಯಾವ ರೀತಿಯಲ್ಲಿ ಬಾಳಬೇಕು-ಯಾವ ರೀತಿಯಲ್ಲಿ ಬಾಳಬಾರದು ಎಂಬ ತಿಳುವಳಿಕೆ; ಮುಖ+ಇಂದ; ಮುಖ=ಮೋರೆ/ಮೊಗ; ಅರಿವಿನ ಮುಖದಿಂದ=ತಿಳುವಳಿಕೆಯನ್ನು ಪಡೆಯುವುದರ ಮೂಲಕ;

**ಶಿವಶರಣ ಶರಣೆಯರ ಜತೆಯ ಒಡನಾಟದಿಂದ ಮತ್ತು ಅವರ ಹಿತವಚನವನ್ನು ಕೇಳುವುದರ ಮೂಲಕ ವ್ಯಕ್ತಿಯು ಅರಿವನ್ನು ಪಡೆದುಕೊಂಡು, ತನ್ನ ಜೀವನದ ಕೊನೆ ಗಳಿಗೆಯ ತನಕ ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ನಡೆನುಡಿಗಳಿಂದ ಬಾಳಬೇಕು.**



12. ಕಿರಿಯರಾದಡೇನು
ಹಿರಿಯರಾದಡೇನು
ಅರಿವಿಂಗೆ ಹಿರಿದು ಕಿರಿದುಂಟೆ. (1115–240)

ಕಿರಿಯರ್+ಆದಡೆ+ಏನು; ಕಿರಿಯರ್=ವಯಸ್ಸಿನಲ್ಲಿ ಚಿಕ್ಕವರು; ಆದಡೆ=ಆದರೆ; ಏನು=ಪ್ರಶ್ನೆಯನ್ನು ಮಾಡುವಾಗ ಬಳಸುವ ಪದ/ಯಾವುದು;

ಹಿರಿಯರ್+ಆದಡೆ+ಏನು; ಹಿರಿಯರ್=ವಯಸ್ಸಿನಲ್ಲಿ ದೊಡ್ಡವರು; ಅರಿವು=ತಿಳುವಳಿಕೆ/ವಿವೇಕ; ಅರಿವಿಂಗೆ=ತಿಳುವಳಿಕೆಗೆ/ವಿವೇಕಕ್ಕೆ; ಹಿರಿದು=ದೊಡ್ಡದು/ಮಿಗಿಲಾದುದು/ಹೆಚ್ಚಾದುದು; ಕಿರಿದು+ಉಂಟೆ; ಕಿರಿದು=ಚಿಕ್ಕದು/ಮಿತಿಯುಳ್ಳದ್ದು/ಸಣ್ಣದಾದುದು; ಉಂಟೆ=ಇರುವುದೇ;

**ಅರಿವಿಂಗೆ ಹಿರಿದು ಕಿರಿದುಂಟೆ=ಅರಿವಿನಲ್ಲಿ ಚಿಕ್ಕದು ದೊಡ್ಡದು ಎಂಬ ತಾರತಮ್ಯವಾಗಲಿ ಇಲ್ಲವೇ ಮೇಲುಕೀಳು ಎಂಬುದಾಗಲಿ ಇಲ್ಲ. ಏಕೆಂದರೆ ಒಳಿತಿನ ನಡೆನುಡಿಗಳಿಗೆ ನೆರವಾಗುವ ಎಲ್ಲ ಬಗೆಯ ತಿಳುವಳಿಕೆಯೂ ಅದು ಚಿಕ್ಕ ಸಂಗತಿಯಾಗಿರಲಿ ಇಲ್ಲವೇ ದೊಡ್ಡ ಸಂಗತಿಯಾಗಿರಲಿ ಮಾನವ ಬದುಕಿಗೆ ಅತ್ಯಗತ್ಯ;**

**ಸಹ ಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳಿಗೆ ದಾರಿಯನ್ನು ತೋರಿಸುವ ಅರಿವನ್ನು ದೊಡ್ಡದೆಂದು ತಿಳಿಯಬೇಕೆ ಹೊರತು, ಅದನ್ನು ಹೇಳಿದವರು ವಯಸ್ಸಿನಲ್ಲಿ ಚಿಕ್ಕವರೋ ಇಲ್ಲವೇ ದೊಡ್ಡವರೋ ಎಂಬುದನ್ನು ನೋಡಬಾರದು.**



13. **ಕೀರ್ತಿವಾರ್ತೆಗೆ ಮಾಡುವ ಭಕ್ತ**
**ತಪ್ಪಿದಡೆ ಅದ ಮನಕ್ಕೆ ತರಲಿಲ್ಲ**
**ಸಜ್ಜನ ಸದ್ಭಕ್ತನೆಡಹಿದಡೆ**
**ಅದ ಸೈರಿಸಬಾರದು ಕೇಳಾ. (1569/285)**

ಕೀರ್ತಿ=ಹೆಸರನ್ನು ಪಡೆಯುವುದು/ಹೆಸರುವಾಸಿಯಾಗುವುದು; ವಾರ್ತೆ=ಸುದ್ದಿ/ಸಮಾಚಾರ; ಕೀರ್ತಿವಾರ್ತೆ=ವ್ಯಕ್ತಿಯ ಹೆಸರು ಮತ್ತು ಅವನು ಮಾಡಿದ ಕೆಲಸಗಳು ಎಲ್ಲೆಡೆ ಕೇಳಿಬರುವಂತಾಗಿ ವ್ಯಕ್ತಿಯು ಜನಮನ್ನಣೆಗೆ ಪಾತ್ರನಾಗುವುದು; ಮಾಡು=ಆಚರಿಸು/ನೆರವೇರಿಸು; ಭಕ್ತ=ದೇವರನ್ನು ನಂಬಿ ಪೂಜಿಸುವವನು; ತಪ್ಪು=ಇತರರಿಗೆ ಹಾನಿಯನ್ನುಂಟುಮಾಡುವ ಕೆಲಸವನ್ನು ಮಾಡುವುದು/ಸಮಾಜ ಒಪ್ಪಿತವಾದ ರೀತಿನೀತಿಗಳನ್ನು ಬಿಟ್ಟು ಬಾಳುವುದು; ತಪ್ಪಿದಡೆ=ತಪ್ಪನ್ನು ಮಾಡಿದರೆ; ಅದ=ಅದನ್ನು/ಅಂತಹ ತಪ್ಪನ್ನು; ಮನಕ್ಕೆ=ಮನಸ್ಸಿಗೆ; ತರಲ್+ಇಲ್ಲ; ತರು=ತೆಗೆದುಕೊಂಡುಬರುವುದು; ತರಲಿಲ್ಲ=ತೆಗೆದುಕೊಳ್ಳಲಿಲ್ಲ;

ಸಜ್ಜನ=ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿ; ಸದ್ಭಕ್ತನ್+ಎಡಹಿದಡೆ; ಸದ್ಭಕ್ತ=ಒಳ್ಳೆಯ ನಡೆನುಡಿಯುಳ್ಳ ಶಿವಶರಣ; ಎಡಹು=ಮುಗ್ಗರಿಸು/ನಡೆಯುವಾಗ ಕಾಲು ತೊಡರಿ ಬೀಳುವುದು; ಎಡಹಿದಡೆ=ಮುಗ್ಗರಿಸಿದರೆ;

**'ಸಜ್ಜನ ಸದ್ಭಕ್ತನೆಡಹಿದಡೆ' ಎಂಬ ನುಡಿಯು ಒಂದು ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ. ಒಳ್ಳೆಯ ಗುಣವಂತನಾದ ವ್ಯಕ್ತಿಯು ಜೀವನದಲ್ಲಿ ಕೆಟ್ಟ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನುಂಟುಮಾಡುವುದು;**

ಸೈರಿಸು=ತಾಳು/ಸಹಿಸು; ಸೈರಿಸಬಾರದು=ಸಹಿಸಿಕೊಳ್ಳಬಾರದು/ಸುಮ್ಮನಿರಬಾರದು; ಕೇಳ್=ಆಲಿಸು/ಕೇಳು; ಕೇಳಾ=ಕೇಳುವಂತಹವನಾಗು/ತಿಳಿಯುವಂತಹವನಾಗು/ಆಲೋಚಿಸು ನೋಡು;

**ದೇವರ ಪೂಜೆಗೆ ಮತ್ತು ದೇಗುಲದಲ್ಲಿ ನಿತ್ಯವೂ ನಡೆಯುವ ಆಚರಣೆಗಳಿಗೆ ಅಪಾರವಾದ ಸಂಪತ್ತನ್ನು ನೀಡುವುದರ ಮೂಲಕ ಜನಸಮುದಾಯದ ನಡುವೆ ಹೆಸರುವಾಸಿಯಾಗಿದ್ದ ವ್ಯಕ್ತಿಯೊಬ್ಬನು ಕೆಟ್ಟ ಕೆಲಸವನ್ನು ಮಾಡಿದರೆ, ಅದನ್ನು ದೊಡ್ಡ ತಪ್ಪೆಂದು ಪರಿಗಣಿಸಬೇಕಾಗಿಲ್ಲ. ಏಕೆಂದರೆ ಆತ ಹಣವನ್ನು ಸುರಿದು ದೇವರನ್ನು ಪೂಜಿಸುತ್ತಿದ್ದನೇ ಹೊರತು ಒಳ್ಳೆಯ ನಡೆನುಡಿಗಳನ್ನು ಹೊಂದಿರಲಿಲ್ಲ. ಬಹಿರಂಗದಲ್ಲಿ ದೇವರಲ್ಲಿ ಒಲವುಳ್ಳ ಶರಣನಂತೆ ಕಾಣುತ್ತಿದ್ದನೆ ಹೊರತು, ನಿತ್ಯ ಜೀವನದ ವ್ಯವಹಾರಗಳಲ್ಲಿ ಕೆಟ್ಟವನಾಗಿದ್ದ.**

ಆದರೆ ನಿತ್ಯ ಜೀವನದ ವ್ಯವಹಾರದಲ್ಲಿ ಸದಾಕಾಲ ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿರುವ ವ್ಯಕ್ತಿಯು ಇದ್ದಕ್ಕಿದ್ದಂತೆ ಕೆಟ್ಟದ್ದನ್ನು ಮಾಡತೊಡಗಿದರೆ, ಅದನ್ನು ಸಹಿಸಿಕೊಂಡು ಸುಮ್ಮನಿರಬಾರದು. ಆತನಿಗೆ ಎಚ್ಚರಿಕೆಯನ್ನು ನೀಡಿ ಮತ್ತೆ ಅಂತಹ ತಪ್ಪು ಅವನಿಂದ ಆಗದಂತೆ ಗುರುಹಿರಿಯರು ಮತ್ತು ಗೆಳೆಯರು ನೋಡಿಕೊಳ್ಳಬೇಕು.

ಏಕೆಂದರೆ ಒಳ್ಳೆಯ ವ್ಯಕ್ತಿಯು ಎಚ್ಚರ ತಪ್ಪಿ ಕೆಟ್ಟತನದಿಂದ ವರ್ತಿಸತೊಡಗಿದಾಗ, ಸಹಮಾನವರಿಗೆ ಮತ್ತು ಸಮಾಜಕ್ಕೆ ಹಾನಿಯಾಗುವುದರ ಜತೆಗೆ, ಜನರು ಒಳ್ಳೆಯತನದಲ್ಲಿ ಇಟ್ಟಿರುವ ನಂಬಿಕೆಯನ್ನು ಕಳೆದುಕೊಳ್ಳುತ್ತಾರೆ. ಇದರಿಂದಾಗಿ ಒಳ್ಳೆಯವನಲ್ಲಿ ಮತ್ತು ಕೆಟ್ಟವನಲ್ಲಿ ವ್ಯತ್ಯಾಸವನ್ನೇ ಕಾಣಲಾಗದೆ, ಜೀವನದಲ್ಲಿ ಒಳ್ಳೆಯದು ಕೆಟ್ಟದ್ದೆಲ್ಲವನ್ನೂ ಒಂದೇ ತಕ್ಕಡಿಯಲ್ಲಿಟ್ಟು ನೋಡತೊಡಗುತ್ತಾರೆ.



14. ಕೈಯಲ್ಲಿ ಕರಸ್ಥಲ
ಮನದಲ್ಲಿ ಪರಸ್ಥಲ
ತನುವೆಲ್ಲ ಹುಸಿಸ್ಥಲ
ಶರಣನೆಂತೆಂಬೆ. (643/187)

ಕೈ+ಅಲ್ಲಿ; ಕರ=ಕಯ್; ಸ್ಥಲ=ನೆಲೆ/ಜಾಗ; ಕರಸ್ಥಲ=ಶಿವಶರಣಶರಣೆಯರು ತಮ್ಮ ಅಂಗಯ್ ಮೇಲೆ ಇಟ್ಟುಕೊಂಡು ಪೂಜಿಸುವ ಲಿಂಗ;

ಮನ+ಅಲ್ಲಿ; ಮನ=ಮನಸ್ಸು/ಚಿತ್ತ; ಪರ=ಬೇರೆ/ಅನ್ಯ/ಇತರ; ಪರಸ್ಥಲ= ಬೇರೊಂದು ಕಡೆಯಲ್ಲಿರುವುದು ಚಂಚಲಗೊಂಡಿರುವುದು;

ತನು+ಎಲ್ಲ; ತನು=ದೇಹ/ಮಯ್/ಶರೀರ; ಹುಸಿ=ಸುಳ್ಳು; ಹುಸಿಸ್ಥಲ=ಸುಳ್ಳಿನಿಂದ ಕೂಡಿರುವುದು;

ಶರಣನ್+ಎಂತು+ಎಂಬೆ; ಶರಣ=ಶಿವನನ್ನು ಪೂಜಿಸುವವನು/ಶಿವನನ್ನು ಒಲಿದವನು; ಎಂತು=ಯಾವ ರೀತಿ/ಯಾವ ಬಗೆ; ಎಂಬೆ=ಎನ್ನುವೆ/ಹೇಳುವೆ; ಎಂತೆಂಬೆ=ಹೇಗೆ ತಾನೆ ಹೇಳುವೆ/ಯಾವ ರೀತಿಯಲ್ಲಿ ಹೇಳಲಿ;

ಅಂಗಯ್ ಮೇಲೆ ಲಿಂಗವನ್ನು ಇಟ್ಟುಕೊಂಡು ಪೂಜಿಸುತ್ತಿರುವ ವ್ಯಕ್ತಿಯ ಮನವು ಚಂಚಲತೆಗೆ ಒಳಗಾಗಿ ಕೆಟ್ಟ ಸಂಗತಿಗಳನ್ನು ಕುರಿತು ಆಲೋಚಿಸುತ್ತಿದ್ದರೆ ಮತ್ತು ನಿತ್ಯ ಜೀವನದಲ್ಲಿ ಅವನ ವ್ಯವಹಾರಗಳೆಲ್ಲವೂ ಸುಳ್ಳು ಹಾಗೂ ವಂಚನೆಯಿಂದಲೇ ಕೂಡಿದ್ದರೆ, ಅಂತಹವನನ್ನು ಶರಣನೆಂದು ಕರೆಯಲಾಗುವುದಿಲ್ಲ.

ಏಕೆಂದರೆ ಶರಣನಾದವನು ತನ್ನ ಮನದಲ್ಲಿ ಮೂಡುವ ಒಳ್ಳೆಯ ಮತ್ತು ಕೆಟ್ಟ ತುಡಿತಗಳಲ್ಲಿ , ಕೆಟ್ಟದ್ದನ್ನು ಹತ್ತಿಕ್ಕಿಕೊಂಡು ನಿತ್ಯ ಜೀವನದಲ್ಲಿ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಿಜದ ನಡೆನುಡಿಗಳಿಂದ ಬಾಳಬೇಕು.

ಶಿವನ ಪೂಜೆಯನ್ನು ಮಾಡುವ ವ್ಯಕ್ತಿಯು ಸಾಮಾಜಿಕವಾಗಿ ಒಳ್ಳೆಯ ನಡೆನುಡಿಯುಳ್ಳವನಾಗಿರಬೇಕು ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು.



15. ಕೌಪ ಕಾಷಾಂಬರವ ಕಟ್ಟಿ
ಮಂಡೆ ಬೋಳಾದಡೇನಯ್ಯ
ಮನದಲ್ಲಿ ನಿಜವಿಲ್ಲದನ್ನಕ್ಕರ. (1139–242)

ಕೌಪ=ಲಂಗೋಟಿ/ಕಚ್ಚೆಪಡೆ; ಕಾಷಾಯ+ಅಂಬರ; ಕಾಷಾಯ=ಕೆಂಪನೆಯ ಬಣ್ಣದ; ಅಂಬರ=ಬಟ್ಟೆ/ಅರಿವೆ; ಕಾಷಾಂಬರ=ಕಾವಿ ಬಣ್ಣದ ಬಟ್ಟೆ/ಉಡುಗೆ; ಕಟ್ಟಿ=ಉಟ್ಟುಕೊಂಡು;

ಕೌಪ ಕಾಷಾಂಬರವ ಕಟ್ಟಿ=ಕುಟುಂಬದಲ್ಲಿ ಹೆಂಡತಿ ಮತ್ತು ಮಕ್ಕಳೊಡನೆ ಇದ್ದ ನಂಟನ್ನು ತೊರೆದು, ಮಯ್ಯಲ್ಲಿ ತುಡಿಯುವ ಕಾಮ ಮತ್ತು ಮನದಲ್ಲಿ ಮಿಡಿಯುವ ಕೆಟ್ಟ ಆಸೆಗಳಿಂದ ಬಿಡುಗಡೆಯನ್ನು ಪಡೆಯಲೆಂದು ಕಾವಿಬಟ್ಟೆಯನ್ನು ಉಟ್ಟುಕೊಂಡು;

ಮಂಡೆ=ತಲೆ; ಬೋಳ್+ಆದಡೆ+ಏನ್+ಅಯ್ಯ; ಬೋಳ್=ಬರಿದಾದ/ಬೊಕ್ಕಾದ/ತಲೆಯ ಕೂದಲನ್ನು ತೆಗೆಸಿರುವುದು; ಮಂಡೆ ಬೋಳಾಗುವುದು=ಸಂಸಾರದಿಂದ ದೂರ ಸರಿದು ಸಂನ್ಯಾಸಿಯಾದ ವ್ಯಕ್ತಿಯು ತಲೆಯ ಮೇಲಣ ಕೂದಲನ್ನು ತೆಗೆಸುವುದು ಒಂದು ಬಗೆಯ ಆಚರಣೆಯಾಗಿದೆ. ಈ ರೀತಿ ಮಂಡೆ ಬೋಳಾಗಿರುವುದು ಸನ್ಯಾಸತ್ವದ ಒಂದು ಗುರುತು/ಸಂಕೇತ;

ಆದಡೆ=ಆದರೆ; ಏನ್=ಯಾವ ಪ್ರಯೋಜನ/ಯಾವುದು; ಅಯ್ಯ= ಗಂಡಸರನ್ನು ಒಲವು ನಲಿವು ಆದರದಿಂದ ಮಾತನಾಡಿಸುವಾಗ ಬಳಸುವ ಪದ; ಮನ+ಅಲ್ಲಿ; ಮನ=ಮನಸ್ಸು/ಚಿತ್ತ; ನಿಜ+ಇಲ್ಲದ+ಅನ್ನಕ್ಕರ; ನಿಜ=ಸತ್ಯ/ದಿಟ/ವಾಸ್ತವ;

ಮನದಲ್ಲಿ ನಿಜವಿಲ್ಲದಿರುವುದು=ಮನದಲ್ಲಿ ನಿರಂತರವಾಗಿ ಮೂಡುವ ಒಳ್ಳೆಯ ಮತ್ತು ಕೆಟ್ಟ ಒಳಮಿಡಿತಗಳಲ್ಲಿ, ಕೆಟ್ಟದ್ದನ್ನು ಹತ್ತಿಕ್ಕಿಕೊಂಡು ಒಳ್ಳೆಯತನದಿಂದ ಬಾಳಬೇಕೆಂಬ ನಿಲುವು ಇಲ್ಲದಿರುವುದು; ಅನ್ನಕ್ಕರ=ಅಂದ ಮೇಲೆ/ಆ ತನಕ;

**ಬಹಿರಂಗದಲ್ಲಿ ಜನರ ಕಣ್ಣಿಗೆ ವಿರಾಗಿಯಂತೆ, ಸಂನ್ಯಾಸಿಯಂತೆ, ಒಳ್ಳೆಯವನಂತೆ ಕಾಣಿಸಿಕೊಳ್ಳಲು ವ್ಯಕ್ತಿಯು ಉಡುವ ತೊಡುವ ಬಟ್ಟೆಬರೆಗಳಿಂದ ಯಾವ ಪ್ರಯೋಜನವೂ ಇಲ್ಲ. ಇದಕ್ಕೆ ಬದಲಾಗಿ ವ್ಯಕ್ತಿಯು ತನ್ನ ಜೀವನವನ್ನು ಒಳ್ಳೆಯ ರೀತಿಯಲ್ಲಿ ನಡೆಸುತ್ತ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ಹಂಬಲವನ್ನು ಅಂತರಂಗದ ಮನದಲ್ಲಿ ಹೊಂದಿರಬೇಕು.**



16. ಕೋಪ ತಾಪವ ಬಿಟ್ಟು
ಭ್ರಾಂತಿ ಭ್ರಮೆಯಂ ಬಿಟ್ಟು
ಜಂಗಮವಾಗಬೇಕು ಕಾಣಿರೆ ಮರುಳುಗಳಿರಾ. (1137/242)

ಕೋಪ=ಸಿಟ್ಟು/ಆಕ್ರೋಶ/ಮುನಿಸು; ತಾಪ=ಸಂಕಟ/ನೋವು/ವೇದನೆ; ಬಿಡು=ತೊರೆ/ತ್ಯಜಿಸು; ಬಿಟ್ಟು=ಹೋಗಲಾಡಿಸಿಕೊಂಡು/ಇಲ್ಲವಾಗಿಸಿಕೊಂಡು/ತೊರೆದು/ತ್ಯಜಿಸಿ;

ಭ್ರಾಂತಿ=ತಪ್ಪು ತಿಳುವಳಿಕೆ; ಭ್ರಮೆ=ಇರುವುದನ್ನು ಇಲ್ಲವೆಂದೂ, ಇಲ್ಲದ್ದನ್ನು ಇದೆಯೆಂದೂ ನಂಬುವುದು;

ಜಂಗಮ+ಆಗಬೇಕು; ಜಂಗಮ=ಸಹ ಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳಲ್ಲಿ ಶಿವನನ್ನು ಕಾಣುವವನು/ಜನಮನದಲ್ಲಿ ಒಳ್ಳೆಯ ನಡೆನುಡಿಗಳಿಗೆ ಪ್ರೇರಣೆಯಾಗುವಂತಹ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಮೂಡಿಸುವವನು; ಕಾಣ್=ನೋಡು/ತಿಳಿ; ಕಾಣಿರೆ=ಅರಿತುಕೊಳ್ಳಿರಿ/ತಿಳಿದುಕೊಳ್ಳಿರಿ; ಮರುಳು=ದಡ್ಡ/ತಿಳಿಗೇಡಿ;

ವ್ಯಕ್ತಿಯು ಒಳ್ಳೆಯ ನಡೆನುಡಿಗಳಿಂದ ಬಾಳಬೇಕಾದರೆ, ತನ್ನ ಮಯ್ ಮನದಲ್ಲಿ ನಾನಾ ಕಾರಣಗಳಿಂದಾಗಿ ಮೂಡಿಬರುವಂತಹ ಕೋಪವನ್ನು ಹತೋಟಿಯಲ್ಲಿಟ್ಟುಕೊಂಡು, ತನ್ನನ್ನು ಮತ್ತು ಇತರರನ್ನು ಸಂಕಟಕ್ಕೆ ಇಲ್ಲವೇ ದುರಂತಕ್ಕೆ ದೂಡುವಂತಹ ಪ್ರಸಂಗ ಉಂಟಾಗದಂತೆ ತಡೆಗಟ್ಟಬೇಕು. ಜಾತಿ, ಮತ ಮತ್ತು ದೇವರ ಬಗೆಗೆ ಪರಂಪರಾಗತವಾಗಿ ತನ್ನ ಮನದಲ್ಲಿ ನೆಲೆಗೊಂಡಿರುವ ಬಹುಬಗೆಯ ತಪ್ಪು ಕಲ್ಪನೆಗಳನ್ನು ಹೊರಹಾಕಬೇಕು. ಆಗ ಮಾತ್ರ ಜಂಗಮನಾದ ವ್ಯಕ್ತಿಯು ಅರಿವಿನ ಹಾದಿಯಲ್ಲಿ ಹೇಗೆ ಮುನ್ನಡೆಯುತ್ತಿರುತ್ತಾನೆಯೋ ಅಂತೆಯೇ ಅರಿವನ್ನು ಪಡೆದ ವ್ಯಕ್ತಿಯ ಬದುಕು ಒಳಿತಿನ ಹಾದಿಯಲ್ಲಿ ಸಾಗುತ್ತಿರುತ್ತದೆ ಎಂಬ ಇಂಗಿತವನ್ನು ಈ ಸಾಲುಗಳು ಸೂಚಿಸುತ್ತಿವೆ.

'ಜಂಗಮ' ಎಂಬ ಪದ ಇಲ್ಲಿ ಒಂದು ರೂಪಕವಾಗಿ ಬಳಕೆಯಾಗಿದೆ. 'ಜಂಗಮ' ಎಂಬ ಪದಕ್ಕೆ ಒಂದೇ ಕಡೆಯಲ್ಲಿ ನೆಲೆಯಾಗಿ ನಿಲ್ಲದೆ, ಸದಾಕಾಲ ಸಂಚರಿಸುತ್ತಿರುವುದು ಎಂಬ ತಿರುಳಿದೆ. ಮಾನವ ಸಮುದಾಯವು ಜಾತಿ, ಮತ, ದೇವರ ಹೆಸರಿನಲ್ಲಿ ಕಟ್ಟಿಕೊಂಡಿರುವ ಕಟ್ಟುಪಾಡುಗಳಿಗೆ ಮತ್ತು ನಂಬಿಕೆಗಳಿಗೆ ವ್ಯಕ್ತಿಯು ಅಂಟಿಕೊಳ್ಳದೆ, ಅವುಗಳಿಂದ ಮಾನಸಿಕವಾಗಿ ಹೊರಬಂದು ಒಳ್ಳೆಯ ನಡೆನುಡಿಗಳಿಂದ ಜೀವನವನ್ನು ಮುನ್ನಡೆಸುವಂತಾಗಬೇಕು ಎಂಬ ತಿರುಳಿನಲ್ಲಿ 'ಜಂಗಮ' ಪದ ಬಳಕೆಯಾಗಿದೆ.



17. ಘನತರವಾದ ಚಿತ್ರದ ರೂಹ
ಬರೆಯಬಹುದಲ್ಲದೆ
ಪ್ರಾಣವ ಬರೆಯಬಹುದೆ ಅಯ್ಯಾ. (79–144)

ಘನ=ದೊಡ್ಡದು/ಉತ್ತಮವಾದುದು/ಅತಿಶಯವಾದುದು; ತರ=ರೀತಿ/ಬಗೆ/ಪ್ರಕಾರ; ಘನತರ=ದೊಡ್ಡದಾಗಿರುವ/ಉತ್ತಮವಾಗಿರುವ/ಅತಿಶಯವಾಗಿರುವ; ಚಿತ್ರ=ಗೆರೆ ಇಲ್ಲವೇ ಬಣ್ಣಗಳ ವಿನ್ಯಾಸದಿಂದ ಕಲಾತ್ಮಕವಾಗಿ ರಚನೆಗೊಂಡಿರುವ ವಸ್ತು; ರೂಹು=ರೂಪ/ಆಕಾರ; ರೂಹ=ಆಕಾರವನ್ನು/ರೂಪವನ್ನು; ಬರೆಯಬಹುದು+ಅಲ್ಲದೆ; ಬರೆ=ರಚಿಸು/ಗೆರೆಯನ್ನು ಎಳೆ; ಬರೆಯಬಹುದು=ರಚಿಸಲು ಆಗುತ್ತದೆ; ಅಲ್ಲದೆ=ಹಾಗೆ ಮಾಡದೆ/ಅದನ್ನು ಬಿಟ್ಟು; ಪ್ರಾಣ=ಉಸಿರು/ಜೀವ; ಬರೆಯಬಹುದೇ=ಬರೆಯಲು ಆಗುತ್ತದೆಯೇ/ಜಡವಾದ ಚಿತ್ರಕ್ಕೆ ಜೀವವನ್ನು ನೀಡಲು ಇಲ್ಲವೇ ಉಸಿರನ್ನು ತುಂಬಲು ಆಗುತ್ತದೆಯೇ;

ನೋಡುವವರ ಕಣ್ಮನಗಳನ್ನು ಸೆಳೆಯುವಂತಹ ಗಿಡ, ಮರ, ಪ್ರಾಣಿ, ಹಕ್ಕಿ, ಹೆಣ್ಣು, ಗಂಡು ಮತ್ತು ನಿಸರ್ಗದ ಇರುವಿಕೆಯನ್ನು ಕುರಿತ ಸುಂದರವಾದ ಚಿತ್ರಗಳನ್ನು ಕಲಾತ್ಮಕವಾಗಿ ರಚಿಸುವ ಕಯ್ ಚಳಕವನ್ನು ಕಲಾವಿದನಾದ ವ್ಯಕ್ತಿಯು ಹೊಂದಿರುತ್ತಾನೆ. ಆದರೆ ಚಿತ್ರಗಾರನು ತಾನು ರಚಿಸಿದ ಮನಮೋಹಕ ಚಿತ್ರಗಳಿಗೆ ಜೀವವನ್ನು ತುಂಬಿ, ಅವು ಚೇತನಗೊಂಡು ಉಸಿರಾಡಿ ಬಾಳುವಂತೆ ಮಾಡಲಾರ. ಜಗತ್ತಿನಲ್ಲಿ ಮಾನವನಿಗಿರುವ ಶಕ್ತಿಯ ಮತ್ತು ಕುಶಲತೆಯ ಇತಿಮಿತಿಯನ್ನು ಈ ರೂಪಕ ಸೂಚಿಸುತ್ತಿದೆ.



18. ತನುವ ಗೆಲಲರಿಯದೆ
ಮನವ ಗೆಲಲರಿಯದೆ
ಧನವ ಗೆಲಲರಿಯದೆ
ಭ್ರಮೆಗೊಂಡಿತ್ತು ಲೋಕವೆಲ್ಲವು. (1217–250)

ತನು=ಮಯ್/ದೇಹ/ಶರೀರ; ಗೆಲಲ್+ಅರಿಯದೆ; ಗೆಲ್=ಜಯಿಸು; ಅರಿಯದೆ=ತಿಳಿಯದೆ; ಗೆಲಲರಿಯದೆ=ತನ್ನ ಹತೋಟಿಯಲ್ಲಿ ಇಟ್ಟುಕೊಂಡು ಬಾಳುವುದನ್ನು ತಿಳಿಯದೆ; ತನುವ ಗೆಲಲರಿಯದೆ=ಮಯ್ಯನ್ನು ಹೇಗೆ ಹತೋಟಿಯಲ್ಲಿಟ್ಟುಕೊಳ್ಳಬೇಕೆಂಬುದನ್ನು ತಿಳಿಯದೆ; ವ್ಯಕ್ತಿಯು ಮಾಡುವ ಎಲ್ಲಾ ಬಗೆಯ ಕೆಲಸಗಳಿಗೂ ದೇಹವೇ ಒಂದು ಉಪಕರಣ. ಆದ್ದರಿಂದ ದೇಹವನ್ನು ಗಟ್ಟಿಮುಟ್ಟಾಗಿ ಯಾವುದೇ ರೋಗರುಜಿನಗಳು ತಟ್ಟದಂತೆ ಚೆನ್ನಾಗಿ ಇಟ್ಟುಕೊಳ್ಳಬೇಕೆಂಬುದನ್ನು ಅರಿಯದೆ;

ಮನ=ಮನಸ್ಸು; ಮನವ ಗೆಲಲರಿಯದೆ=ಮನದಲ್ಲಿ ತುಡಿಯುವ ಒಳಮಿಡಿತಗಳಲ್ಲಿ ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯದನ್ನು ನಡೆನುಡಿಗಳಲ್ಲಿ ಅಳವಡಿಸಿಕೊಂಡು ಬಾಳುವುದನ್ನು ತಿಳಿಯದೆ;

ಧನ=ಹಣ/ಒಡವೆ ವಸ್ತು/ಆಸ್ತಿಪಾಸ್ತಿ/ಸಂಪತ್ತು; ಧನವ ಗೆಲಲರಿಯದೆ=ಸಂಪಾದಿಸಿದ ಹಣವನ್ನು ದುಂದು ವೆಚ್ಚ ಮಾಡಿ ಕಳೆಯದೆ ಇಲ್ಲವೇ ಕೆಟ್ಟ ಚಟಗಳಿಗಾಗಿ ಬಳಸದೆ; ತನ್ನ , ತನ್ನ ಕುಟುಂಬದ, ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಳಸಬೇಕೆಂಬ ಎಚ್ಚರವಿಲ್ಲದೆ; ಭ್ರಮೆ+ಕೊಂಡಿತ್ತು; ಭ್ರಮೆ=ತಪ್ಪುಗ್ರಹಿಕೆ/ಕಲ್ಪಿತ ಸಂಗತಿ; ಭ್ರಮೆಗೊಂಡಿತ್ತು=ಇಲ್ಲದ್ದನ್ನು ಇದೆಯೆಂಬ, ಇರುವುದನ್ನು ಇಲ್ಲವೆಂಬ ಒಳಮಿಡಿತಗಳಿಂದ ಕೂಡಿರುವುದು; ಲೋಕ+ಎಲ್ಲವು; ಲೋಕ=ಜಗತ್ತು/ಪ್ರಪಂಚ/ಜನಸಮುದಾಯ; ಎಲ್ಲ=ಪ್ರತಿಯೊಂದನ್ನು ಒಳಗೊಂಡಿರುವುದು;

ಭ್ರಮೆಗೊಂಡಿತ್ತು ಲೋಕವೆಲ್ಲವು=ಜಗತ್ತಿನ ಜನಸಮುದಾಯವೆಲ್ಲವೂ ಜೀವನದ ಉದ್ದಕ್ಕೂ ಬಹುಬಗೆಯ ತಪ್ಪುಗ್ರಹಿಕೆಗಳಿಂದಲೇ ತೊಳಲಾಡುತ್ತಿದೆ;

ವ್ಯಕ್ತಿಯು ತನ್ನ ಬದುಕಿನಲ್ಲಿ ಒಲವು ನಲಿವು ನೆಮ್ಮದಿಯಿಂದ ಎಲ್ಲರೊಡನೆ ಬಾಳಬೇಕಾದರೆ ತನ್ನ ಮಯ್ ಮನಗಳನ್ನು ಕೆಟ್ಟದ್ದರ ಕಡೆಗೆ ಜಾರದಂತೆ ಹತೋಟಿಯಲ್ಲಿಟ್ಟುಕೊಂಡು, ಸಂಪಾದಿಸಿದ ಹಣವನ್ನು ದುಂದು ಮಾಡದೆ, ಕೆಟ್ಟ ಚಟಗಳಿಗೆ ಬಳಸದೆ, ಹಣವನ್ನು ದೊಡ್ಡದೆಂದು ತಿಳಿದು ಹಣಕ್ಕೆ ದಾಸನಾಗದೆ ಎಚ್ಚರದಿಂದ ಕೂಡಿರಬೇಕು.



19. ತನ್ನ ತಾನರಿದಡೆ
ನುಡಿಯೆಲ್ಲ ತತ್ವ ನೋಡಾ
ತನ್ನ ತಾ ಮರೆದಡೆ
ನುಡಿಯೆಲ್ಲ ಮಾಯೆ ನೋಡಾ. (1208–249)

ತನ್ನ=ತನ್ನನ್ನು; ತಾನ್+ಅರಿದಡೆ; ತಾನು=ವ್ಯಕ್ತಿಯು; ಅರಿವು=ತಿಳುವಳಿಕೆ/ವಿವೇಕ; ಅರಿದಡೆ=ತಿಳಿದುಕೊಂಡರೆ;

'ತನ್ನನ್ನು ತಾನು ತಿಳಿಯುವುದು' ಎಂದರೆ ಸಾಮಾಜಿಕ ಜೀವಿಯಾದ ಮಾನವನ ದೇಹವು ಒಂದು ಕಡೆಯಲ್ಲಿ ನಿಸರ್ಗ ಸಹಜವಾದ ಹಸಿವು ಮತ್ತು ಕಾಮದಿಂದ ಕೂಡಿದ್ದರೆ, ಮತ್ತೊಂದೆಡೆಯಲ್ಲಿ ಅವನ ನಡೆನುಡಿಗಳನ್ನು ನಿಯಂತ್ರಿಸುವಂತಹ ಸಾಮಾಜಿಕ ಕಟ್ಟುಪಾಡುಗಳು, ಸಂಪ್ರದಾಯಗಳು, ನಂಬಿಕೆಗಳು ಮತ್ತು ರಾಜ್ಯಾಡಳಿತದ ನಿಯಮಗಳು ಬದುಕನ್ನು ಸುತ್ತುವರಿದಿರುತ್ತವೆ. ಆದ್ದರಿಂದಲೇ ವ್ಯಕ್ತಿಯ ಮಯ್ ಮನಸ್ಸು ಸದಾಕಾಲ ಒಳಿತು ಕೆಡುಕಿನ ಇಬ್ಬಗೆಯ ತೊಳಲಾಟದಲ್ಲಿ ಸಿಲುಕಿರುತ್ತವೆ. ಈ ವಾಸ್ತವವನ್ನು ಅರಿತುಕೊಂಡು ಕೆಡುಕಿನ ಒಳಮಿಡಿತಗಳನ್ನು ಹತ್ತಿಕ್ಕಿ, ಒಳ್ಳೆಯ ನಡೆನುಡಿಗಳಿಂದ ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ಎಚ್ಚರವನ್ನು ಹೊಂದಿರುವುದು;

ನುಡಿ+ಎಲ್ಲ; ನುಡಿ=ಮಾತು/ಸೊಲ್ಲು; ಎಲ್ಲ=ಸಕಲ/ಸಮಗ್ರ; ತತ್ವ=ದಿಟ/ಸತ್ಯ/ವಾಸ್ತವವನ್ನು ಒಳಗೊಂಡಿರುವ ವಿಚಾರ; ನುಡಿಯೆಲ್ಲ ತತ್ವ=ಆಡಿದ ಮಾತುಗಳು ವಾಸ್ತವದ ಸಂಗತಿಗಳಿಂದ ಕೂಡಿರುತ್ತವೆ; ನೋಡು=ಕಾಣು/ತಿಳಿ; ತಾ=ತಾನು/ವ್ಯಕ್ತಿಯು; ಮರೆ=ಕಡೆಗಣಿಸು/ತಿರಸ್ಕರಿಸು/ನೆನಪಿಸಿಕೊಳ್ಳದಿರು; ಮರೆದಡೆ=ಮರೆತರೆ;

ತನ್ನ ತಾ ಮರೆತಡೆ=ನಿಸರ್ಗದಲ್ಲಿನ ಆಗುಹೋಗು ಮತ್ತು ಸಮಾಜದ ಕಟ್ಟುಪಾಡುಗಳು ತನ್ನ ನಡೆನುಡಿಗಳನ್ನು ರೂಪಿಸುತ್ತಿದೆಯೆಂಬ ವಾಸ್ತವವನ್ನು ಮರೆತರೆ/ಕಡೆಗಣಿಸಿದರೆ; ಮಾಯೆ=ಮಯ್ ಮನಗಳಲ್ಲಿ ಬಯಕೆಗಳನ್ನು ಕೆರಳಿಸಿ ತಮ್ಮತ್ತ ಸೆಳೆಯುವ ವಸ್ತು/ಜೀವಿ/ವ್ಯಕ್ತಿಗಳು;

ನುಡಿಯೆಲ್ಲಾ ಮಾಯೆ=ವ್ಯಕ್ತಿಯು ಆಡಿದ ನುಡಿಯೆಲ್ಲವೂ ವಾಸ್ತವಕ್ಕೆ ದೂರವಾಗಿರುತ್ತವೆ. ಇಂತಹ ಮಾತುಗಳಿಂದಾಗಿ ವ್ಯಕ್ತಿಯ ಬದುಕು ಹಲವು ಬಗೆಯ ಸಂಕಟ/ದುರಂತಗಳಿಗೆ ಗುರಿಯಾಗುತ್ತದೆ; ನೋಡಾ=ಕಂಡೆಯಾ/ತಿಳಿದಿರುವೆಯಾ;

**ಲೋಕದಲ್ಲಿನ ವಾಸ್ತವ ಸಂಗತಿಗಳನ್ನು ವ್ಯಕ್ತಿಯು ಅರಿತುಕೊಂಡು ಮಾತನಾಡತೊಡಗಿದರೆ, ಆಗ ಅವನಾಡುವ ಮಾತುಗಳು ಅವನನ್ನು ಒಳಗೊಂಡಂತೆ ಎಲ್ಲರಿಗೂ ಒಳಿತನ್ನು ಉಂಟುಮಾಡುತ್ತವೆ. ಈ ವಾಸ್ತವವನ್ನು ಅರಿಯದೆ ಆಡುವ ಮಾತುಗಳು ಬದುಕನ್ನು ಗೊಂದಲಕ್ಕೆ ಈಡುಮಾಡಿ ಎಲ್ಲರಿಗೂ ಕೇಡನ್ನುಂಟುಮಾಡುತ್ತವೆ.**



## 20. ದಾಳಿಕಾರಂಗೆ ಧರ್ಮವುಂಟೆ. (134–149)

ದಾಳಿ=ಲಗ್ಗೆ/ಆಕ್ರಮಣ/ಮುತ್ತಿಗೆ; ದಾಳಿಕಾರ=ಇತರರ ಮಾನ, ಪ್ರಾಣ, ಒಡವೆವಸ್ತು, ಆಸ್ತಿಪಾಸ್ತಿಗಳನ್ನು ದೋಚಲೆಂದು ಕ್ರೂರತನದಿಂದ ಹಲ್ಲೆ ಮಾಡುವ ವ್ಯಕ್ತಿ; ದಾಳಿಕಾರಂಗೆ=ದಾಳಿಕಾರನಿಗೆ/ದರೋಡೆಕೋರನಿಗೆ/ಲೂಟಿಕೋರನಿಗೆ;

ಧರ್ಮ+ಉಂಟೆ; ಧರ್ಮ=ಅರಿವು, ಒಲವು, ಕರುಣೆ ಮತ್ತು ಗೆಳೆತನದಿಂದ ಕೂಡಿದ ನಡೆನುಡಿ/ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೂ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ನಡೆನುಡಿ; ಉಂಟೆ=ಇರುತ್ತವೆಯೇ/ಇರುವುದೇ;

**ಜನರ ಆಸ್ತಿಪಾಸ್ತಿಗಳನ್ನು ಕೊಳ್ಳೆ ಹೊಡೆಯುವ ದರೋಡೆಕೋರನಲ್ಲಿ, ದುಡಿಯುವ ಶ್ರಮಜೀವಿಗಳ ಸಂಪತ್ತನ್ನು ದೋಚುವ ಲಂಚಕೋರನಲ್ಲಿ ಮತ್ತು ಜಾತಿ, ಮತ, ದೇವರ ಹೆಸರಿನಲ್ಲಿ ಜನಸಮುದಾಯಗಳಲ್ಲಿ ಪರಸ್ಪರ ಅಪನಂಬಿಕೆ, ಅಸೂಯೆ ಮತ್ತು ಹಗೆತನವನ್ನುಂಟು ಮಾಡಿ, ಜನರು ಒಬ್ಬರು ಮತ್ತೊಬ್ಬರೊಡನೆ ಬಡಿದಾಡಿಕೊಂಡು ಸಾವು ನೋವುಗಳಿಗೆ ಬಲಿಯಾಗುವಂತೆ ಮಾಡಿ, ತಾನು ಮಾತ್ರ ಉನ್ನತವಾದ ಗದ್ದುಗೆಯನ್ನೇರಿ ನಾಡಿನ ಸಂಪತ್ತನ್ನು ದೋಚುವ ಕಪಟಿಯೂ ಕ್ರೂರಿಯೂ ಆದ ವ್ಯಕ್ತಿಯ ನಡೆನುಡಿಯಲ್ಲಿ ಸತ್ಯ, ನೀತಿ, ನ್ಯಾಯ ಮತ್ತು ಕರುಣೆಯ ಒಳಮಿಡಿತಗಳು ಇರುವುದಿಲ್ಲ.**



## 21. ನಿನಗೆ ನೀನೆ ಗುರುವಲ್ಲದೆ
## ನಿನ್ನಿಂದಧಿಕಮಪ್ಪ ಗುರುವುಂಟೆ. (1157/244)

ಗುರು+ಅಲ್ಲದೆ; ಗುರು=ಮಕ್ಕಳಿಗೆ ವಿದ್ಯೆಯನ್ನು ಕಲಿಸಿ, ತಿಳುವಳಿಕೆಯನ್ನು ಹೇಳಿ, ಅವರ ವ್ಯಕ್ತಿತ್ವವನ್ನು ಒಳ್ಳೆಯ ರೀತಿಯಲ್ಲಿ ರೂಪಿಸುವ ವ್ಯಕ್ತಿ; ನಿನ್ನ+ಇಂದ+ಅಧಿಕಮ್+ಅಪ್ಪ ನಿನ್ನಿಂದ=ನಿನಗಿಂತಲೂ; ಅಧಿಕ=ಹೆಚ್ಚಾದುದು/ಉತ್ತಮವಾದುದು/ಮೇಲಾದುದು;

ಅಪ್ಪ=ಆಗಿರುವ ; ಗುರು+ಉಂಟೆ; ಉಂಟು=ಇರುವುದು; ಉಂಟೇ=ಇದೆಯೇ/ ಇದ್ದಾರೆಯೇ;

ವ್ಯಕ್ತಿಯು ತನ್ನ ಜೀವನವನ್ನು ಒಳ್ಳೆಯ ರೀತಿಯಲ್ಲಿ ರೂಪಿಸಿಕೊಂಡು ಮುನ್ನಡೆಸುವ ಜವಾಬ್ದಾರಿಯನ್ನು ತಾನೇ ಹೊತ್ತಿರಬೇಕು ಎಂಬುದನ್ನು "ನಿನಗೆ ನೀನೇ ಗುರು; ನಿನಗಿಂತ ದೊಡ್ಡವರಾದ ಮತ್ತೊಬ್ಬ ಗುರುವಿಲ್ಲ" ಎಂಬ ನುಡಿಗಳು ಸೂಚಿಸುತ್ತಿವೆ.

ಜೀವನದಲ್ಲಿ "ಯಾವುದು ಸರಿ-ಯಾವುದು ತಪ್ಪು; ಯಾವುದು ನಿಜ-ಯಾವುದು ಸುಳ್ಳು; ಯಾವುದು ನೀತಿ-ಯಾವುದು ಅನೀತಿ" ಎಂಬ ಅರಿವನ್ನು ವ್ಯಕ್ತಿಯು ಪಡೆದುಕೊಳ್ಳಬೇಕು. ಆಗ ವ್ಯಕ್ತಿಯು ತನ್ನ ಮಯ್ ಮನದಲ್ಲಿ ಸದಾಕಾಲ ಮೂಡಿಬರುವ ಒಳಿತು ಕೆಡುಕಿನ ಒಳಮಿಡಿತಗಳಲ್ಲಿ, ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯತನದಿಂದ ಜೀವನವನ್ನು ನಡೆಸಲು ಅರಿವು ಎಂಬುದೇ ಗುರುವಾಗಿ, ವ್ಯಕ್ತಿಯನ್ನು ಒಳ್ಳೆಯ ದಾರಿಯಲ್ಲಿ ಕರೆದೊಯ್ಯುತ್ತದೆ.



22. ನಿಮ್ಮನರಿದ ಶರಣಂಗೆ
ಪೂಜೆಯ ಹಂಬಲ ದಂದುಗವೇಕೆ. (425/171)

ನಿಮ್ಮನ್+ಅರಿದ; ನಿಮ್ಮನ್ನು=ಶಿವನನ್ನು/ದೇವರನ್ನು; ಅರಿ=ತಿಳಿ/ಕಲಿ; ಅರಿದ=ತಿಳಿದ; ಶರಣಂಗೆ=ಶರಣನಿಗೆ; ಶರಣ=ಒಳ್ಳೆಯ ನಡೆನುಡಿಗಳನ್ನೇ ಶಿವನೆಂದು ನಂಬಿ ನಡೆದುಕೊಳ್ಳುತ್ತಿರುವ ವ್ಯಕ್ತಿ; ಪೂಜೆ=ಶಿವನ ವಿಗ್ರಹವನ್ನು ಹೂವು ಹಣ್ಣು ಉಡುಗೆ ತೊಡುಗೆಗಳಿಂದ ಸಿಂಗರಿಸಿ, ದೂಪ ದೀಪಗಳಿಂದ ಆರತಿಯನ್ನು ಬೆಳಗಿಸುವುದು/ ಶಿವನನ್ನು ಒಲಿಸಿಕೊಳ್ಳಲು ಮಾಡುವ ಬಹುಬಗೆಯ ಆಚರಣೆಗಳು; ಹಂಬಲ=ಹೆಚ್ಚಾದ ಬಯಕೆ/ಕಾತರ/ಆಸೆ; ದಂದುಗ+ಏಕೆ; ದಂದುಗ=ಕೆಲಸ/ಕಾರ್ಯ/ಆಚರಣೆ; ಏಕೆ=ಯಾವುದಕ್ಕಾಗಿ;

ಕಲ್ಲು, ಮಣ್ಣು, ಮರ, ಲೋಹದಿಂದ ಮಾಡಿದ ವಿಗ್ರಹ ರೂಪಿಯಾದ ಶಿವನಿಗೆ ಮಾಡುವ ಯಾವುದೇ ಬಗೆಯ ಆಚರಣೆಯನ್ನಾಗಲಿ ಇಲ್ಲವೇ ದೇವರ ಪೂಜೆಯನ್ನಾಗಲಿ ಶಿವಶರಣಶರಣೆಯರು ದೊಡ್ಡದೆಂದು ಪರಿಗಣಿಸಿರಲಿಲ್ಲ. ಏಕೆಂದರೆ ವ್ಯಕ್ತಿಯು ತನಗೆ ಮತ್ತು ತನ್ನ ಕುಟುಂಬಕ್ಕೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಸಾಮಾಜಿಕ ನಡೆನುಡಿಗಳಲ್ಲಿ ಅವರು ಶಿವನನ್ನು ಕಾಣುತ್ತಿದ್ದರು. ಆದ್ದರಿಂದ ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿರುವ ವ್ಯಕ್ತಿಗೆ ದೇವರ ಪೂಜೆಯ ಅಗತ್ಯವಿಲ್ಲ ಎಂಬ ಶಿವಶರಣಶರಣೆಯರ ನಿಲುವನ್ನು ಈ ನುಡಿಗಳು ಸೂಚಿಸುತ್ತಿವೆ.



## 23. ನಿರ್ಣಯವನರಿಯದ ಮನವೆ ದುಗುಡವನಾಹಾರಗೊಂಡೆಯಲ್ಲಾ. (45–141)

ನಿರ್ಣಯ+ಅನ್+ಅರಿಯದ ; ನಿರ್ಣಯ=ಯಾವುದೇ ಒಂದು ಸಂಗತಿಯ ಬಗ್ಗೆ ಏನನ್ನು ಮಾಡಬೇಕು ಇಲ್ಲವೇ ಮಾಡಬಾರದು ಎಂಬುದನ್ನು ತೀರ್ಮಾನಿಸುವುದು ; ಅರಿ=ತಿಳಿ ; ಅರಿಯದ=ತಿಳಿಯಲಾಗದ/ಗೊತ್ತುಪಡಿಸಿಕೊಳ್ಳಲಾಗದ; ಮನ=ಮನಸ್ಸು;

ನಿರ್ಣಯವನರಿಯದ ಮನ=ವ್ಯಕ್ತಿಯ ದಿನನಿತ್ಯದ ವ್ಯವಹಾರಗಳಲ್ಲಿ ಯಾವುದೇ ಬಗೆಯ ಅಡ್ಡಿ ಆತಂಕ ಉಂಟಾದಾಗ, ಅದನ್ನು ಹೇಗೆ ಪರಿಹರಿಸಿಕೊಂಡು ಮುನ್ನಡೆಯಬೇಕು ಎಂಬುದನ್ನು ನಿಶ್ಚಯಿಸಲಾಗದೆ, ಇಬ್ಬಗೆಯಲ್ಲಿ ಚಂಚಲತೆಯಿಂದ ಮನಸ್ಸು ತೊಳಲಾಡುವುದು;

ದುಗುಡ+ಅನ್+ಆಹಾರ+ಕೊಂಡೆ+ಅಲ್ಲಾ ; ದುಗುಡ=ಕಳವಳ/ತಳಮಳ/ತಲ್ಲಣ/ಆತಂಕ/ಉಮ್ಮಳ ; ಆಹಾರ=ಕೂಳು/ಅನ್ನ/ಉಣ್ಣುವ ತಿನ್ನುವ ಕುಡಿಯುವ ವಸ್ತು ; ಕೊಳ್=ತೆಗೆದುಕೊ/ಸ್ವೀಕರಿಸು/ಪಡೆಯುವುದು; ಅಲ್ಲಾ=ಅಲ್ಲವೇ ; ಕೊಂಡೆಯಲ್ಲಾ=ಪಡೆದುಕೊಂಡೆಯಲ್ಲವೇ/ತೆಗೆದುಕೊಂಡೆಯಲ್ಲವೇ; 'ಆಹಾರಗೊಂಡೆ' ಎಂಬ ಪದಕಂತೆಯು 'ಗುರಿಯಾದೆ/ಹೊಂದಿದೆ/ನಿನ್ನದಾಗಿಸಿಕೊಂಡೆ' ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಟ್ಟು;

ದುಗುಡವನಾಹಾರಗೊಂಡೆ=ಮಾನಸಿಕ ಒತ್ತಡಕ್ಕೆ ಒಳಗಾಗಿ ಆತಂಕ, ತಲ್ಲಣ, ಆಕ್ರೋಶ, ಹೆದರಿಕೆ, ಕಳವಳದ ಒಳಮಿಡಿತಗಳಿಂದ ತೊಳಲಾಡುತ್ತಿರುವೆ;

**ಜೀವನದಲ್ಲಿ ಯಾವುದೇ ಬಗೆಯ ಅಡೆತಡೆಗಳು ಉಂಟಾದಾಗ ವ್ಯಕ್ತಿಯು ಕಂಗಾಲಾಗಿ ಹೆದರಿ ಮುದುಡಿಕೊಳ್ಳದೆ, ಕೆಚ್ಚು ಮತ್ತು ವಿವೇಕದಿಂದ ಸಮಸ್ಯೆಯನ್ನು ಎದುರಿಸಿ ಮುನ್ನಡೆಯಬೇಕು. ಇಲ್ಲದಿದ್ದರೆ ಮಾನಸಿಕ ಒತ್ತಡಕ್ಕೆ ಒಳಗಾಗಿ ವ್ಯಕ್ತಿಯು ನಿರಂತರವಾದ ಸಂಕಟದಿಂದ ನರಳತೊಡಗುತ್ತಾನೆ.**



## 24. ನೋಡೂದ ನೋಡಲರಿಯದೆ ಕೆಟ್ಟಿತ್ತೀ ಲೋಕವೆಲ್ಲ. (585–183)

ನೋಡು=ಕಾಣು/ತಿಳಿ/ಅರಿ; ನೋಡೂದ=ನೋಡಬೇಕಾದುದನ್ನು/ತಿಳಿಯಬೇಕಾದುದನ್ನು; ನೋಡಲ್+ಅರಿಯದೆ; ಅರಿಯದೆ=ತಿಳಿಯದೆ;

ಕೆಟ್ಟು+ಇತ್ತು+ಈ; ಕೆಡು=ಅಳಿ/ನಾಶವಾಗು/ಹಾಳಾಗು/ಹದಗೆಡು; ಕೆಟ್ಟಿತ್ತು=ಹಾಳಾಯಿತು/ನಾಶವಾಯಿತು; ಲೋಕ+ಎಲ್ಲ; ಈ ಲೋಕವೆಲ್ಲ=ಇಡೀ ಜಗತ್ತು/ಜನಸಮುದಾಯ;

'ನೋಡುವುದು' ಎಂಬ ಪದ ಒಂದು ರೂಪಕವಾಗಿ ಬಳಕೆಯಾಗಿದೆ. ಮಾನವ ಸಮುದಾಯದ ಬದುಕಿನಲ್ಲಿ ಒಲವು ನಲಿವು ನೆಮ್ಮದಿಗಿಂತಲೂ ನೋವು ಸಂಕಟಗಳೇ ಹೆಚ್ಚಾಗಿವೆ. ಹಸಿವು, ಬಡತನ, ರೋಗರುಜಿನಗಳಿಂದ ನರಳುವುದರ ಜತೆಗೆ ಕೊಲೆ ಸುಲಿಗೆ ಹಿಂಸೆಯ ನಡೆನುಡಿಗಳಿಂದ ಮಾನವರ ಬಾಳು ದುರಂತಮಯವಾಗಿದೆ.

ಇದಕ್ಕೆ ಕಾರಣವೇನೆಂಬುದನ್ನು ನೋಡಿದಾಗ ಜಾತಿ, ಮತ ಮತ್ತು ದೇವರ ಹೆಸರಿನಲ್ಲಿ ಮಾನವ ಸಮುದಾಯ ಮಾಡಿಕೊಂಡಿರುವ ಕಟ್ಟುಪಾಡುಗಳು ಮಾನವರನ್ನು ನೂರೆಂಟು ಬಗೆಯ ಸಾಮಾಜಿಕ ಗುಂಪುಗಳನ್ನಾಗಿ ವಿಂಗಡಿಸಿ, ಪರಸ್ಪರ ವ್ಯಕ್ತಿಗಳ ನಡುವೆ ಅಸೂಯೆ, ಅಪನಂಬಿಕೆ ಮತ್ತು ಹಗೆತನವನ್ನುಂಟುಮಾಡಿವೆ. ಇದರಿಂದಾಗಿ ಮಾನವರ ದಿನನಿತ್ಯದ ಬದುಕಿನಲ್ಲಿ ನೂರಾರು ಬಗೆಯ ಕಲಹದ ಮತ್ತು ಸೇಡಿನ ಸಂಗತಿಗಳು ಎಲ್ಲೆಡೆಯು ಕಂಡುಬರುತ್ತಿವೆ.

ಮಾನವ ಸಮುದಾಯದ ಸಂಕಟಕ್ಕೆ ಮಾನವರ ಕೆಟ್ಟ ನಡೆನುಡಿಗಳೇ ಕಾರಣವೆಂಬುದನ್ನು ಅರಿತುಕೊಂಡು, ಪ್ರತಿಯೊಬ್ಬ ವ್ಯಕ್ತಿಯು ತನಗೆ ಮತ್ತು ತನ್ನ ಕುಟುಂಬಕ್ಕೆ ಒಳಿತನ್ನು ಬಯಸುವಂತೆಯೇ ಇತರರಿಗೆ ಒಳಿತನ್ನು ಮಾಡುವಂತಹ ಒಳ್ಳೆಯ ನಡೆನುಡಿಗಳಿಂದ ಬಾಳುವುದನ್ನು ಕಲಿಯುವುದು ಮತ್ತು ತನ್ನ ಬದುಕಿನೊಡನೆ ಇಡೀ ಮಾನವ ಸಮುದಾಯದ ಬದುಕು ಹೆಣೆದುಕೊಂಡಿದೆ ಎಂಬುದನ್ನು ಅರಿತುಕೊಂಡು ಪರಸ್ಪರ ಪ್ರೀತಿ, ಕರುಣೆ ಮತ್ತು ಗೆಳೆತನದ ನಡೆನುಡಿಗಳಿಂದ ಸಮಾಜದಲ್ಲಿ ಬಾಳಬೇಕೆಂಬುದನ್ನು ಮನಗಾಣುವುದು ಎಂಬ ತಿರುಳಿನಲ್ಲಿ 'ನೋಡುವುದು' ಎಂಬ ಪದ ಬಳಕೆಯಾಗಿದೆ.



**25. ಪ್ರಣತೆಯೂ ಇದೆ ಬತ್ತಿಯೂ ಇದೆ**
**ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೊ**
**ಗುರುವಿದೆ ಲಿಂಗವಿದೆ**
**ಶಿಷ್ಯನ ಸುಜ್ಞಾನ ಅಂಕುರಿಸದನ್ನಕ್ಕರ**
**ಭಕ್ತಿ ಎಲ್ಲಿಯದೊ. (78/144)**

ಪ್ರಣತೆ=ಹಣತೆ/ಮಣ್ಣಿನ ದೀಪ; ಬತ್ತಿ=ದೀಪದಲ್ಲಿ ಇಡುವುದಕ್ಕಾಗಿ ಹತ್ತಿಯ ಎಳೆಗಳನ್ನು ಹೊಸೆದು ಮಾಡಿದ ವಸ್ತು;

ಜ್ಯೋತಿ=ಬೆಳಕು/ಕಾಂತಿ/ಪ್ರಕಾಶ; ಬೆಳಗುವಡೆ=ದೀಪ ಹೊತ್ತಿಕೊಂಡು ಬೆಳಕನ್ನು ನೀಡಬೇಕಾದರೆ;

ತೈಲ+ಇಲ್ಲದೆ; ತೈಲ=ಎಳ್ಳು, ಕಡಲೆಕಾಯಿ ಮುಂತಾದ ಕಾಳುಗಳನ್ನು ಅರೆದು ತೆಗೆದ ಎಣ್ಣೆ; ಪ್ರಭೆ=ಬೆಳಕು/ಕಾಂತಿ/ಪ್ರಕಾಶ/ಕಿರಣ; ತಾನ್+ಎಲ್ಲಿಯದೊ; ತಾನ್=ಅದು; ತಾನೆಲ್ಲಿಯದೊ=ಯಾವ ರೀತಿಯಲ್ಲಿ ಅದು ಬೆಳಕನ್ನು ಚೆಲ್ಲುತ್ತದೆ/ಬೀರುತ್ತದೆ;

ಗುರು+ಇದೆ; ಗುರು=ಜನಸಮುದಾಯದ ಮನದಲ್ಲಿ ಅರಿವನ್ನು ಮೂಡಿಸಿ, ವ್ಯಕ್ತಿಗಳ ನಡೆನುಡಿಗಳನ್ನು ತಿದ್ದಿ ತೀಡಿ, ಅವರಲ್ಲಿ ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸುವ ವ್ಯಕ್ತಿ; ಲಿಂಗ+ಇದೆ; ಲಿಂಗ=ಶಿವನ ಸಂಕೇತವಾದ ವಿಗ್ರಹ ;

ಶಿಷ್ಯ=ಗುರುವಿನ ಮೂಲಕ ವಿದ್ಯೆಯನ್ನು ಕಲಿಯುವವನು; ಸುಜ್ಞಾನ=ಜೀವನದಲ್ಲಿ ಯಾವುದು ಸರಿ–ಯಾವುದು ತಪ್ಪು; ಯಾವುದು ನೀತಿ–ಯಾವುದು ಅನೀತಿ; ಯಾವುದು ದಿಟ–ಯಾವುದು ಸಟೆ ಎಂಬುದನ್ನು ಮನದಟ್ಟು ಮಾಡಿಕೊಂಡು, ಒಳ್ಳೆಯ ರೀತಿಯಲ್ಲಿ ಬಾಳಲು ಅಗತ್ಯವಾದ ಅರಿವು/ತಿಳುವಳಿಕೆ;

ಅಂಕುರಿಸದ+ಅನ್ನಕ್ಕರ; ಅಂಕುರ=ಮೊಳಕೆ/ಚಿಗುರು; ಅಂಕುರಿಸು=ಮೊಳಕೆಯೊಡೆಯುವುದು/ಚಿಗುರೊಡೆಯುವುದು; ಅನ್ನಕ್ಕರ=ಅಲ್ಲಿಯ ವರೆಗೆ/ಅಲ್ಲಿಯ ತನಕ; ಭಕ್ತಿ=ಒಳ್ಳೆಯ ನಡೆನುಡಿಗಳಿಂದ ಶಿವನನ್ನು ಪೂಜಿಸುವುದು; ಎಲ್ಲಿಯದೊ=ಎಲ್ಲಿ ಇರುವುದು/ಇರುವುದಕ್ಕೆ ಹೇಗೆ ತಾನೆ ಆಗುತ್ತದೆ;

**ಹಣತೆಯಲ್ಲಿ ಬತ್ತಿ ಮತ್ತು ಎಣ್ಣೆಯನ್ನು ಹಾಕಿ, ಬೆಂಕಿಯ ಕುಡಿಯನ್ನು ತಾಕಿಸಿದಾಗ ಜ್ಯೋತಿಯು ಬೆಳಗುತ್ತದೆ. ಇವುಗಳಲ್ಲಿ ಯಾವುದೊಂದು ಇಲ್ಲದಿದ್ದರೂ ಬೆಳಕು ಕಂಗೊಳಿಸುವುದಿಲ್ಲ. ದೀಪ ಬೆಳಗುವ ಈ ಸಂಗತಿಯನ್ನು ಒಂದು ರೂಪಕವನ್ನಾಗಿ ಬಳಸಿಕೊಂಡು ಲಿಂಗ, ಗುರು ಮತ್ತು ಶರಣರ ನಡುವಣ ನಂಟಿನ ರೀತಿಯನ್ನು ಮತ್ತು ಶರಣನ ವ್ಯಕ್ತಿತ್ವ ರೂಪುಗೊಳ್ಳುವ ಬಗೆಯನ್ನು ತಿಳಿಸಲಾಗಿದೆ.**

ಶಿವಶರಣನ ಮಯ್ ಮನದಲ್ಲಿ ಒಳ್ಳೆಯ ಅರಿವು ಮೂಡದಿದ್ದರೆ, ಆತ ಮಾಡುವ ಲಿಂಗಪೂಜೆಯಿಂದ ಇಲ್ಲವೇ ಗುರುಸೇವೆಯಿಂದ ಯಾವುದೇ ಪ್ರಯೋಜನವಿಲ್ಲ. ಆದ್ದರಿಂದ ಶಿವಶರಣನು ಒಳ್ಳೆಯ ಅರಿವನ್ನು ಪಡೆಯುವುದರ ಮೂಲಕ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕೆಂಬ ಎಚ್ಚರವನ್ನು ಹೊಂದಿರಬೇಕು ಎಂಬುದನ್ನು ಈ ನುಡಿಗಳು ಸೂಚಿಸುತ್ತಿವೆ.



26. ಬಲ್ಲತನವನೇರಿಸಿಕೊಂಡು
ಅಲ್ಲದಾಟವನಾಡಿದಡೆ
ಬಲ್ಲತನಕ್ಕೆ ಭಂಗವಾಯಿತ್ತು. (329/164)

ಬಲ್ಲತನ+ಅನ್+ಏರಿಸಿಕೊಂಡು; ಬಲ್ಲತನ=ಶಕ್ತಿ/ಕಸುವು/ಅರಿವು/ತಿಳುವಳಿಕೆ; ಅನ್=ಅನ್ನು; ಇಲ್ಲದ್ದನ್ನು ಇದೆಯೆಂದು ಹೇಳಿಕೊಂಡು ಏರಿಸಿಕೊಂಡು= ಆರೋಪಿಸಿಕೊಂಡು

ಬಲ್ಲತನವನೇರಿಸಿಕೊಂಡು=ವ್ಯಕ್ತಿಯು ತನ್ನನ್ನು ತಾನೆ ಎಲ್ಲರಿಗಿಂತಲೂ ದೊಡ್ಡವನು/ ತಿಳಿದವನು/ಎಲ್ಲರನ್ನೂ ಮುನ್ನಡೆಸಬಲ್ಲ ಶಕ್ತಿಯಿರುವವನು ಎಂದು ಮನದಲ್ಲಿ ಅಂದುಕೊಂಡು;

ಅಲ್ಲದ+ಆಟ+ಅನ್+ಆಡಿದಡೆ; ಅಲ್ಲ=ಬೇಡ/ಆಗದಿರುವುದು; ಆಟ=ಕೆಲಸ/ಕಾರ್ಯ/ ವ್ಯವಹಾರ; ಆಡಿದಡೆ=ಮಾಡತೊಡಗಿದರೆ; ಅಲ್ಲದಾಟ=ಬೇಡದ ಕೆಲಸ/ಮಾಡಬಾರದ ಕಾರ್ಯ; ಅಲ್ಲದಾಟವನಾಡಿದಡೆ=ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವ ಕೆಟ್ಟ ಕೆಲಸಗಳನ್ನು ಮಾಡತೊಡಗಿದರೆ;

ಬಲ್ಲತನಕ್ಕೆ=ವ್ಯಕ್ತಿಯು ಹೊಂದಿರುವ ಅರಿವಿನ ಇಲ್ಲವೇ ದೊಡ್ಡತನದ ವ್ಯಕ್ತಿತ್ವಕ್ಕೆ ; ಭಂಗ+ಆಯಿತ್ತು; ಭಂಗ=ಅಪಮಾನ/ಸೋಲು/ಪರಾಜಯ/ತೇಜಸ್ಸು ಹಾನಿಗೊಳ್ಳುವುದು/ ಕುಂದು; ಆಯಿತ್ತು=ಉಂಟಾಗುವುದು;

ರಾಜ್ಯವನ್ನಾಳುವ ಆಡಳಿತಗಾರರಲ್ಲಿ, ಜಾತಿ ಮತ ದೇವರ ಹೆಸರಿನಲ್ಲಿ ಕಟ್ಟಿಕೊಂಡಿರುವ ಸಾಮಾಜಿಕ ಒಕ್ಕೂಟಗಳ ನೇತಾರರಲ್ಲಿ, ಗುರುಗಳು ಹಾಗೂ ದೇವ ಮಾನವರಲ್ಲಿ ಮತ್ತು ಕುಟುಂಬವನ್ನು ನಡೆಸುವ ಹೊಣೆಯನ್ನು ಹೊತ್ತಿರುವ ಹಿರಿಯರಲ್ಲಿ ಕೆಲವರು ಇತರರಿಗಿಂತ ತಾವೇ ದೊಡ್ಡವರೆಂದು, ಎಲ್ಲವನ್ನು ಬಲ್ಲವರೆಂದು, ಯಾವುದೇ ಬಗೆಯ ಕೆಲಸವನ್ನು ಮಾಡಬಲ್ಲ ಮತ್ತು ಎಲ್ಲರನ್ನೂ ಮುನ್ನಡೆಸಬಲ್ಲ ಶಕ್ತಿಯುಳ್ಳವರೆಂದು ಅಹಂಕಾರದಿಂದ ಮೆರೆಯುತ್ತಿರುತ್ತಾರೆ.

ಜವಾಬ್ದಾರಿಯುತವಾದ ಹುದ್ದೆಗಳಲ್ಲಿರುವ ಇಂತಹ ವ್ಯಕ್ತಿಗಳು ತಮ್ಮ ಹೊಣೆಗಾರಿಕೆಯನ್ನು ಮರೆತು, ಕಪಟತನದಿಂದ ಮತ್ತು ಕ್ರೂರತನದಿಂದ ಜನಸಮುದಾಯದ ಬದುಕಿನ ನೆಮ್ಮದಿಯನ್ನು ಹಾಳು ಮಾಡುವಂತಹ ಕೆಟ್ಟ ಕೆಲಸಗಳನ್ನು ಮಾಡತೊಡಗಿದಾಗ, ಅವರ ಹಿರಿತನ ಇಲ್ಲವೇ ವ್ಯಕ್ತಿತ್ವ ಕುಗ್ಗಿ ಹಾಳಾಗುವುದರ ಜತೆಗೆ ಜನರ ಮತ್ತು ಸಮಾಜದ ಬದುಕು ದುರಂತಕ್ಕೆ ಗುರಿಯಾಗುತ್ತದೆ.



27. ಭ್ರಾಂತಿನ ಭ್ರಮೆಯೊಳಗೆ
ಬಳಲುತ್ತಿರಲು
ಮಾತಿನ ಮಾತಿನೊಳಗೆ
ಅರಿವೆಂಬುದುಂಟೆ. (518-178)

ಭ್ರಾಂತು=ತಪ್ಪು ತಿಳಿವಳಿಕೆ/ತಾನು ತಿಳಿದಿರುವುದೇ ಸರಿ/ವಾಸ್ತವ/ಸತ್ಯ ಎನ್ನುವ ಒಳಮಿಡಿತ; ಭ್ರಾಂತಿನ=ತಪ್ಪು ತಿಳುವಳಿಕೆಯಿಂದ ಕೂಡಿದ; ಭ್ರಮೆ+ಒಳಗೆ; ಭ್ರಮೆ=ಇರುವುದನ್ನು ಇಲ್ಲವೆಂದು, ಇಲ್ಲದಿರುವುದನ್ನು ಇದೆಯೆಂದು ನಂಬಿರುವುದು; ಬಳಲುತ್ತ+ಇರಲು; ಬಳಲು=ಆಯಾಸಗೊಳ್ಳುವುದು/ದಣಿಯುವುದು/ಮಯ್ ಮನದ ಕಸುವು ಕುಗ್ಗುವುದು; ಇರಲು=ಇದ್ದಾಗ/ಇರುವಾಗ;

ಮಾತು=ನುಡಿ/ಸೊಲ್ಲು; ಮಾತಿನ+ಒಳಗೆ; ಅರಿವು+ಎಂಬುದು+ಉಂಟೆ; ಅರಿವು=ತಿಳುವಳಿಕೆ; ಎಂಬುದು=ಎನ್ನುವುದು; ಉಂಟೆ=ಇದೆಯೇ/ಇರುತ್ತದೆಯೇ;

ಮಾತಿನ ಮಾತಿನೊಳಗೆ ಅರಿವೆಂಬುದುಂಟೆ=ಮಾತಿಗೆ ಮಾತನ್ನು ಜೋಡಿಸಿಕೊಂಡು ಇಲ್ಲವೇ ಮಾತಿಗೆ ಮಾತನ್ನು ಬೆಳೆಸಿಕೊಂಡು ಆಡುವುದರಿಂದ ಅರಿವು ದೊರೆಯುವುದಿಲ್ಲ;

**ಯಾವುದೇ ಸಂಗತಿಯ ಬಗೆಗಿನ ವಾಸ್ತವವನ್ನು ತಿಳಿದುಕೊಳ್ಳದೆ, ತಮಗೆ ಗೊತ್ತಿರುವುದೇ ಸರಿಯೆಂದು ವಾದ ಮಾಡುವ ವ್ಯಕ್ತಿಗಳ ಮಾತಿನಲ್ಲಿ ಅರಿವು ಕಂಡುಬರುವುದಿಲ್ಲ.**



## 28. ಮದ್ದನರೆದು ಫಲವೇನು ಪ್ರಯೋಗಿಸಿಕೊಂಡಲ್ಲದೆ ರೋಗ ಮಾಣದು (1416/270)

ಮದ್ದು+ಅನ್+ಅರೆದು; ಮದ್ದು=ಮರಗಿಡಬಳ್ಳಿಯ ಎಲೆ/ತೊಗಟೆ/ಬೇರುಗಳ ಸಾರವನ್ನು ಒಳಗೊಂಡು ತಯಾರಿಸಿದ ವಸ್ತು. ಇದನ್ನು ರೋಗವನ್ನು ವಾಸಿಮಾಡುವುದಕ್ಕೆ ಬಳಸುತ್ತಾರೆ ; ಅರೆ=ಪುಡಿ ಮಾಡು/ನುಣ್ಣಗೆ ಮಾಡು/ತೇಯುವುದು; ಅರೆದು=ಪುಡಿ ಮಾಡಿ/ತೇದು; ಫಲ+ಏನು; ಫಲ=ಪ್ರಯೋಜನ; ಏನು=ಯಾವುದು;

ಪ್ರಯೋಗಿಸಿ+ಕೊಂಡ+ಅಲ್ಲದೆ; ಪ್ರಯೋಗ=ಬಳಕೆ/ಉಪಯೋಗ; ಅಲ್ಲದೆ=ಹಾಗೆ ಮಾಡದೆ; ರೋಗ=ಬೇನೆ/ಕಾಯಿಲೆ/ಜಡ್ಡು; ಮಾಣ್=ವಾಸಿಯಾಗು/ಗುಣವಾಗು/ಬಿಡು; ಮಾಣದು=ವಾಸಿಯಾಗುವುದಿಲ್ಲ/ಗುಣವಾಗುವುದಿಲ್ಲ;

**ಕೇವಲ ಮದ್ದನ್ನು ತಯಾರಿಸಿದ ಮಾತ್ರಕ್ಕೆ ರೋಗ ಗುಣವಾಗುವುದಿಲ್ಲ. ಅದನ್ನು ಸರಿಯಾಗಿ ಬಳಸಿದಾಗ ಮಾತ್ರ ರೋಗ ನಿವಾರಣೆಯಾಗುತ್ತದೆ. ಅಂತೆಯೇ ಅರಿವನ್ನು ಪಡೆದ ಮಾತ್ರಕ್ಕೆ/ವಿದ್ಯೆಯನ್ನು ಕಲಿತ ಮಾತ್ರಕ್ಕೆ ವ್ಯಕ್ತಿಯ ಬದುಕು ಉತ್ತಮಗೊಳ್ಳುವುದಿಲ್ಲ. ಪಡೆದ ಅರಿವಿನಿಂದ/ಕಲಿತ ವಿದ್ಯೆಯಿಂದ ವ್ಯಕ್ತಿಯು ಒಳ್ಳೆಯ ನಡೆನುಡಿಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬಾಳುವಂತಾದಾಗ ಮಾತ್ರ ವ್ಯಕ್ತಿಗೆ ಮತ್ತು ಸಮಾಜಕ್ಕೆ ಒಳಿತಾಗುತ್ತದೆ.**



29. ಮನದಲ್ಲಿ ಕ್ರೋಧ
ವಚನದಲ್ಲಿ ಕಿಂಕಲ
ಲಿಂಗದ ವಾರ್ತೆ ನಿನಗೇಕೆ ಹೇಳಾ. (1133/242)

ಮನ+ಅಲ್ಲಿ; ಮನ=ಮನಸ್ಸು; ಕ್ರೋಧ=ಸಿಟ್ಟು/ಕೋಪ/ಆಕ್ರೋಶ; ಮನದಲ್ಲಿ ಕ್ರೋಧ=ಇತರರಿಗೆ ಕೇಡನ್ನು ಬಗೆಯಬೇಕೆಂಬ ಕೆಟ್ಟ ಉದ್ದೇಶ/ಇತರರ ಒಳಿತನ್ನು ಕಂಡು ಸಹಿಸಲಾರದ ಹೊಟ್ಟೆಕಿಚ್ಚು;

ವಚನ+ಅಲ್ಲಿ; ವಚನ=ಮಾತು/ನುಡಿ/ಸೊಲ್ಲು; ಕಿಂಕಲ=ವಿನಯ/ನಮ್ರತೆ/ಕೋಮಲತೆ/ತಗ್ಗಿ ಬಗ್ಗಿ ನಡೆಯುವವನು;

ವಚನದಲ್ಲಿ ಕಿಂಕಲ=ಬಹಿರಂಗದಲ್ಲಿ ಜನರ ಮುಂದೆ ಆಡುವ ಮಾತುಗಳು ಒಲವು ನಲಿವು ನಯ ವಿನಯದಿಂದ ಕೂಡಿ, ಬೇರೆಯವರ ಒಳಿತನ್ನೇ ಕುರಿತು ಚಿಂತಿಸುವಂತೆ ಇರುವುದು;

ಲಿಂಗ=ಶಿವನ ಸಂಕೇತವಾದ ವಿಗ್ರಹ; ವಾರ್ತೆ=ಸುದ್ದಿ/ಸಮಾಚಾರ/ಸಂಗತಿ;

'ಲಿಂಗದ ವಾರ್ತೆ' ಎಂಬ ನುಡಿಗಟ್ಟು ಒಂದು ರೂಪಕವಾಗಿ ಬಳಕೆಗೊಂಡಿದೆ. ಶಿವನನ್ನು ಕುರಿತ ಸುದ್ದಿ ಎಂದರೆ ಒಳ್ಳೆಯ ನಡೆನುಡಿಗಳಿಂದ ವ್ಯಕ್ತಿಯು ತನ್ನ ಬದುಕನ್ನು ರೂಪಿಸಿಕೊಳ್ಳುವುದರ ಜತೆಜತೆಗೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವುದು;

ನಿನಗೆ+ಏಕೆ; ಏಕೆ=ಯಾವುದಕ್ಕಾಗಿ ಬೇಕು; ಹೇಳ್+ಆ; ಹೇಳು=ಉತ್ತರಿಸು/ನುಡಿ; ಇಬ್ಬರು ವ್ಯಕ್ತಿಗಳ ನಡೆನುಡಿಗಳು ಬೇರೆ ಬೇರೆ ರೀತಿಯಲ್ಲಿದ್ದಾಗ, "ಅವನ ಸುದ್ದಿ ನಿನಗ್ಯಾಕಪ್ಪ, ಅವನ ದಾರಿಯೇ ಬೇರೆ, ನಿನ್ನ ದಾರಿಯೇ ಬೇರೆ" ಎಂಬ ಮಾತನ್ನು ಕೇಳುತ್ತಿರುತ್ತೇವೆ.

**ಯಾವ ವ್ಯಕ್ತಿಯು ತನ್ನ ಅಂತರಂಗದ ಮನದಲ್ಲಿ ಇತರರಿಗೆ ಕೇಡನ್ನು ಬಗೆಯಬೇಕೆಂಬ ಕೆಟ್ಟ ಉದ್ದೇಶದಿಂದ ಕೂಡಿ, ಬಹಿರಂಗದಲ್ಲಿ ಮಾತ್ರ ಸತ್ಯ, ನೀತಿ, ನ್ಯಾಯದ ಮಾತುಗಳನ್ನು ಬಹಳ ವಿನಯದಿಂದ ನುಡಿಯುತ್ತಿರುತ್ತಾನೋ, ಅಂತಹ ವ್ಯಕ್ತಿಯು ಮಾಡುವ ಲಿಂಗ ಪೂಜೆಯಿಂದ ಇಲ್ಲವೇ ಲಿಂಗದ ಮಹಿಮೆಯನ್ನು ಹಾಡಿಹೊಗಳುವುದರಿಂದ ಯಾವ ಪ್ರಯೋಜನವೂ ಇಲ್ಲ. ಏಕೆಂದರೆ ದೇವರು ಮೆಚ್ಚುವುದು ವ್ಯಕ್ತಿಯ ಒಳ್ಳೆಯ ನಡೆನುಡಿಗಳನ್ನು ಮಾತ್ರ**



30. ಮರನುಳ್ಳನ್ನಕ್ಕರ
ಎಲೆ ಉಲಿವುದು ಮಾಬುದೆ
ಶರೀರ ಉಳ್ಳನ್ನಕ್ಕರ
ವಿಕಾರ ಮಾಬುದೆ. (487–176)

ಮರ+ಉಳ್+ಅನ್ನಕ್ಕರ; ಮರ=ತರು/ಸಸ್ಯ; ಉಳ್=ಇರು; ಅನ್ನಕ್ಕರ=ವರೆಗೆ/ತನಕ; ಉಳ್ಳನ್ನಕ್ಕರ=ಇರುವ ತನಕ/ಇರುವವರೆಗೆ; ಎಲೆ=ಮರದ ಕೊಂಬೆರೆಂಬೆಗಳಲ್ಲಿ ಬಿಟ್ಟಿರುವ ಎಸಳು/ದಳ; ಉಲಿ=ದನಿ/ಶಬ್ದ; ಉಲಿವುದು=ದನಿಗೆಯ್ಯುವುದು/ಶಬ್ದ ಮಾಡುವುದು; ಮಾಣ್=ಬಿಡು/ನಿಲ್ಲಿಸು/ತೊರೆ; ಮಾಣ್ಬುದೆ>ಮಾಬುದೆ; ಮಾಬುದೆ=ನಿಲ್ಲಿಸುವುದೆ/ಬಿಡುತ್ತದೆಯೆ;

ಶರೀರ=ಮಯ್/ದೇಹ; ವಿಕಾರ=ಬದಲಾವಣೆ/ವ್ಯತ್ಯಾಸ; ಶರೀರ ಉಳ್ಳನ್ನಕ್ಕರ ವಿಕಾರ ಮಾಬುದೆ=ಶರೀರದಲ್ಲಿ ಜೀವ ಇರುವ ತನಕ ಎಂದರೆ ಸಾವು ಬರುವವರೆಗೂ ಒಂದಲ್ಲ ಒಂದು ಬಗೆಯ ಒಳಮಿಡಿತಗಳು ವ್ಯಕ್ತಿಯ ಮಯ್ ಮನಗಳಲ್ಲಿ ಎಡೆಬಿಡದೆ ಮಿಡಿಯುತ್ತಿರುತ್ತವೆ.

**ಜೀವಂತವಾಗಿರುವ ಮರದ ಕೊಂಬೆರೆಂಬೆಗಳಲ್ಲಿನ ಎಲೆಗಳು ಹೇಗೆ ಗಾಳಿಯ ಬಡಿತಕ್ಕೆ ಅಲ್ಲಾಡುತ್ತ ಪಟಪಟನೆ ದನಿಯನ್ನು ಮಾಡುತ್ತಿರುತ್ತವೆಯೋ ಅಂತೆಯೇ ಶರೀರದಲ್ಲಿ ಜೀವವಿರುವ ತನಕ ಪ್ರತಿಯೊಬ್ಬ ವ್ಯಕ್ತಿಯ ಮನದಲ್ಲಿ ಒಳ್ಳೆಯ ಮತ್ತು ಕೆಟ್ಟ ಒಳಮಿಡಿತಗಳು ತುಡಿಯುತ್ತಲೇ ಇರುತ್ತವೆ. ಆದ್ದರಿಂದ ವ್ಯಕ್ತಿಯು ತನ್ನ ಜೀವಿತದ ಕೊನೆ ಗಳಿಗೆಯ ತನಕ ಕೆಟ್ಟ ಒಳಮಿಡಿತಗಳನ್ನು ಹತ್ತಿಕ್ಕಿಕೊಂಡು ಬಾಳುವ ಎಚ್ಚರವನ್ನು ಹೊಂದಿರಬೇಕು.**



## 31. ಮಾತೆಂಬುದು ಜ್ಯೋತಿರ್ಲಿಂಗ (1444-273)

ಮಾತು+ಎಂಬುದು; ಮಾತು=ನುಡಿ/ಸೊಲ್ಲು; ಎಂಬುದು=ಎನ್ನುವುದು; ಜ್ಯೋತಿ=ಬೆಳಕು/ಕಾಂತಿ/ಪ್ರಕಾಶ/ತೇಜಸ್ಸು/ದೀವಿಗೆ/ದೀಪ; ಲಿಂಗ=ಶಿವನ ಸಂಕೇತವಾದ ವಿಗ್ರಹ;

ಜ್ಯೋತಿರ್ಲಿಂಗ=ಕಾಂತಿಯಿಂದ ಬೆಳಗುತ್ತಾ, ಎಲ್ಲೆಡೆ ಬೆಳಕಿನ ಕಿರಣಗಳನ್ನು ಹರಡುತ್ತಿರುವ ಲಿಂಗ; 'ಜ್ಯೋತಿರ್ಲಿಂಗ' ಎಂಬ ಪದವನ್ನು ಒಂದು ರೂಪಕವಾಗಿ ಬಳಸಲಾಗಿದೆ.

**ವ್ಯಕ್ತಿಯು ಆಡುವ ಮಾತುಗಳನ್ನು ಬೆಳಗುತ್ತಿರುವ ಲಿಂಗಕ್ಕೆ ಹೋಲಿಸಲಾಗಿದೆ. ಲಿಂಗದಿಂದ ಹೊರಹೊಮ್ಮುತ್ತಿರುವ ಬೆಳಕಿನ ಕಿರಣಗಳು ಸುತ್ತಮುತ್ತಲಿನ ಕತ್ತಲೆಯನ್ನು ನಿವಾರಿಸಿ, ವ್ಯಕ್ತಿಯ ಕಣ್ಣ ಮುಂದಿರುವ ವಸ್ತುಗಳನ್ನು ಮತ್ತು ಜೀವಿಗಳನ್ನು ಸರಿಯಾಗಿ ಕಾಣುವುದಕ್ಕೆ ನೆರವಾಗುತ್ತವೆಯೋ, ಅಂತೆಯೇ ವ್ಯಕ್ತಿಯು ಆಡುವ ಮಾತುಗಳು ಕೇಳುಗರ ಮನದ ಆತಂಕ, ಕಳವಳ, ನೋವನ್ನು ನಿವಾರಿಸಿ ಕೇಳುಗರ ಮನಸ್ಸಿಗೆ ಮುದವನ್ನು ಮತ್ತು ಅರಿವನ್ನು ಮೂಡಿಸುವಂತಿರಬೇಕು. ವ್ಯಕ್ತಿಯು ಆಡುವ ಮಾತುಗಳು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟುಮಾಡುವಂತಿರಬೇಕು.**



## 32. ಮಾತಿನ ಮಾತಿನ ಮಹಂತರು ಹಿರಿಯರೆ. (230–156)

ಮಾತು=ನುಡಿ/ಸೊಲ್ಲು; ಮಹಂತ=ಒಲವು, ಆದರ, ಮನ್ನಣೆಗೆ ಪಾತ್ರನಾದ ವ್ಯಕ್ತಿ/ದೇಗುಲದ ಆಡಳಿತದ ಉಸ್ತುವಾರಿಯನ್ನು ವಹಿಸಿಕೊಂಡಿರುವ ವ್ಯಕ್ತಿ; ಹಿರಿಯರು=ವಯಸ್ಸು/ತಿಳುವಳಿಕೆ/ಒಳ್ಳೆಯ ನಡೆನುಡಿಗಳಲ್ಲಿ ದೊಡ್ಡವರು;

ಮಾತಿನ ಮಾತಿನ=ಯಾವುದೇ ಒಂದು ಒಳ್ಳೆಯ ಕೆಲಸವನ್ನು ಮಾಡದೆ ಬರಿ ಮಾತನಾಡುವುದರಲ್ಲಿಯೇ ತೊಡಗಿರುವುದು;

ಮಾತಿನ ಮಾತಿನ ಮಹಂತರು=ಸತ್ಯ/ನೀತಿ/ನ್ಯಾಯ/ವಾಸ್ತವದ ನುಡಿಗಳನ್ನು ಒಂದೇ ಸಮನೆ ಆಡುತ್ತ, ತಮ್ಮ ನಿತ್ಯ ಜೀವನದ ಆಚರಣೆಯಲ್ಲಿ ಅವನ್ನು ಅಳವಡಿಸಿಕೊಳ್ಳದೇ, ಮಾತನ್ನು ಚತುರತೆಯಿಂದ ಆಡುವುದನ್ನೇ ಒಂದು ಕಲೆಯನ್ನಾಗಿ ಮಾಡಿಕೊಂಡಿರುವ ವ್ಯಕ್ತಿಗಳು; ಹಿರಿಯರೆ=ದೊಡ್ಡವರೆ/ಮನ್ನಣೆಗೆ ಯೋಗ್ಯರೆ;

**ಕೇಳುವವರ ಮನ ಸೆಳೆಯುವಂತೆ ಇಲ್ಲವೇ ಮನ ಮೆಚ್ಚಿಸುವಂತೆ ಸೊಗಸಾಗಿ ಮಾತನಾಡುವ ವ್ಯಕ್ತಿಗಳನ್ನು ದೊಡ್ಡವರೆಂದು ತಿಳಿಯಬಾರದು. ಏಕೆಂದರೆ ಮಾತಿಗಿಂತ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಕೆಲಸ ದೊಡ್ಡದು. ಆದ್ದರಿಂದ ಯಾವುದೇ ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಅವರು ಮಾಡುವ ಒಳ್ಳೆಯ ಕೆಲಸದಿಂದ ಒರೆಹಚ್ಚಿ ನೋಡಬೇಕೆ ಹೊರತು ಅವರು ಆಡುವ ಸೊಗಸಾದ ಮಾತುಗಳಿಂದಲ್ಲ ಎಂಬ ಅರಿವನ್ನು ಹೊಂದಿರಬೇಕು.**



## 33. ವಾಕು ಪಾಕವಾದಡೇನು
## ಮನ ಪಾಕವಾಗದನ್ನಕ್ಕರ. (175/152)

ವಾಕ್=ಮಾತು/ನುಡಿ/ಸೊಲ್ಲು; ಪಾಕ+ಆದಡೆ+ಏನು; ಪಾಕ=ಬೇಯಿಸಿ ತಯಾರಿಸಿದ ಅನ್ನ/ಇನ್ನಿತರ ಆಹಾರ/ಪರಿಪಕ್ವಗೊಂಡಿರುವುದು/ಹದವಾಗಿರುವುದು/ತುಂಬಾ ಚೆನ್ನಾಗಿರುವುದು;

ವಾಕು ಪಾಕವಾಗುವುದು=ವ್ಯಕ್ತಿಯು ಆಡುವ ಮಾತುಗಳು ಸತ್ಯ ನೀತಿ ನ್ಯಾಯದ ಸಂಗತಿಗಳಿಂದ ಕೂಡಿ, ಕೇಳುವವರ ಮನಸ್ಸಿಗೆ ಮುದವನ್ನು ನೀಡಿ ತನ್ನತ್ತ ಸೆಳೆಯುವಂತಿರುವುದು; ಆದಡೆ=ಆದರೆ; ಆದಡೇನು=ಆಗುವುದರಿಂದ ಉಂಟಾಗುವ ಪ್ರಯೋಜನವೇನು;

ವಾಕು ಪಾಕವಾದಡೇನು=ಸೊಗಸಾಗಿ/ಸುಂದರವಾಗಿ ಮಾತನಾಡುವುದರಿಂದ ಪ್ರಯೋಜನವೇನು;

ಮನ=ಮನಸ್ಸು; ಪಾಕ+ಆಗದ+ಅನ್ನಕ್ಕರ; ಅನ್ನಕ್ಕರ=ಆ ತನಕ/ಆ ವರೆಗೆ; ಪಾಕವಾಗದನ್ನಕ್ಕರ=ಪಾಕಗೊಳ್ಳದಿದ್ದರೆ/ಪಾಕವಾಗದಿರುವ ವರೆಗೆ;

ಮನ ಪಾಕವಾಗುವುದು=ವ್ಯಕ್ತಿಯು ತನ್ನ ಮನದಲ್ಲಿ ತುಡಿಯುತ್ತಿರುವ ಒಳಮಿಡಿತಗಳಲ್ಲಿ ಕೆಟ್ಟದ್ದನ್ನು ಹತ್ತಿಕ್ಕಿಕೊಂಡು ಒಳ್ಳೆಯದನ್ನು ಜೀವನದಲ್ಲಿ ಅಳವಡಿಸಿಕೊಂಡು ಬಾಳುವುದು.

**ವ್ಯಕ್ತಿಯು ತನ್ನ ಮನಸ್ಸಿನಲ್ಲಿ ಒಳ್ಳೆಯ ಆಲೋಚನೆಯನ್ನು ಮತ್ತು ಉದ್ದೇಶವನ್ನು ಹೊಂದಿರದೆ, ಕೇವಲ ಮಾತನ್ನು ಮಾತ್ರ ಸೊಗಸಾಗಿ ಆಡುವುದರಿಂದ ಯಾವ ಪ್ರಯೋಜನವೂ ಇಲ್ಲ. ಏಕೆಂದರೆ ವ್ಯಕ್ತಿಯ ಬದುಕಿನಲ್ಲಿ ಒಳ್ಳೆಯ ನುಡಿಗಳಂತೆಯೇ ಒಳ್ಳೆಯ ನಡೆಯೂ ಇರಬೇಕು.**



34. ವಾಕಿನಿಂ ಪರಬ್ರಹ್ಮವ ನುಡಿವ
ಕುತರ್ಕಿಗಳ ಎಡೆಯಲ್ಲಿ
ಮಾಗಿಯ ಕೋಗಿಲೆಯಂತೆ
ಮೂಗನಾಗಿರಬೇಕು. (1580–286)

ವಾಕ್+ಇನ್+ಇಂ; ವಾಕ್=ನುಡಿ/ಮಾತು; ಪರಬ್ರಹ್ಮ=ಪರಮಾತ್ಮ/ಜಗತ್ತಿನಲ್ಲಿರುವ ಸಕಲ ಜೀವಿಗಳ ಹುಟ್ಟಿಗೆ ಕಾರಣನಾದ ದೇವರು/ವೇದ ವೇದಾಂತಗಳ ವಿಚಾರ;

ನುಡಿವ=ಮಾತನಾಡುವ; ತರ್ಕ=ವ್ಯಕ್ತಿಯು ತಾನು ಹೇಳುತ್ತಿರುವ ವಿಚಾರವೇ ದಿಟವೆಂದು/ಸರಿಯೆಂದು ವಾದಿಸುವುದು; ತರ್ಕಿ=ತರ್ಕವನ್ನು ಮಾಡುವವನು/ವಾದದಲ್ಲಿ ತೊಡಗುವವನು; ಕುತರ್ಕಿ=ತಪ್ಪನ್ನೇ ಸರಿಯೆಂದು, ಸುಳ್ಳನ್ನೇ ಸತ್ಯವೆಂದು, ಕೆಟ್ಟದ್ದನ್ನೇ ಒಳ್ಳೆಯದೆಂದು, ಇಲ್ಲದ್ದನ್ನೇ ಇದೆಯೆಂದು ವಾದಿಸುವ ವ್ಯಕ್ತಿ; ಎಡೆ+ಅಲ್ಲಿ; ಎಡೆ=ಜಾಗ/ನೆಲೆ/ಹತ್ತಿರ/ಸಮೀಪ/ಮುಂದೆ;

ಪರಬ್ರಹ್ಮವ ನುಡಿವ ಕುತರ್ಕಿಗಳು=ಪರಲೋಕದಲ್ಲಿರುವ ಬ್ರಹ್ಮನೆಂಬ ದೇವರಿಂದ ಈ ಜಗತ್ತಿನ ಜೀವರಾಶಿಗಳೆಲ್ಲವೂ ಹುಟ್ಟಿವೆ. ಮಾನವನ ಜೀವನದಲ್ಲಿ ನಡೆಯುವ ಆಗುಹೋಗುಗಳಿಗೆ ಬ್ರಹ್ಮನು ವ್ಯಕ್ತಿಗಳ ಹಣೆಯಲ್ಲಿ ಬರೆದಿರುವ ಬರಹವೇ ಕಾರಣವಾಗಿದೆ. ವ್ಯಕ್ತಿಯು ತನ್ನ ಹಿಂದಿನ ಜನ್ಮಗಳಲ್ಲಿ ಮಾಡಿರುವ ಪಾಪಪುಣ್ಯಗಳಿಗೆ ತಕ್ಕಂತೆ ಈ ಜನ್ಮದಲ್ಲಿ ಸಿರಿತನ ಇಲ್ಲವೇ ಬಡತನವನ್ನು, ನೋವು ನಲಿವನ್ನು ಹೊಂದುತ್ತಾನೆ. ದೇವರ ಇಚ್ಛೆಯಿಲ್ಲದೆ ಒಂದು ಹುಲ್ಲು ಕಡ್ಡಿಯೂ ಈ ಜಗತ್ತಿನಲ್ಲಿ ಅತ್ತಿತ್ತ ಅಲುಗದು ಎಂಬ ಸಂಗತಿಗಳನ್ನು ಹೇಳುವವರನ್ನು ಕುತರ್ಕಿಗಳೆಂದು ಕರೆಯಲಾಗಿದೆ. ಏಕೆಂದರೆ ಇಂತಹ ವಿಚಾರವನ್ನು ಹನ್ನೆರಡನೆಯ ಶತಮಾನದ ಶಿವಶರಣಶರಣೆಯರು ನಿರಾಕರಿಸುತ್ತಾರೆ.

ಮಾನವ ಜೀವಿಯ ಆಗುಹೋಗುಗಳಿಗೆ ಇಲ್ಲವೇ ಏಳುಬೀಳುಗಳಿಗೆ ನಿಸರ್ಗದಲ್ಲಿ ನಡೆಯುವ ಸಂಗತಿಗಳು ಮತ್ತು ಮಾನವರ ನಡೆನುಡಿಗಳೇ ಕಾರಣವಾಗಿವೆ. ಮಾನವರ ಸಿರಿತನ ಬಡತನಕ್ಕೆ ಕಾರಣ ಬ್ರಹ್ಮನು ಬರೆದ ಹಣೆಬರಹವಲ್ಲ; ಸಮಾಜದಲ್ಲಿ ದೊಡ್ಡ ಗದ್ದುಗೆಯಲ್ಲಿರುವವರು ಮತ್ತು ಆಸ್ತಿಪಾಸ್ತಿ ಹಣ ಒಡವೆ ವಸ್ತುಗಳನ್ನು ತಮ್ಮದಾಗಿಸಿ ಕೊಂಡಿರುವ ಸಿರಿವಂತರು ದುಡಿಯುವ ವರ್ಗದ ಜನರನ್ನು ನಾನಾ ರೀತಿಗಳಲ್ಲಿ ವಂಚಿಸುತ್ತಿರುವುದು ಶ್ರಮಜೀವಿಗಳ ಹಸಿವು, ಬಡತನ, ಸಂಕಟಕ್ಕೆ ಕಾರಣವಾಗಿದೆ ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು. ವ್ಯಕ್ತಿಗಳ ಜೀವನದಲ್ಲಿನ ನೋವು ನಲಿವುಗಳಿಗೆ ವ್ಯಕ್ತಿಗಳ ಒಳ್ಳೆಯ ಇಲ್ಲವೇ ಕೆಟ್ಟ ನಡೆನುಡಿಗಳು ಕಾರಣವೇ ಹೊರತು

ಬ್ರಹ್ಮನ ಬರೆದಿರುವ ಹಣೆಬರಹವಲ್ಲ. ಆದ್ದರಿಂದ ಪರಬ್ರಹ್ಮ ತತ್ವವನ್ನು ಕುತರ್ಕವೆಂದು ವಚನಕಾರರು ಅಲ್ಲಗಳೆದಿದ್ದಾರೆ;

ಮಾಗಿ=ಚಳಿಗಾಲ; ಕೋಗಿಲೆ+ಅಂತೆ; ಕೋಗಿಲೆ=ಒಂದು ಬಗೆಯ ಹಕ್ಕಿ. ಈ ಹಕ್ಕಿಯ ಕೂಗು ಕೇಳುವುದಕ್ಕೆ ಇಂಪಾಗಿರುತ್ತದೆ. ಬೇಸಿಗೆಯ ವಸಂತಕಾಲದಲ್ಲಿ ಮಾವಿನ ಚಿಗುರನ್ನು ತಿಂದಾಗ ಕೋಗಿಲೆಯು ಆನಂದದಿಂದ ಹಾಡುತ್ತದೆ ಎಂಬ ಕವಿ ಕಲ್ಪನೆಯಿದೆ. ಇಂತಹ ಕೋಗಿಲೆಯು ಮಾಗಿಯ ಕಾಲದಲ್ಲಿ ಅಂದರೆ ಚಳಿಗಾಲದಲ್ಲಿ ಚಳಿಯನ್ನು ತಡೆಯಲಾರದೆ ಕುಗ್ಗಿಹೋಗಿ ಮೂಕವಾಗಿರುತ್ತದೆ ಎಂಬ ಕಲ್ಪನೆಯು ಜನಮನದಲ್ಲಿದೆ; ಅಂತೆ=ಹಾಗೆ/ಆ ರೀತಿ;

ಮೂಗನ್+ಆಗಿ+ಇರಬೇಕು; ಮೂಗ=ಮಾತನ್ನಾಡಲು ಆಗದವನು/ಮಾತು ಬಾರದವನು; ಮಾಗಿಯ ಕೋಗಿಲೆ ಎಂಬ ನುಡಿಗಟ್ಟು 'ದನಿಯೆತ್ತದೆ ಸುಮ್ಮನಿರಬೇಕು/ಪ್ರತಿಯಾಗಿ ಮಾತನಾಡದಿರಬೇಕು' ಎಂಬ ತಿರುಳಿನ ರೂಪಕವಾಗಿ ಬಳಕೆಯಾಗಿದೆ.

**ಉದ್ದೇಶಪೂರ್ವಕವಾಗಿ ಕಟ್ಟುಕತೆಯನ್ನೇ ದಿಟವೆಂದು ಹೇಳುವ ಕುತರ್ಕಿಗಳನ್ನು ಎಂದೆಂದಿಗೂ ತಿದ್ದುವುದಕ್ಕೆ ಇಲ್ಲವೇ ಅವರಲ್ಲಿ ಅರಿವನ್ನು ಮೂಡಿಸುವುದಕ್ಕೆ ಆಗುವುದಿಲ್ಲ. ಏಕೆಂದರೆ ಕುತರ್ಕಿಗಳು ಸಾಮಾಜಿಕ ವಾಸ್ತವವನ್ನು/ಸತ್ಯವನ್ನು ಎಂದೆಂದಿಗೂ ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಅಂತಹವರ ಜತೆಯಲ್ಲಿ ಮಾತನ್ನಾಡುವುದರ ಬದಲು ಸುಮ್ಮನಿರಬೇಕು.**



## 35. ವ್ರತಗೇಡಿ ವ್ರತಗೇಡಿ ಎಂಬವ ತಾನೆ ವ್ರತಗೇಡಿ. (182/153)

ವ್ರತ+ಕೇಡಿ; ವ್ರತ=ಶಾಸ್ತ್ರದ ಹೊತ್ತಿಗೆಗಳಲ್ಲಿ ಹೇಳಿರುವಂತೆ ಕಟ್ಟುನಿಟ್ಟಾದ ಕ್ರಮದಲ್ಲಿ ಮಾಡುವ ದೇವರ ಪೂಜೆ; ಜಪ, ತಪ, ಉಪವಾಸ, ದೇಹ ದಂಡನೆ ಮುಂತಾದ ಕಟ್ಟುಪಾಡುಗಳ ಮೂಲಕ ಮಾಡುವ ಆಚರಣೆ; ಕೇಡು=ನಾಶ/ಅಳಿವು; ಕೇಡಿ=ಹಾಳು ಮಾಡುವವನು; ವ್ರತಗೇಡಿ=ವ್ರತವನ್ನು ಹಾಳು ಮಾಡುವವನು/ತಪ್ಪು ತಪ್ಪಾಗಿ ಆಚರಿಸುವವನು; ಎಂಬವ=ಎಂದು ಹೇಳುವವನು; ತಾನೆ=ಆ ವ್ಯಕ್ತಿಯೇ;

ದೇವರನ್ನು ಪೂಜಿಸಲು ಶಾಸ್ತ್ರಗಳಲ್ಲಿ ಹೇಳಿರುವ ಮತ್ತು ಹಿಂದಿನಿಂದಲೂ ಜನಸಮುದಾಯದ ಆಚರಣೆಯಲ್ಲಿ ನಡೆದುಬಂದಿರುವ ಕಟ್ಟಲೆಗಳನ್ನು ಹಾಗೂ ಸಂಪ್ರದಾಯಗಳನ್ನು ದೊಡ್ಡದೆಂದು ನಂಬಿರುವ ವ್ಯಕ್ತಿಗೆ ಪೂಜೆಯಲ್ಲಿ ಬಳಸಬೇಕಾದ ವಸ್ತುಗಳು ಮತ್ತು ಪೂಜೆಯನ್ನು ಮಾಡುವ ಆಚರಣೆಗಳು ದೊಡ್ಡದಾಗುತ್ತವೆಯೇ ಹೊರತು, ನಿಜ ಜೀವನದಲ್ಲಿ ವ್ಯಕ್ತಿಗಳ ಒಳ್ಳೆಯ ನಡೆನುಡಿಗಳು ದೊಡ್ಡದಾಗುವುದಿಲ್ಲ. ಆದ್ದರಿಂದಲೇ ಪೂಜೆಯ ಪ್ರತಿಯೊಂದು ಹಂತದಲ್ಲಿಯೂ 'ಮಡಿ ಮಡಿ' ಎಂದು ಬಡಬಡಿಸುತ್ತಾ, ಎಲ್ಲಿ ಮಯ್ಲಿಗೆ ಆಗುವುದೋ ಎಂಬ ಆತಂಕದಿಂದ ಕೂಡಿರುತ್ತಾನೆ.

ವ್ಯಕ್ತಿಯು ತನಗೆ ಒಳಿತನ್ನು ಮಾಡಿಕೊಳ್ಳುವಂತೆಯೇ ಸಹಮಾನವರ ಮತ್ತು ಸಮಾಜದ ಒಳಿತಿಗೆ ನೆರವಾಗುವಂತಹ ನಡೆನುಡಿಗಳ ಆಚರಣೆಯೇ ಶಿವಶರಣಶರಣೆಯರ ಪಾಲಿನ ವ್ರತವಾಗಿತ್ತು. ಆದ್ದರಿಂದಲೇ ಬಹಿರಂಗದಲ್ಲಿ ಮಾಡುತ್ತಿರುವ ಯಾವುದೇ ಬಗೆಯ ಪೂಜೆಯ ಆಚರಣೆಗಳನ್ನು ಅವರು ಒಳ್ಳೆಯ ನಡೆನುಡಿಗಳಿಗಿಂತ ದೊಡ್ಡದೆಂದು ನಂಬಿರಲಿಲ್ಲ.

ಇತರರ ನಡೆನುಡಿಗಳಲ್ಲಿ ಕಂಡು ಬರುವ ಒಳ್ಳೆಯದನ್ನು ಕಡೆಗಣಿಸಿ, ಸದಾಕಾಲ ಅವರ ತಪ್ಪುಗಳನ್ನೇ ಹುಡುಕಿ ತೆಗೆತೆಗೆದು ಎತ್ತಿ ಆಡುತ್ತಿರುವ ವ್ಯಕ್ತಿಯು ತಾನೇ ಕೆಟ್ಟ ನಡೆನುಡಿಗಳಿಂದ ಕೂಡಿರುತ್ತಾನೆ ಎಂಬ ಇಂಗಿತವನ್ನು ಕೂಡ 'ವ್ರತಗೇಡಿ ವ್ರತಗೇಡಿ ಎಂಬವ ತಾನೆ ವ್ರತಗೇಡಿ' ಎಂಬ ಮಾತುಗಳಲ್ಲಿ ಕಾಣಬಹುದು.



36. ಸತ್ತು ಮುಂದೆ ನೀನೇನ ಕಾಬೆಯೊ
ಇಂದೆ ಇಂದೆಯೊ ಇಂದೆ ಮಾನವ. (500/177)

ಸತ್ತು=ಸಾವನ್ನಪ್ಪಿ/ಸಾವನ್ನು ತಂದುಕೊಂಡು; ಮುಂದೆ=ಸತ್ತ ನಂತರದಲ್ಲಿ; ನೀನ್+ಏನ; ಏನ=ಯಾವುದನ್ನ; ಕಾಣ್=ನೋಡು/ತಿಳಿ; ಕಾಣ್ಬೆ>ಕಾಬೆ; ಕಾಬೆ=ಕಾಣುವೆ/ನೋಡುವೆ; ಕಾಬೆಯೋ=ನೋಡುವೆಯೋ/ಕಾಣುವೆಯೋ;

ಸತ್ತು ಮುಂದೆ ನೀನೇನ ಕಾಬೆಯೊ="ಸತ್ತ ನಂತರ ಮತ್ತೇನನ್ನೂ ನೀನು ಕಾಣುವೆಯೋ ಅಂದರೆ ಏನನ್ನೂ ಕಾಣಲಾರೆ" ಎನ್ನುವ ನುಡಿಗಳ ಮೂಲಕ ಜನಸಮುದಾಯದ ಮನದಲ್ಲಿರುವ ಕೆಲವು ಕಲ್ಪನೆಗಳನ್ನು ಕುರಿತು ಚಿಂತಿಸಲಾಗಿದೆ.

ವ್ಯಕ್ತಿಯು ಸತ್ತ ನಂತರ ತಾನು ಮಾಡಿದ ಒಳ್ಳೆಯ ಇಲ್ಲವೇ ಕೆಟ್ಟ ನಡೆನುಡಿಗಳಿಗೆ ತಕ್ಕಂತೆ ಸ್ವರ್ಗ ಇಲ್ಲವೇ ನರಕಕ್ಕೆ ಹೋಗುತ್ತಾನೆ ಎನ್ನುವ ಪರಲೋಕದ ಕಲ್ಪನೆ ಮತ್ತು ವ್ಯಕ್ತಿಯ ದೇಹದಿಂದ ಹೊರಬಂದ ಆತ್ಮ (ಉಸಿರು/ಪ್ರಾಣ) ಮತ್ತೊಂದು ಜೀವಿಯಾಗಿ ಈ ಜಗತ್ತಿನಲ್ಲಿ ಹುಟ್ಟಿಬರುತ್ತದೆ ಎನ್ನುವ ಪುನರ್ ಜನ್ಮದ ಕಲ್ಪನೆಯನ್ನು ಶಿವಶರಣಶರಣೆಯರು ನಿರಾಕರಿಸಿದ್ದರು.

ವ್ಯಕ್ತಿಯು ಹುಟ್ಟಿನಿಂದ ಸಾವಿನ ತನಕ ಈ ಜಗತ್ತಿನಲ್ಲಿ ತನ್ನ ಒಳಿತಿಗಾಗಿ ಹಂಬಲಿಸುವಂತೆಯೇ ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಾಳುವುದು ಅವರ ಪಾಲಿಗೆ ದೊಡ್ಡ ಸಂಗತಿಯಾಗಿತ್ತು. ವ್ಯಕ್ತಿಯ ಒಳ್ಳೆಯ ನಡೆನುಡಿಯಿಂದ ಜೀವನದಲ್ಲಿ ಉಂಟಾಗುವ ಒಲವು ನಲಿವು ನೆಮ್ಮದಿಯ ಜೀವನವೇ ಸ್ವರ್ಗ; ಕೆಟ್ಟ ನಡೆನುಡಿಯಿಂದ ಜೀವನದಲ್ಲಿ ಉಂಟಾಗುವ ಸಾವು ನೋವು ದುರಂತವೇ ನರಕ ಎನ್ನುವ ನಿಲುವನ್ನು ತಳೆದಿದ್ದರು.

ಮಾನವ ಸಮುದಾಯದಲ್ಲಿ ಹಸಿವು, ಬಡತನ, ಅಂಗ ವಿಕಲತೆ ಮತ್ತು ರೋಗರುಜಿನಗಳಿಂದ ಬಳಲುತ್ತಿರುವವರೆಲ್ಲರೂ ತಾವು ಹಿಂದಿನ ಜನ್ಮದಲ್ಲಿ ಮಾಡಿದ ಪಾಪಕ್ಕೆ ತಕ್ಕ ದಂಡನೆಯನ್ನು ಪಡೆಯುತ್ತಿದ್ದಾರೆ ಎಂಬ ಸಂಗತಿಯನ್ನು ಪುನರ್ ಜನ್ಮದ ನಂಬಿಕೆಯು ಜನಮನದಲ್ಲಿ ಬೇರೂರಿಸಿತ್ತು. ಇದನ್ನು ಶಿವಶರಣಶರಣೆಯರು ಅಲ್ಲಗಳೆದು ಜನರ ಸಂಕಟಕ್ಕೆ ನಿಸರ್ಗದಲ್ಲಿ ಉಂಟಾಗುವ ಆಗುಹೋಗುಗಳು ಮತ್ತು ಮಾನವರೇ ಕಟ್ಟಿಕೊಂಡಿರುವ ಸಮಾಜದಲ್ಲಿ ಆಡಳಿತದ ಗದ್ದುಗೆಯಲ್ಲಿರುವ ವ್ಯಕ್ತಿಗಳು ಹಾಗೂ ಸಿರಿವಂತರು ಜಾತಿ, ಮತ, ದೇವರ ಹೆಸರಿನಲ್ಲಿ ಮಾಡುತ್ತಿರುವ ವಂಚನೆಯೇ ಕಾರಣವೆಂಬುದನ್ನು ಜನರಿಗೆ ತಿಳಿಯಹೇಳಿದರು.

ವ್ಯಕ್ತಿಯು ಸತ್ತ ನಂತರ ಹೆಣವು ಮಣ್ಣು ಇಲ್ಲವೇ ಬೂದಿಯಾಗಿ 'ನೆಲ–ಬೆಂಕಿ–ನೀರು–ಗಾಳಿ'ಯಲ್ಲಿ ಬೆರತುಹೋಗುತ್ತದೆ ಎನ್ನುವ ವಾಸ್ತವವನ್ನು "ಸತ್ತು ಮುಂದೆ ನೀನೇನು ಕಾಬೆಯೊ" ಎಂಬ ನುಡಿಗಳು ಸೂಚಿಸುತ್ತಿವೆ;

ಇಂದು=ಈ ದಿನ/ಗಳಿಗೆ/ಸಮಯ; ಇಂದೆ=ಈ ಗಳಿಗೆಯಲ್ಲಿಯೇ/ಈ ಸಮಯದಲ್ಲಿಯೇ; ಇಂದೆಯೊ=ಜೀವಂತವಾಗಿರುವಾಗ/ಬದುಕಿರುವಾಗ; ಮಾನವ=ವ್ಯಕ್ತಿ;

**ಇಂದೆ ಇಂದೆಯೊ ಇಂದೆ ಮಾನವ=ವ್ಯಕ್ತಿಯು ತಾನು ಜೀವಂತವಾಗಿರುವ ಕೊನೆ ಗಳಿಗೆಯ ತನಕ ಅಂದರೆ ಸಾವು ತಾನಾಗಿಯೇ ಬರುವ ತನಕ ಒಳ್ಳೆಯದನ್ನು ಮಾಡುತ್ತ, ತನ್ನನ್ನು ಒಳಗೊಂಡು ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಾಳುತ್ತಿರಬೇಕೆ ಹೊರತು, ಬದುಕಿಗೆ ಬೆನ್ನು ತೋರಿಸಿ ತನ್ನ ಸಾವನ್ನು ತಾನೇ ತಂದುಕೊಳ್ಳಬಾರದು.**



37. ಸಮುದ್ರದಾಚೆಯ ತಡಿಯಲ್ಲಿ
ಕಳ್ಳನ ಕಂಡು
ಇಲ್ಲಿಂದ ಮುನಿದು ಬೈದರೆ
ಅವ ಸಾಯಬಲ್ಲನೆ. (459/173)

ಸಮುದ್ರದ+ಆಚೆಯ; ಸಮುದ್ರ=ಕಡಲು/ಸಾಗರ; ಆಚೆ=ಅತ್ತ ಕಡೆ/ಮತ್ತೊಂದು ತುದಿ; ತಡಿ+ಅಲ್ಲಿ; ತಡಿ=ದಡ/ತೀರ/ದಂಡೆ; ಕಳ್ಳ=ಇತರರ ಒಡವೆ ವಸ್ತುಗಳನ್ನು ಕದಿಯುವುದನ್ನೇ ಕಸುಬನ್ನಾಗಿ ಮಾಡಿಕೊಂಡಿರುವ ವ್ಯಕ್ತಿ/ಚೋರ; ಕಂಡು=ನೋಡಿ;

ಇಲ್ಲಿ+ಇಂದ; ಇಲ್ಲಿ=ಇತ್ತ/ಈಚೆಯ ದಡ; ಇಲ್ಲಿಂದ=ಈಚೆಯ ದಡದಲ್ಲಿ ನಿಂತುಕೊಂಡು;

ಮುನಿ=ಸಿಟ್ಟಾಗು/ಕೋಪಗೊಳ್ಳು/ಆಕ್ರೋಶಗೊಂಡು; ಬಯ್=ನಿಂದಿಸು/ತೆಗಳು; ಬೈದರೆ=ಬಯ್ದರೆ/ಬಯ್ಯಲು ತೊಡಗಿದರೆ/ಶಪಿಸಿದರೆ; ಅವ=ಅವನು/ಆ ಕಳ್ಳನು; ಸಾಯ್=ಮರಣ ಹೊಂದುವುದು/ಜೀವ ಹೋಗುವುದು; ಸಾಯಬಲ್ಲನೆ= ಸಾಯುತ್ತಾನೆಯೆ/ನಾಶವಾಗುತ್ತಾನೆಯೆ.

**ಈ ಸಂಗತಿಯು ಒಂದು ರೂಪಕವಾಗಿ ಬಳಕೆಗೊಂಡಿದೆ. ವ್ಯಕ್ತಿಯ/ಕುಟುಂಬದ/ ಸಮಾಜದ ವ್ಯವಹಾರದಲ್ಲಿ ಯಾವುದೇ ಬಗೆಯ ತೊಡಕು/ತೊಂದರೆ/ಸಮಸ್ಯೆ ಉಂಟಾದಾಗ, ಅದಕ್ಕೆ ಕಾರಣವೇನೆಂಬುದನ್ನು ಸರಿಯಾಗಿ ತಿಳಿದುಕೊಂಡು, ಎಲ್ಲಿ ತಪ್ಪು ಆಗಿದೆಯೋ ಅದನ್ನು ಸರಿಪಡಿಸಿಕೊಂಡು ಬಾಳುವಂತಹ ಕೆಲಸವಾಗಬೇಕೆ ಹೊರತು ಬಯ್ಯುವಿಕೆಯಲ್ಲಿ ತೊಡಗುವುದರಿಂದ ಇಲ್ಲವೇ ಒಬ್ಬರ ಮೇಲೆ ಮತ್ತೊಬ್ಬರು ಆರೋಪವನ್ನು ಹೊರಿಸುವುದರಿಂದ ಯಾವುದೇ ಪ್ರಯೋಜನವಿಲ್ಲ.**



**38. ಸಹಜವ ನುಡಿದಡೆ**
**ಸೇರುವರಿಲ್ಲ ಕಾಣಿರಣ್ಣಾ**
**ಅಸಹಜಕ್ಕಲ್ಲದೆ**
**ಲೋಕ ಭಜಿಸದು. (1555–284)**

ಸಹಜ=ಇರುವುದು/ದಿಟವಾದುದು/ವಾಸ್ತವವಾಗಿರುವುದು/ಸರಿಯಾಗಿರುವುದು; ನುಡಿದಡೆ=ನುಡಿದರೆ/ಹೇಳಿದರೆ; ಸೇರುವರು+ಇಲ್ಲ; ಸೇರು=ಜತೆಯಾಗುವುದು/ಹೊಂದಿಕೊಳ್ಳುವುದು/ಕೂಡುವುದು; ಸೇರುವರಿಲ್ಲ=ಮೆಚ್ಚುವುದಿಲ್ಲ/ಒಪ್ಪಿಕೊಳ್ಳುವುದಿಲ್ಲ/ಜತೆಗೂಡುವುದಿಲ್ಲ;

ಕಾಣಿರಿ+ಅಣ್ಣ; ಕಾಣಿರಿ=ನೋಡಿರಿ/ತಿಳಿದುಕೊಳ್ಳಿ; ಅಣ್ಣ=ಗಂಡಸರೊಡನೆ ಮಾತನಾಡುವಾಗ ವ್ಯಕ್ತಿಯು ತನ್ನ ಒಲವು ನಲಿವು ಆದರವನ್ನು ಸೂಚಿಸಲು ಬಳಸುವ ಪದ. ಕೆಲವೊಮ್ಮೆ ಅಣಕ/ವ್ಯಂಗ್ಯ/ಹಾಸ್ಯ ಮಾಡುವಾಗಲು 'ಅಣ್ಣ' ಎಂಬ ಪದವನ್ನು ಚುಚ್ಚು ನುಡಿಯಾಗಿ ಬಳಸಲಾಗುತ್ತದೆ;

ಸಹಜವ ನುಡಿದರೆ ಸೇರುವರಿಲ್ಲ=ವ್ಯಕ್ತಿಯು ಇರುವುದನ್ನು ಇದ್ದಂತೆ ಹೇಳಿದರೆ ಇಲ್ಲವೇ ಕಂಡದ್ದನ್ನು ಕಂಡಂತೆ ನುಡಿದರೆ ಅಂತಹ ವ್ಯಕ್ತಿಗೆ ಜನರಿಂದ ಹೆಚ್ಚು ಮನ್ನಣೆಯು ದೊರೆಯುವುದಿಲ್ಲ;

ಅಸಹಜಕ್ಕೆ+ಅಲ್ಲದೆ; ಅಸಹಜ=ದಿಟವಲ್ಲದ್ದು/ನಿಜವಲ್ಲದ್ದು/ವಾಸ್ತವಕ್ಕೆ ದೂರವಾದುದು; ಅಸಹಜಕ್ಕೆ=ಸುಳ್ಳು ಸಂಗತಿಗಳಿಗೆ/ದಿಟವಲ್ಲದ ವಿಚಾರಗಳಿಗೆ/ಜನರ ಮನದಲ್ಲಿ ಸಂಶಯ, ಹಗೆತನ ಮತ್ತು ಸೇಡಿನ ಒಳಮಿಡಿತಗಳನ್ನು ಕೆರಳಿಸುವಂತಹ ಸಂಗತಿಗಳಿಗೆ; ಅಲ್ಲದೆ=ಅಂತಹ ವಿಚಾರಗಳಿಗೆ ಮಾತ್ರ;

ಲೋಕ=ಜಗತ್ತು/ಪ್ರಪಂಚ/ಜನಸಮುದಾಯ; ಭಜನೆ=ದೇವರ ನಾಮವನ್ನು/ಮಂತ್ರಗಳನ್ನು ದೊಡ್ಡ ದನಿಯಲ್ಲಿ ವಾದ್ಯಗಳ ನಾದದ ಜತೆಗೂಡಿ ಹಾಡುವುದು/ಉಚ್ಚರಿಸುವುದು; ಭಜಿಸು=ಮೆಚ್ಚಿಕೊಂಡು ಕೊಂಡಾಡುವುದು/ನಂಬಿಕೊಂಡು ಹೊಗಳುವುದು;

ಅಸಹಜಕ್ಕಲ್ಲದೆ ಲೋಕ ಭಜಿಸದು=ಲೋಕದ ಜನರು ಅಸಹಜವಾದುದನ್ನು ಮೆಚ್ಚಿ ಕೊಂಡಾಡುತ್ತಾರೆಯೇ ಹೊರತು ಸಹಜವಾದುದನ್ನು ಮೆಚ್ಚಿಕೊಳ್ಳುವುದಿಲ್ಲ.

**ಸುಳ್ಳಿನ, ಕೆಟ್ಟತನದ, ಹಗೆತನದ, ಕ್ರೂರತನದ ಸಂಗತಿಗಳನ್ನು ಜನರು ಬಹುಬೇಗ ನಂಬುತ್ತಾರೆಯೇ ಹೊರತು ನಿಜವಾದ, ಒಳ್ಳೆಯ, ಪ್ರೀತಿಯ, ಕರುಣೆಯಿಂದ ಕೂಡಿದ ಸಂಗತಿಗಳನ್ನು ಕಡೆಗಣಿಸುತ್ತಾರೆ ಎಂಬ ತಿರುಳಿನಲ್ಲಿ ಬಳಕೆಯಾಗಿದೆ. 'ನಿಜವು ನಾಲ್ಕು ಹೆಜ್ಜೆಗಳನ್ನಿಡುವ ಸಮಯಕ್ಕೆ, ಸುಳ್ಳು ಇಡೀ ಜಗತ್ತನ್ನೆ ಸುತ್ತಿ ಬಂದಿರುತ್ತದೆ' ಎಂಬ ಮಾತು ಜನಬಳಕೆಯಲ್ಲಿದೆ.**



39. ಸಾವನ್ನಕ್ಕರ ಶ್ರವವ ಮಾಡಿದಡೆ
ಇನ್ನು ಕಾದುವ ದಿನವಾವುದು
ಬಾಳುವನ್ನಕ್ಕರ ಭಜಿಸುತ್ತಿದ್ದಡೆ
ತಾನಹ ದಿನವಾವುದು. (1559/284)

ಸಾವು+ಅನ್ನಕ್ಕರ; ಸಾವು=ಮರಣ; ಅನ್ನಕ್ಕರ=ವರೆಗೆ/ತನಕ; ಸಾವನ್ನಕ್ಕರ= ಸಾಯುವ ತನಕ/ಜೀವನದ ಕೊನೆಗಾಲದವರೆಗೆ; ಶ್ರವ=ಕತ್ತಿ, ಗದೆ, ಗುರಾಣಿ, ಬಿಲ್ಲು ಬಾಣ ಮುಂತಾದ ಹತಾರಗಳನ್ನು ಬಳಸಿಕೊಂಡು ರಣರಂಗದಲ್ಲಿ ಶತ್ರುವಿನ ಎದುರು ಹೋರಾಟ ಮಾಡುವುದಕ್ಕಾಗಿ ಪಡೆಯುವ ತರಬೇತಿ; ಮಾಡಿದಡೆ=ಮಾಡಿದರೆ; ಕಾದು=ಹೋರಾಡು/ಕದನ ಮಾಡು; ದಿನ+ಆವುದು; ಆವುದು=ಯಾವುದು;

ಸಾವನ್ನಕ್ಕರ ಶ್ರವವ ಮಾಡಿದಡೆ=ವ್ಯಕ್ತಿಯು ತಾನು ಸಾಯುವ ದಿನದವರೆಗೂ ಹೋರಾಟಕ್ಕೆ ತಯಾರಿಯನ್ನು ಮಾಡಿಕೊಳ್ಳುವ ತರಬೇತಿಯಲ್ಲೇ ಮಗ್ನನಾಗಿದ್ದರೆ; ಇನ್ನು ಕಾದುವ ದಿನವಾವುದು=ರಣರಂಗದಲ್ಲಿ ಹೋರಾಟ ಮಾಡುವುದು ಯಾವಾಗ;

ಬಾಳುವ+ಅನ್ನಕ್ಕರ; ಬಾಳು=ಜೀವನ/ಬದುಕು; ಬಾಳುವನ್ನಕ್ಕರ=ಬದುಕಿರುವ ತನಕ; ಭಜಿಸುತ್ತ+ಇದ್ದಡೆ; ಭಜಿಸು=ದೇವರ ನಾಮ ಸ್ಮರಣೆಯನ್ನು ಮಾಡುವುದು; ಇದ್ದಡೆ=ಇದ್ದರೆ; ತಾನ್+ಅಹ; ತಾನ್=ವ್ಯಕ್ತಿಯು; ಅಹ=ಆಗುವ;

ತಾನಹ ದಿನ=ವ್ಯಕ್ತಿಯು ಒಳ್ಳೆಯ ನಡೆನುಡಿಗಳಿಂದ ಬಾಳಿ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ವ್ಯಕ್ತಿತ್ವವನ್ನು ಗಳಿಸಿಕೊಳ್ಳುವ ಕಾಲ;

**"ಹೋರಾಡಲೆಂದು ತರಬೇತಿಯನ್ನು ಪಡೆಯುವ ಮತ್ತು ದೇವರ ಒಲವನ್ನು ಪಡೆಯಲೆಂದು ನಾಮ ಸ್ಮರಣೆಯನ್ನು ಮಾಡುವ" ಈ ಎರಡು ಸಂಗತಿಗಳು ರೂಪಕಗಳಾಗಿ ಬಳಕೆಯಾಗಿವೆ.**

**ಜೀವನದ ಉದ್ದಕ್ಕೂ ಸತ್ಯ ನೀತಿ ನ್ಯಾಯದ ಬಗ್ಗೆ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾ, ಅವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡು ಬಾಳದೆ ಮತ್ತು ಏನೊಂದು ಕೆಲಸವನ್ನೂ ಮಾಡದೆ ಕಾಲವನ್ನು ನೂಕುತ್ತ, ಇತರರ ದುಡಿಮೆಯಿಂದ ತನ್ನ ಬದುಕನ್ನು ನಡೆಸುತ್ತಿರುವ ಪರಾವಲಂಬಿಯಾದ ವ್ಯಕ್ತಿಯ ನಡೆನುಡಿಯನ್ನು ವಿಡಂಬನೆ ಮಾಡಲಾಗಿದೆ.**



**40. ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ.(123–148)**

ಸಾಸವೆ+ಅಷ್ಟು; ಸಾಸವೆ=ಒಂದು ಬಗೆಯ ಕಾಳು. ಇದನ್ನು ಅಡುಗೆಯಲ್ಲಿ ಒಗ್ಗರಣೆಯನ್ನು ಹಾಕಲು ಬಳಸುತ್ತಾರೆ. ರಾಗಿಯ ಕಾಳಿನಂತೆ ತುಂಬಾ ಚಿಕ್ಕದಾಗಿರುತ್ತೆ; ಅಷ್ಟು=ಆ ರೀತಿಯ ಗಾತ್ರ/ಅಳತೆ; ಸುಖ=ಆನಂದ/ನೆಮ್ಮದಿ/ನಲಿವು/ಹಿಗ್ಗು;

ಸಾಗರ+ಅಷ್ಟು; ಸಾಗರ=ಕಡಲು/ಸಮುದ್ರ; ದುಃಖ=ಸಂಕಟ/ನೋವು/ವೇದನೆ/ಕಳವಳ/ಅಳಲು; ನೋಡು=ಕಾಣು/ತಿಳಿ; ನೋಡಾ=ಅರಿತುಕೊಳ್ಳುವುದು/ತಿಳಿದುಕೊಳ್ಳುವುದು;

ವ್ಯಕ್ತಿಯ ಹುಟ್ಟಿನಿಂದ ಸಾವಿನ ತನಕ ಉಂಟಾಗುವ ನೋವು ನಲಿವಿನ ಸಂಗತಿಗಳಲ್ಲಿ ನೋವಿನ ಸಂಗತಿಗಳೇ ಹೆಚ್ಚಾಗಿರುತ್ತವೆ. ಏಕೆಂದರೆ ಯಾವುದೇ ವ್ಯಕ್ತಿಯ ಜೀವನದ ಏಳುಬೀಳುಗಳಿಗೆ ಅವನೊಬ್ಬನ ನಡೆನುಡಿಗಳನ್ನೇ ಅವಲಂಬಿಸಿರುವುದಿಲ್ಲ. ಕುಟುಂಬದಲ್ಲಿರುವ ವ್ಯಕ್ತಿಗಳ ಜತೆಯಲ್ಲಿ ಹೊಂದಿರುವ ನಂಟು ಮತ್ತು ಸಹಮಾನವರೊಡನೆ ಪಡೆದಿರುವ ಒಡನಾಟವೆಲ್ಲವೂ ವ್ಯಕ್ತಿಯ ಬದುಕಿನ ಆಗುಹೋಗುಗಳಿಗೆ ಕಾರಣವಾಗುತ್ತವೆ.

ಜೀವನದ ಅನೇಕ ಸನ್ನಿವೇಶಗಳಲ್ಲಿ ವ್ಯಕ್ತಿಯು ತನ್ನದಲ್ಲದ ತಪ್ಪಿಗೆ ಬಲಿಯಾಗಬೇಕಾಗುತ್ತದೆ. ತನ್ನ ಮತ್ತು ತನ್ನವರು ಎನಿಸಿಕೊಂಡವರ ಬದುಕಿನಲ್ಲಿ ಉಂಟಾಗುವ ರೋಗರುಜಿನಗಳು, ಅವಗಡಗಳು, ಬಡತನ ಮತ್ತು ಅಪಮಾನದ ಪ್ರಸಂಗಗಳು ಹೆಚ್ಚಿನ ನೋವನ್ನು ಉಂಟುಮಾಡುತ್ತಿರುತ್ತವೆ.

ಅತಿ ಚಿಕ್ಕದಾಗಿರುವ ಸಾಸವೆಯ ಕಾಳನ್ನು ವ್ಯಕ್ತಿಯ ಬದುಕಿನ ನಲಿವಿಗೆ ಮತ್ತು ಅತಿ ವಿಸ್ತಾರವಾಗಿಯೂ ಆಳವಾಗಿಯೂ ಇರುವ ಸಾಗರದ ಪ್ರಮಾಣವನ್ನು ವ್ಯಕ್ತಿಯ ಬದುಕಿನಲ್ಲಿ ಉಂಟಾಗುವ ನೋವಿಗೆ ರೂಪಕಗಳನ್ನಾಗಿ ಚಿತ್ರಿಸಲಾಗಿದೆ.



**41. ಸೂಜಿಯ ಪೋಣಿಸಿ ದಾರವ ಮರೆದಡೆ**
**ಹೊಲಿಗೆ ಬಿಚ್ಚದೆ ಗುಹೇಶ್ವರ. (408/170)**

ಸೂಜಿ=ಬಟ್ಟೆಯನ್ನು ಹೊಲಿಯುವಾಗ ಬಳಸುವ ಲೋಹದಿಂದ ಮಾಡಿದ ಒಂದು ಚಿಕ್ಕ ಉಪಕರಣ; ಪೋಣಿಸು=ಸೂಜಿಯ ಚಿಕ್ಕ ರಂದ್ರಕ್ಕೆ ದಾರವನ್ನು ಸೇರಿಸುವುದು; ದಾರ=ನೂಲು/ಎಳೆ; ಮರೆದಡೆ=ಮರೆತು ಬಿಟ್ಟರೆ;

ಹೊಲಿಗೆ=ಸೂಜಿಗೆ ದಾರವನ್ನು ಪೋಣಿಸಿ ಅಗತ್ಯಕ್ಕೆ ತಕ್ಕಂತೆ ಬಟ್ಟೆಯ ತುಂಡುಗಳನ್ನು ಹೊಲಿಯುವುದು ಇಲ್ಲವೇ ಜತೆಗೂಡಿಸುವುದು;

ಬಿಚ್ಚು=ಬೇರೆಯಾಗುವುದು/ಕಳಚಿಕೊಳ್ಳುವುದು; ಬಿಚ್ಚದೆ=ಬೇರೆ ಬೇರೆಯಾಗದಿರುವುದೆ/ಬಿಟ್ಟುಕೊಳ್ಳದಿರುವುದೆ/ಜತೆಗೂಡುವುದಿಲ್ಲ; ಹೊಲಿಗೆ ಬಿಚ್ಚದೆ= ದಾರವಿಲ್ಲದೆ ಬರಿ ಸೂಜಿಯಿಂದ ಬಟ್ಟೆಯ ತುಂಡುಗಳನ್ನು ಹೊಲಿಯುವುದಕ್ಕೆ ಆಗುವುದಿಲ್ಲ; ಗುಹೇಶ್ವರ=ಶಿವ/ಅಲ್ಲಮನ ಮೆಚ್ಚಿನ ದೇವರು/ಅಲ್ಲಮನ ವಚನಗಳಲ್ಲಿ ಬಳಕೆಯಾಗಿರುವ ಅಂಕಿತನಾಮ;

**ವ್ಯಕ್ತಿಯು ಯಾವುದೇ ಒಂದು ಕೆಲಸವನ್ನು ಕಯ್ಗೊಂಡಾಗ, ಅದನ್ನು ಮೊದಲಿನಿಂದ ಕೊನೆಯ ತನಕ ಒಲವು ನಲಿವು ಮತ್ತು ಆಸಕ್ತಿಯಿಂದ ಮಾಡದಿದ್ದರೆ, ಆ ಕೆಲಸವು ಜರುಗುವುದಿಲ್ಲವೆಂಬ ವಾಸ್ತವವನ್ನು ಸೂಜಿ–ದಾರ–ಹೊಲಿಗೆಯ ರೂಪಕದ ಮೂಲಕ ಹೇಳಲಾಗಿದೆ.**



42. ಹಸಿವುಳ್ಳನ್ನಕ್ಕ ವ್ಯಾಪಾರ ಬಿಡದು
ಸೀತ ಉಳ್ಳನ್ನಕ್ಕ ಉಪಾಧಿಕೆ ಬಿಡದು
ಮಾತುಳ್ಳನ್ನಕ್ಕ ಬೂಟಾಟಿಕೆ ಬಿಡದು (1593–287)

ಹಸಿವು+ಉಳ್+ಅನ್ನಕ್ಕ; ಹಸಿವು=ಉಂಡು ತಿಂದು ಕುಡಿದು ಹೊಟ್ಟೆಯನ್ನು ತುಂಬಿಸಿಕೊಳ್ಳುವ ಅಗತ್ಯ. ಜೀವಿಯು ಉಳಿದು ಬೆಳೆದು ಬಾಳುವುದಕ್ಕೆ ಪ್ರತಿನಿತ್ಯವೂ ಹಸಿವನ್ನು ತಣಿಸಿಕೊಳ್ಳಲೇಬೇಕು; ಅನ್ನಕ್ಕ=ವರೆಗೆ/ತನಕ; ಉಳ್ಳನ್ನಕ್ಕ=ಇರುವ ವರೆಗೆ/ ಇರುವ ತನಕ;

ವ್ಯಾಪಾರ=ಏನನ್ನಾದರೂ ಕೊಡುವ ತೆಗೆದುಕೊಳ್ಳುವ ವ್ಯವಹಾರವನ್ನು ಇತರರೊಡನೆ ನಡೆಸುವುದು/ಒಂದಲ್ಲ ಒಂದು ಬಗೆಯ ಚಟುವಟಿಕೆಯಲ್ಲಿ ಇಲ್ಲವೇ ಕೆಲಸದಲ್ಲಿ ತೊಡಗಿರುವುದು; ಬಿಡು=ತೊರೆ/ತ್ಯಜಿಸು; ಬಿಡದು=ಬಿಡುವುದಿಲ್ಲ/ ಬಿಟ್ಟುಹೋಗುವುದಿಲ್ಲ/ಇದ್ದೇ ಇರುತ್ತದೆ;

ಶೀತ>ಸೀತ; ಸೀತ=ಚಳಿ ಮಳೆ ಗಾಳಿಯಿಂದ ಉಂಟಾಗುವ ತಣ್ಣನೆಯ ಕೊರೆತ/ ತಂಡಿ/ನೆಗಡಿ; ಉಪಾಧಿಕೆ=ತೊಂದರೆ/ಹಿಂಸೆ/ಯಾತನೆ; ಮಾತು+ಉಳ್+ಅನ್ನಕ್ಕರ; ಬೂಟಾಟಿಕೆ=ನಟನೆ/ಸೋಗು/ತೋರಿಕೆಯ ನಡೆನುಡಿ;

ವ್ಯಕ್ತಿಯು ಜೀವಂತವಾಗಿರುವ ತನಕ ನಿಸರ್ಗ ಸಹಜವಾಗಿ ಹಸಿವು ಮತ್ತು ರೋಗರುಜಿನಗಳಿಗೆ ಆತನ ದೇಹ ಒಳಗಾಗುತ್ತಿರುತ್ತದೆ. ಅಂತೆಯೇ ಸಾಮಾಜಿಕವಾಗಿ ಆತ ಇತರರೊಡನೆ ವ್ಯವಹರಿಸುವಾಗ ಸನ್ನಿವೇಶಕ್ಕೆ ತಕ್ಕಂತೆ ಎಲ್ಲಿ ಯಾವಾಗ ಯಾರೊಡನೆ ಹೇಗೆ ಮಾತನಾಡಬೇಕು ಇಲ್ಲವೇ ಮಾತನಾಡಬಾರದು ಎಂಬ ಎಚ್ಚರವನ್ನು ಹೊಂದಿರುತ್ತಾನೆ. ಏಕೆಂದರೆ ಮಾತು ಎಂಬುದು ಮನದಲ್ಲಿ ಮಿಡಿಯುವ ಒಳಮಿಡಿತಗಳನ್ನು ಮುಚ್ಚಿಟ್ಟುಕೊಳ್ಳುವ ಇಲ್ಲವೇ ಹೊರಹಾಕುವ ಉಪಕರಣವಾಗಿದೆ.

ಆದ್ದರಿಂದ ಒಬ್ಬ ವ್ಯಕ್ತಿಯು ಆಡುವ ಮಾತುಗಳು ನಿಜವೋ ಸುಳ್ಳೋ ಎಂಬುದನ್ನು ಬೇರೆಯವರು ಹೇಳಲಾಗದು. ವ್ಯಕ್ತಿಯು ತನ್ನ ಅನುಕೂಲಕ್ಕೆ ತಕ್ಕಂತೆ ಮಾತುಗಳನ್ನಾಡುವ ಕುಶಲತೆಯನ್ನು ಹೊಂದಿರುತ್ತಾನೆ . ಆದ್ದರಿಂದಲೇ ಮಾತು ಇರುವ ತನಕ ಬೇರೆಯವರನ್ನು ನಂಬಿಸುವ ಮತ್ತು ಮರುಳುಗೊಳಿಸುವ ಅಂದರೆ ಇತರರನ್ನು ವಂಚಿಸುವ ಬೂಟಾಟಿಕೆಯ ನಟನೆಯು ಮಾತಿನೊಡನೆ ಜತೆಗೂಡಿರುತ್ತದೆ.



## 43. ಹಿಂದನರಿಯದುದು ಮುಂದನೇನ ಬಲ್ಲುದೋ. (312/162)

ಹಿಂದು+ಅನ್+ಅರಿಯದುದು; ಹಿಂದು=ಈ ಮೊದಲು ನಡೆದಿರುವುದು/ಆಗಿರುವುದು; ಅನ್=ಅನ್ನು; ಅರಿ=ತಿಳಿ/ಕಲಿ; ಅರಿಯದುದು=ತಿಳಿದುಕೊಳ್ಳದಿರುವುದು/ಅರಿತುಕೊಳ್ಳದಿರುವುದು;

ಮುಂದು+ಅನ್+ಏನ; ಮುಂದು=ಬರಲಿರುವ ಕಾಲದಲ್ಲಿ ನಡೆಯಲಿರುವುದು/ಉಂಟಾಗುವುದು; ಏನ=ಯಾವುದನ್ನು ತಾನೆ; ಬಲ್=ತಿಳಿ/ಅರಿ; ಬಲ್ಲುದೋ= ತಿಳಿಯಲು/ಅರಿಯಲು/ಗೊತ್ತುಮಾಡಿಕೊಳ್ಳಲು ಆಗುತ್ತದೆಯೇ;

ಮುಂದನೇನ ಬಲ್ಲುದೋ=ಮುಂದೆ ಏನು ಮಾಡಬೇಕೆಂಬುದನ್ನು ತಿಳಿಯಲಾಗುವುದಿಲ್ಲ;

'ಹಿಂದನರಿಯುವುದು' ಎಂದರೆ ಪ್ರಾಚೀನ ಕಾಲದಿಂದಲೂ ಇಂದಿನ ತನಕ ಜನಸಮುದಾಯದ ಬದುಕನ್ನು ರೂಪಿಸಿ ಮುನ್ನಡೆಸುತ್ತಿರುವ ಸಂಗತಿಗಳನ್ನು ಅರಿತುಕೊಳ್ಳುವುದು. ಆ ಸಂಗತಿಗಳಲ್ಲಿ ಯಾವ ಬಗೆಯ ಸಂಗತಿಗಳು ಮಾನವ ಸಮುದಾಯಕ್ಕೆ ಒಳಿತನ್ನು ಇಲ್ಲವೇ ಕೆಡುಕನ್ನು ಮಾಡುತ್ತಿವೆ ಎಂಬುದನ್ನು ಒರೆಹಚ್ಚಿ ನೋಡಿ ಮಾನವನ ಬದುಕಿನ ಸಾಮಾಜಿಕ ವಾಸ್ತವವನ್ನು ತಿಳಿಯಬೇಕು.

ಈ ಬಗೆಯ ಅರಿವನ್ನು/ಎಚ್ಚರವನ್ನು ಪಡೆದಾಗ, ವ್ಯಕ್ತಿಯ ಮತ್ತು ಜನಸಮುದಾಯದ ನೆಮ್ಮದಿಯ ಬದುಕಿಗೆ ಹಾನಿಯನ್ನುಂಟುಮಾಡುವ ಸಂಪ್ರದಾಯಗಳನ್ನು ಮತ್ತು ಆಚರಣೆಗಳನ್ನು ತ್ಯಜಿಸಿ, ಒಳ್ಳೆಯ ನಡೆನುಡಿಗಳನ್ನು ಅಳವಡಿಸಿಕೊಂಡು ಬಾಳುವುದರ ಕಡೆಗೆ ಮುನ್ನಡೆಯಬಹುದು.



44. ಹಿಂದೆ ಎಷ್ಟು ಪ್ರಳಯ ಹೋಯಿತ್ತೆಂದರಿಯೆ
ಮುಂದೆ ಎಷ್ಟು ಪ್ರಳಯವಾಗುವುದೆಂದರಿಯೆ
ತನ್ನ ಸ್ಥಿತಿಯ ತಾನರಿದಡೆ
ಅದೇ ಪ್ರಳಯವಲ್ಲಾ. (655/189)

ಹಿಂದೆ=ಈ ಮೊದಲು/ಕಳೆದ ಹೋದ ಕಾಲದಲ್ಲಿ; ಎಷ್ಟು=ಯಾವ ಪ್ರಮಾಣದಲ್ಲಿ/ಯಾವ ಅಳತೆಯಲ್ಲಿ; ಪ್ರಳಯ=ಅಳಿವು/ಬದಲಾವಣೆ/ಸರ್ವನಾಶ;

ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಎಂಬ ಹೆಸರಿನ ನಾಲ್ಕು ಯುಗಗಳು ಒಂದರ ನಂತರ ಮತ್ತೊಂದು ಬಂದಿವೆ. ಒಂದು ಯುಗ ಕೊನೆಗೊಂಡು ಮತ್ತೊಂದು ಯುಗ ಹುಟ್ಟುವಾಗ ಒಂದು ಯುಗದಲ್ಲಿದ್ದ ಸಕಲ ಜೀವರಾಶಿಗಳು ನಾಶಗೊಂಡು ಮತ್ತೆ ಹೊಸದಾದ ಜೀವರಾಶಿಗಳು ಹುಟ್ಟಿಬರುತ್ತವೆ ಎಂಬ ಕಲ್ಪನೆಯು ಜನಸಮುದಾಯದ ಮನದಲ್ಲಿ ನೆಲೆಗೊಂಡಿದೆ.

ಹೋಯಿತ್ತು+ಎಂದು+ಅರಿಯೆ; ಹೋಗು=ತೆರಳು/ಗಮಿಸು/ದಾಟು; ಹೋಯಿತ್ತು=ಉಂಟಾಗಿದೆ/ನಡೆದಿದೆ; ಅರಿಯೆ=ಅರಿಯೆನು/ನನಗೆ ಗೊತ್ತಿಲ್ಲ/ನಾನು ತಿಳಿದಿಲ್ಲ; ಮುಂದೆ=ಬರಲಿರುವ ಕಾಲದಲ್ಲಿ/ಸಮಯದಲ್ಲಿ; ಪ್ರಳಯ+ಆಗುವುದು+ಎಂದು+ಅರಿಯೆ;

ತನ್ನ=ವ್ಯಕ್ತಿಯಲ್ಲಿರುವ; ಸ್ಥಿತಿ=ಇರವು/ಇರುವಿಕೆ/ಇರುವ ರೀತಿ; ತಾನ್+ಅರಿದಡೆ; ತಾನ್=ವ್ಯಕ್ತಿಯು; ಅರಿದಡೆ=ಅರಿತುಕೊಂಡರೆ/ತಿಳಿದುಕೊಂಡರೆ; ಅದೇ=ಆ ಬಗೆಯ ಬದಲಾವಣೆಯೇ/ಆ ರೀತಿಯ ನಡೆನುಡಿಗಳೇ; ಪ್ರಳಯ+ಅಲ್ಲಾ; ಅಲ್ಲಾ=ಅಲ್ಲವೇ;

**ತನ್ನ ಸ್ಥಿತಿಯ ತಾನರಿದಡೆ ಅದೇ ಪ್ರಳಯ=ವ್ಯಕ್ತಿಯ ನಡೆನುಡಿಯಲ್ಲಿ ಕೆಟ್ಟದ್ದು ನಾಶಗೊಂಡು ಒಳ್ಳೆಯದು ಮೂಡಿಬರುವುದನ್ನು/ಉಂಟಾಗುವ ಬದಲಾವಣೆಯನ್ನು ಸೂಚಿಸಲು 'ಪ್ರಳಯ' ಎಂಬ ಪದವನ್ನು ಒಂದು ರೂಪಕವಾಗಿ ಬಳಸಲಾಗಿದೆ.**

**ವ್ಯಕ್ತಿಯು ತನ್ನ ಮಯ್ ಮನಗಳನ್ನು ಕಾಡುತ್ತಿರುವ ಒಳಮಿಡಿತಗಳಲ್ಲಿ ಕೆಟ್ಟದ್ದು ಯಾವುದು/ಒಳ್ಳೆಯದು ಯಾವುದು ಎಂಬುದನ್ನು ತಾನೇ ತಿಳಿದುಕೊಂಡು, ಕೆಟ್ಟದ್ದನ್ನು ಹತ್ತಿಕ್ಕಿಕೊಂಡು ಒಳ್ಳೆಯದನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡು ಬಾಳಲು ತೊಡಗಿದರೆ, ಅದು ವ್ಯಕ್ತಿಯ ಜೀವನದಲ್ಲಿ ದೊಡ್ಡ ಬದಲಾವಣೆಯನ್ನು ತರುತ್ತದೆ.**



45. ಹೂ ಮಿಡಿಯ ಹರಿದು
ಒತ್ತಿ ಹಣ್ಣ ಮಾಡಿಹೆನೆಂದಡೆ
ಹಣ್ಣಾಗಬಲ್ಲುದೆ. (1602-288)

ಹೂ=ಹೂವು/ಕುಸುಮ; ಮಿಡಿ=ಹೀಚು; ಹೂಮಿಡಿ=ಎಳೆಯ ಕಾಯಿ/ಬಲಿಯದ ಚಿಕ್ಕಗಾತ್ರದ ಕಾಯಿ; ಹರಿದು=ಕಿತ್ತು ತಂದು; ಒತ್ತು=ಹಿಸುಕು/ಅದುಮು; ಹಣ್ಣು=ಚೆನ್ನಾಗಿ ಮಾಗಿ ರಸದಿಂದ ತುಂಬಿ ರುಚಿಕರವಾದ ಫಲ; ಮಾಡು+ಇಹೆನ್+ಎಂದರೆ; ಇಹೆನ್=ಇರುವೆನು; ಮಾಡಿಹೆನ್=ಮಾಡುವೆನು; ಎಂದರೆ=ಎಂದು ಹೇಳಿದರೆ; ಹಣ್ಣು+ಆಗಬಲ್ಲುದೆ; ಆಗಬಲ್ಲುದೆ=ಆಗುತ್ತದೆಯೇ; ಹಣ್ಣಾಗಬಲ್ಲುದೆ=ಹಣ್ಣಾಗುವುದೇ/ ಹಣ್ಣಾಗುವುದಿಲ್ಲ;

ಎಳಸು ಕಾಯಿ ಇಲ್ಲವೇ ಇನ್ನೂ ಬಲಿಯದ ಹೀಚುಕಾಯನ್ನು ಕಿತ್ತು ತಂದು, ವ್ಯಕ್ತಿಯು ತನ್ನ ಎರಡು ಅಂಗಯ್ ನಡುವೆ ಅದನ್ನು ಇಟ್ಟುಕೊಂಡು ಬಲವಾಗಿ ಅಮುಕುವುದರಿಂದ ಹೀಚುಕಾಯಿಯು ರಸದಿಂದ ತುಂಬಿದ ಹಣ್ಣಾಗುವುದಿಲ್ಲ. ಏಕೆಂದರೆ ಮರಗಿಡಬಳ್ಳಿಯ ಬೇರುಗಳಿಂದ ಸಾರವನ್ನು ಹೀರಿಕೊಂಡು ಕಾಯಿ ದೊಡ್ಡದಾಗುತ್ತ ಬೆಳೆದು, ಕಾಲಕ್ರಮೇಣ ಚೆನ್ನಾಗಿ ಮಾಗಿ ಹಣ್ಣಾದಾಗ ಮಾತ್ರ ಅದರಲ್ಲಿ ರಸ ತುಂಬುತ್ತದೆ. ಈ ರೀತಿ ಒಂದು ಕಾಯಿ ಹಣ್ಣಾಗಲು ಕಾಲ ಮತ್ತು ನಿಸರ್ಗ ಸಹಜವಾದ ಕ್ರಿಯೆಗಳು ಅಗತ್ಯ. ಈ ಸಂಗತಿಯು ಒಂದು ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ;

ಯಾವುದೇ ಒಂದು ಕೆಲಸವನ್ನು ಸರಿಯಾಗಿ ಮಾಡಬೇಕಾದರೆ, ಅದನ್ನು ಹಂತ ಹಂತವಾಗಿ ಮಾಡಬೇಕು. ಹಾಗೆ ಮಾಡದೆ, ಕಯ್ಗೊಂಡ ಕೂಡಲೇ ಮಾಡಿ ಮುಗಿಸಿ ಫಲವನ್ನು ಪಡೆಯಬೇಕೆಂದು ಆತುರಪಟ್ಟರೆ ಕೆಲಸವು ಹದಗೆಡುತ್ತದೆಯಲ್ಲದೆ, ಅದರಿಂದ ಯಾವ ಪ್ರಯೋಜನವೂ ದೊರೆಯುವುದಿಲ್ಲ.



## ಬರಹಗಾರ

**ಹೆಸರು:** ಸಿ.ಪಿ. ನಾಗರಾಜ (1945)

**ತಾಯಿ:** ಲಕ್ಷ್ಮಿದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

**ತಂದೆ:** ಪುಟ್ಟೇಗೌಡ, ಚೆಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

**ಓದು:** ಎಂ.ಎ., ಪಿಎಚ್.ಡಿ.,

**ಕೆಲಸ:** ಕನ್ನಡ ಅಧ್ಯಾಪಕ

1971–72 ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ

1972–2003 ಭಾರತಿ ಕಾಲೇಜು, ಕಾಳಮುದ್ದನ ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

2006–2021 ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

**ಬರಹ:** 1. **ಮುದ್ರಿತ ಪುಸ್ತಕಗಳು**

**ನಾಟಕ:** ಭಾಗೀರಥಿ — ಅಂಬೆ — ಹಾವು

ಅಂಗಿಬಟ್ಟೆ — ಒಂದು ರೂಪಾಯಿ — ಕಳ್ಳರಿದ್ದಾರೆ ಎಚ್ಚರಿಕೆ

ಹೆಣದ ಹಣ. — ಮೂರು ಸಾಮಾಜಿಕ ನಾಟಕಗಳು

**ಗದ್ಯ:** ಕರಿಯನ ಪುರಾಣ — ಕನಕನ ಅವ್ವ — ಹಳ್ಳಿಗಾಡಿನ ರೂವಾರಿ

ಡಾ. ಬಂದೀಗೌಡ — ಬಯ್ಗುಳ

ಸರ್ವಜ್ಞ ವಚನಗಳ ಓದು — ಅಲ್ಲಮ ವಚನಗಳ ಓದು

ಶಿವಶರಣೆಯರ ವಚನಗಳ ಓದು — ಶಿವಶರಣರ ವಚನಗಳ ಓದು

ಬಸವಣ್ಣ ವಚನಗಳ ಓದು — ಮುದ್ದೆ ಗಂಟು

ಶಿವಶರಣಶರಣೆಯರ ವಚನಗಳ ಓದು

ಪಂಪ ಭಾರತ ಓದು — ಸರ್ವಜ್ಞ ಮತ್ತು ಅಲ್ಲಮ ವಚನಗಳ ಓದು

ವಚನದಿಂದ ಆಯ್ದ ಸಾಲುಗಳ ಓದು

2. **ಮೈಲಾಂಗ್ ಡಿಜಿಟಲ್ ಪುಸ್ತಕಗಳು**

https://mylang.in/collection/cpnagaraja

ಏಳು ನಾಟಕಗಳು (ಇಬುಕ್); ಭಾಗೀರಥಿ (ನಾಟಕ–ಇಬುಕ್); ಅಂಬೆ (ನಾಟಕ–ಇಬುಕ್); ಹಾವು (ನಾಟಕ–ಇಬುಕ್); ಅಂಗಿ ಬಟ್ಟೆ (ನಾಟಕ–ಇಬುಕ್);

ಒಂದು ರೂಪಾಯಿ (ನಾಟಕ–ಇಬುಕ್); ಕಳ್ಳರಿದ್ದಾರೆ.. ಎಚ್ಚರಿಕೆ (ನಾಟಕ–ಇಬುಕ್); ಹೆಣದ ಹಣ( ನಾಟಕ–ಇಬುಕ್); ಶಿವಶರಣಶರಣೆಯರ ವಚನಗಳ ಓದು(ಇಬುಕ್);

ಬಯ್ಗುಳ (ಆಡಿಯೋ ಬುಕ್); ಸರ್ವಜ್ಞನ ವಚನಗಳ ಓದು (ಆಡಿಯೋ ಬುಕ್); ಅಲ್ಲಮನ ವಚನಗಳ ಓದು (ಆಡಿಯೋ ಬುಕ್); ಬಸವಣ್ಣನ ವಚನಗಳ ಓದು (ಆಡಿಯೋ ಬುಕ್); ಶಿವಶರಣಶರಣೆಯರ ವಚನಗಳ ಓದು–1–(ಆಡಿಯೋ ಬುಕ್); ಶಿವಶರಣಶರಣೆಯರ ವಚನಗಳ ಓದು–2–(ಆಡಿಯೋ ಬುಕ್); ವಚನದಿಂದ ಆಯ್ದ ಸಾಲುಗಳ ಓದು–1–(ಆಡಿಯೋ ಬುಕ್); ವಚನದಿಂದ ಆಯ್ದ ಸಾಲುಗಳ ಓದು–2–(ಆಡಿಯೋ ಬುಕ್); ಮುದ್ದೆಗಂಟು (ಆಡಿಯೋ ಬುಕ್).

3. **C P Nagaraj-You Tube**

**PLAY LISTS**

ಸರ್ವಜ್ಞನ ವಚನಗಳ ಓದು– 13 ಎಪಿಸೋಡ್

ಅಲ್ಲಮನ ವಚನಗಳ ಓದು– 36 ಎಪಿಸೋಡ್

ಬಸವಣ್ಣನ ವಚನಗಳ ಓದು– 26 ಎಪಿಸೋಡ್

ಶಿವಶರಣಶರಣೆಯರ ವಚನಗಳ ಓದು– 52 ಎಪಿಸೋಡ್

ವಚನದಿಂದ ಆಯ್ದ ಸಾಲುಗಳ ಓದು– 162 ಎಪಿಸೋಡ್

ಮುದ್ದೆಗಂಟು– 60 ಎಪಿಸೋಡ್

---

ವಿಳಾಸ: ಸಿ.ಪಿ.ನಾಗರಾಜ, 75, 'ಎ' ಬ್ಲಾಕ್, 5ನೆಯ ಕ್ರಾಸ್, ಕ್ರಿಷ್ಣ ಗಾರ್ಡನ್, ಆರ್.ವಿ. ಕಾಲೇಜು ಪೋಸ್ಟ್, ಬೆಂಗಳೂರು–560059, ಮೊ: 9986347521.
e-mail : ngy7777@gmail.com





- ಹಿರಿತನವು ಹೆಚ್ಚಿದಂಗೆ ಗುರುತನವು ಮೂಢಂಗೆ
ದೊರೆತನವು ನಾಚ ನಿಂಚಂಗೆ ಹೊರೆಬಿದರೆ
ಸರಿಯಿಲ್ಲ ಕೆಡಗು ಸರ್ವಜ್ಞ

- ಉಬ್ಬ ಸಂಭ್ರಮದಲ್ಲಿ
ಹಿಂದುಗಾಣರು ಮುಂದುಗಾಣರು
ತನ್ನ ತಾನರಿಯರು
ಇದು ಕಾರಣ
ಮೂರು ಲೋಕವೆಲ್ಲವೂ ಬರುಸೂರೆಹೋಯಿತ್ತು
ಗುಹೇಶ್ವರ

ನಾಗು ಸ್ಮಾರಕ ಪ್ರಕಾಶನ, ಬೆಂಗಳೂರು.

ರೂ. 200/-